ಕನ್ನಡ ಅಧ್ಯಯನ ಸಂಸ್ಥೆ

# ಪಂಪ - ನನ್ನಯ : ಒಂದು ಸಮೀಕ್ಷೆ

ಕೆ. ವೆಂಕಟರಾಮಪ್ಪ



ಮೈಸೂರು ವಿಶ್ವವಿದ್ಯಾನಿಲಯ : : ಮೈಸೂರು

ಕನ್ನಡ ಅಧ್ಯಯನ ಸಂಸ್ಥೆ

ಪಠ್ಯಪುಸ್ತಕ ಮಾಲೆ—೨೫

ಪ್ರಧಾನ ಸಂಪಾದಕ

ಡಾ. ಹಾ. ಮಾ. ನಾಯಕ

# ಪಂಪ-ನನ್ನಯ : ಒಂದು ಸಮೀಕ್ಷೆ

# ಪಂಪ-ನನ್ನಯ : ಒಂದು ಸಮೀಕ್ಷೆ

ಕೆ. ವೆಂಕಟರಾಮಪ್ಪ

ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
೧೯೭೧

# ಮುನ್ನುಡಿ

ಕನ್ನಡ ಭಾಷೆ ಸಾಹಿತ್ಯಗಳ ಸರ್ವತೋಮುಖವಾದ ಬೆಳವಣಿಗೆಯನ್ನು ಸಾಧಿಸುವ ದೃಷ್ಟಿಯಿಂದ 1966ರ ಕೊನೆಯಲ್ಲಿ ಕನ್ನಡ ಅಧ್ಯಯನ ಸಂಸ್ಥೆ ಪ್ರಾರಂಭವಾಯಿತು. ಈಗ್ಗೆ ಹತ್ತು ಹನ್ನೆರಡು ವರ್ಷಗಳಿಗೆ ಹಿಂದೆ ರಾಷ್ಟ್ರಕವಿ ಕುವೆಂಪು ಅವರ ಮಾರ್ಗ ದರ್ಶನದಲ್ಲಿ ರೂಪುಗೊಂಡಿದ್ದ ಯೋಜನೆಗಳೆಲ್ಲ ಡಾ. ಶ್ರೀಮಾಲಿಯವರ ನೇತೃತ್ವದಲ್ಲಿ ಸಾಕಾರಗೊಳ್ಳತೊಡಗಿದುದಕ್ಕೆ ಕನ್ನಡ ಅಧ್ಯಯನ ಸಂಸ್ಥೆ ಸಾಕ್ಷಿಯಾಗಿದೆ. ಈಗ ಪ್ರೊಫೆಸರ್ ಜವರೇಗೌಡರು ನಮ್ಮ ವಿಶ್ವವಿದ್ಯಾನಿಲಯದ ಕುಲಪತಿಗಳಾಗಿರುವುದರಿಂದ ಈ ಸಂಸ್ಥೆಯ ಚಟುವಟಿಕೆಗಳು ತೀವ್ರತರವಾಗಿ ಬೆಳೆಯುವುವೆಂದು ನಿರೀಕ್ಷಿಸ ಬಹುದಾಗಿದೆ. ಕನ್ನಡ ಸ್ನಾತಕೋತ್ತರ ಶಿಕ್ಷಣ ಮತ್ತು ಸಂಶೋಧನ ವಿಭಾಗ, ಸ್ನಾತಕೋತ್ತರ ಭಾಷಾಂತರ ಡಿಪ್ಲೊಮಾ ಶಿಕ್ಷಣ, ಕನ್ನಡೇತರರಿಗಾಗಿ ಕನ್ನಡ ಸರ್ಟಿಫಿಕೇಟ್ ಮತ್ತು ಡಿಪ್ಲೊಮಾ ಶಿಕ್ಷಣ ಇವುಗಳ ಜೊತೆಗೆ ಇಂದು ಸಂಸ್ಥೆಯಲ್ಲಿ ಐದು ಪ್ರಮುಖ ವಿಭಾಗಗಳಿವೆ : (1) ಸಂಪಾದನ ವಿಭಾಗ (2) ಭಾಷಾಂತರ ಮತ್ತು ಪಠ್ಯಪುಸ್ತಕ ವಿಭಾಗ, (3) ಜಾನಪದ ವಿಭಾಗ, (4) ಕನ್ನಡ ವಿಶ್ವಕೋಶ ವಿಭಾಗ ಮತ್ತು (5) ಹರಿದಾಸ ಸಾಹಿತ್ಯ ಸಂಪಾದನ ಮತ್ತು ಸಂಶೋಧನ ವಿಭಾಗ. ಸಂಸ್ಥೆಯ ಬಹುಮುಖವಾದ ಚಟುವಟಿಕೆಗಳ ಪ್ರತೀಕವಾಗಿವೆ ಈ ವಿಭಾಗಗಳು.

ವಿಶ್ವವಿದ್ಯಾನಿಲಯದ ಎಲ್ಲ ಹಂತಗಳಲ್ಲಿಯೂ ಕನ್ನಡವನ್ನು ಶಿಕ್ಷಣ ಮಾಧ್ಯಮ ವನ್ನಾಗಿ ಬಳಸಬೇಕೆಂಬ ನೀತಿಗನುಗುಣವಾಗಿ ಭಾಷಾಂತರ ಮತ್ತು ಪಠ್ಯಪುಸ್ತಕ ವಿಭಾಗವನ್ನು ಸ್ಥಾಪಿಸಲಾಗಿದೆ. ವಿಜ್ಞಾನ ಮತ್ತು ಮಾನವಿಕ ಶಾಸ್ತ್ರಗಳಿಗೆ ಸಂಬಂಧ ಪಟ್ಟ ಪಠ್ಯಪುಸ್ತಕಗಳು ಮತ್ತು ಸಂದರ್ಭ ಗ್ರಂಥಗಳನ್ನು ಹೊರತರುವುದೇ ಈ ವಿಭಾಗದ ಮುಖ್ಯ ಉದ್ದೇಶ. ಮೂರು ರೀತಿಯಲ್ಲಿ ಈ ಕಾರ್ಯವನ್ನು ನೆರವೇರಿಸಬೇಕೆಂದು ಯೋಚಿಸಲಾಗಿದೆ : (1) ಸಮರ್ಥ ಲೇಖಕರಿಂದ ಗ್ರಂಥಗಳನ್ನು ಬರೆಸುವುದು, (2) ಪ್ರಸಿದ್ಧ ಆಕರ, ಸಂದರ್ಭ ಗ್ರಂಥಗಳನ್ನು ತಜ್ಞರಿಂದ ಭಾಷಾಂತರಿಸುವುದು ಮತ್ತು (3) ಸಂಸ್ಥೆಯ ಕಾರ್ಯಕರ್ತರೇ ಸಾಧ್ಯವಾದಷ್ಟು ಗ್ರಂಥಗಳನ್ನು ಭಾಷಾಂತರಿಸುವುದು. ಈಗಾಗಲೇ ವಿವಿಧ ವಿಷಯಗಳಿಗೆ ಸಂಬಂಧಿಸಿದ 50 ಗ್ರಂಥಗಳು ಹೊರಬಂದಿವೆ. ಈ ವರ್ಷದ ಒಳಗಾಗಿ ಸುಮಾರು 35 ಗ್ರಂಥಗಳು ಹೊರಬರುವ ನಿರೀಕ್ಷೆಯಿದೆ. ವೈಜ್ಞಾನಿಕ ಗ್ರಂಥಗಳ ರಚನೆಯಲ್ಲಿ ಎದುರಿಸಬಹುದಾದ ಸಮಸ್ಯೆಗಳನ್ನು ಪರಿಹರಿಸುವತ್ತಲೂ ಗಮನ ಕೊಡಲಾಗಿದೆ. ತಜ್ಞ ವಿದ್ವಾಂಸರುಗಳು ಒಂದುಗೂಡಿ ‘ ಪಾರಿಭಾಷಿಕ ಕೋಶ ’ಗಳನ್ನು ತಯಾರಿಸುತ್ತಿದ್ದಾರೆ. ಈಗಾಗಲೇ ‘ ಮನೋವಿಜ್ಞಾನ ಕೋಶ ’ ಹೊರಬಂದಿದೆ. ‘ ಭಾಷಾ ವಿಜ್ಞಾನ ಕೋಶ ’ ಅಚ್ಚಿನ ಮನೆಗೆ ಹೋಗಲಿದೆ. ಇಂಥ ಇನ್ನೂ ಒಂಬತ್ತು ಕೋಶಗಳು ಸಿದ್ಧವಾಗುತ್ತಿವೆ. ಈ ಎಲ್ಲ ಯೋಜನೆ, ನೆರವು

ಮತ್ತು ಪ್ರೋತ್ಸಾಹಗಳಿಂದಾಗಿ ಮುಂದಿನ ನಾಲ್ಕು ವರ್ಷಗಳಲ್ಲಿ ಸುಮಾರು 250 ಗ್ರಂಥಗಳನ್ನು ಹೊರತರಬಹುದೆಂಬ ನಂಬಿಕೆಯಿದೆ. ಇವುಗಳ ಜೊತೆಗೆ ಸ್ನಾತಕಪೂರ್ವ, ಸ್ನಾತಕ ಮತ್ತು ಸಾತಕೋತ್ತರ ಹಂತಗಳಿಗೆ ಅಗತ್ಯವಾದ ಭಾಷಾ ಪಠ್ಯಪುಸ್ತಕಗಳನ್ನು ಹೊರತರಲಾಗುತ್ತಿದೆ. ಸಂಕಲಿತ, ಸಂಪಾದಿತ ಪಠ್ಯ ಗ್ರಂಥಗಳು ಈ ವರ್ಗಕ್ಕೆ ಸೇರುತ್ತವೆ. ಈ ಕಾರ್ಯದಲ್ಲಿ 'ಸಂಪಾದನ ವಿಭಾಗ' ನಮಗೆ ನೆರವಾಗುತ್ತಿದೆ.

ಸಂದರ್ಭ ಗ್ರಂಥಗಳು, ಆಕರ ಗ್ರಂಥಗಳು ಪಠ್ಯಪುಸ್ತಕಗಳಿಗೆ ಪೂರಕವಾಗಿ, ಪ್ರೇರಕವಾಗಿ, ಪೋಷಕವಾಗಿ, ಇರುವಂಥವು; ಬೆನ್ನೆಲುಬಾಗಿ ಇರುವಂಥವು. ಪಠ್ಯಪುಸ್ತಕಗಳ ವಿಷಯ ಸಂಪತ್ತಿಗೆ, ನಿರೂಪಿತ ವಿಚಾರಗಳ ನಿರ್ದುಷ್ಟತೆ, ನಿಖರತೆ ಮತ್ತು ಪ್ರಾಮಾಣಿಕತೆಗೆ ಅವು ಒರೆಗಲ್ಲಾಗಿರುತ್ತವೆ. ಶಾಖೋಪಶಾಖೆಗಳಾಗಿ ಒಡೆದು ನಿಲ್ಲುವ ಹೆಮ್ಮರಕ್ಕೆ ತಾಯಿಬೇರು ಹೇಗೋ ಜ್ಞಾನಕ್ಷೇತ್ರಕ್ಕೆ ಆಕರ ಗ್ರಂಥಗಳೂ, ಸಂದರ್ಭ ಗ್ರಂಥಗಳೂ ಹಾಗೆ. ಪಠ್ಯಪುಸ್ತಕಗಳು ಅಲ್ಪಾಯುಗಳು. ಹೊಸ ಹೊಸ ಸಂಶೋಧನೆಗಳ ಬೆಳಕಿನಲ್ಲಿ, ವಿಚಾರಗಳ ಮತ್ತು ಪರಿಸ್ಥಿತಿಗಳ ಹಿನ್ನೆಲೆಯಲ್ಲಿ ಆಗಿಂದಾಗ್ಗೆ ಅವುಗಳನ್ನು ಪರಿಷ್ಕರಿಸಬೇಕಾಗುತ್ತದೆ, ಪುನರ್‌ರಚಿಸಬೇಕಾಗುತ್ತದೆ, ಹೊಸ ಹೊಸ ಅಂಶಗಳನ್ನು ಸೇರಿಸಬೇಕಾಗುತ್ತದೆ, ತಿದ್ದುಪಡಿಗಳನ್ನು ಮಾಡಬೇಕಾಗುತ್ತದೆ. ಸಂದರ್ಭ ಗ್ರಂಥಗಳು ಮತ್ತು ಆಕರ ಗ್ರಂಥಗಳು ಈ ಎಲ್ಲ ಪ್ರಕ್ರಿಯೆಗಳಿಗೆ ಸಂಪೂರ್ಣವಾಗಿ ಹೊರತಲ್ಲವಾದರೂ ಅವುಗಳು ಸಾರುವ ಸತ್ಯಗಳು, ತತ್ತ್ವಗಳು, ಸೂತ್ರಗಳು ಬಹುಮಟ್ಟಿಗೆ ದೇಶ-ಕಾಲಗಳ ಉಪಹತಿಯನ್ನು ಮೀರಿ ನಿಲ್ಲುತ್ತವೆ. ಹೀಗಾಗಿ ಅವು ಸಾರ್ವಕಾಲಿಕವಾಗಿ ಪರಿಣಮಿಸುತ್ತವೆ ಅಥವಾ ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಇತರ ದೇಶ-ಕಾಲಗಳಿಗೆ ಅನ್ವಯವಾಗುವ ವೈಶಿಷ್ಟ್ಯವನ್ನು ಪಡೆದುಕೊಂಡಿರುತ್ತವೆ. ಆಕರ ಗ್ರಂಥಗಳು, ಸಂದರ್ಭ ಗ್ರಂಥಗಳು ಆಯಾ ಕ್ಷೇತ್ರದಲ್ಲಿನ ಪ್ರಾಜ್ಞ ವಿದ್ವಾಂಸರ ಆಲೋಚನಾಶಕ್ತಿ, ಜ್ಞಾನಾನ್ವೇಷಣೆ ಮತ್ತು ವಿಚಾರವಂತಿಕೆಗೆ ಸಾಕ್ಷಿಯಾಗಿರುತ್ತವೆ. ಆದ್ದರಿಂದ ಪಠ್ಯಪುಸ್ತಕಗಳ ಜೊತೆಗೆ ಅಮೂಲ್ಯವಾದ ಆಕರ ಗ್ರಂಥಗಳ, ಸಂದರ್ಭ ಗ್ರಂಥಗಳ ಸಂಪತ್ತನ್ನೂ ಹೆಚ್ಚಿಸಿಕೊಂಡು ಹೋಗಬೇಕಾದ್ದು ಅಗತ್ಯ, ಅನಿವಾರ್ಯ.

ಆಕರ ಗ್ರಂಥಗಳು, ಸಂದರ್ಭ ಗ್ರಂಥಗಳು ಭಾಷೆಯ ಶಕ್ತಿಗೂ ಒರೆಗಲ್ಲಾಗುತ್ತವೆ. ಸೀಮಿತವಾದಷ್ಟು ಅಥವಾ ಆವಶ್ಯಕವಾದಷ್ಟು ಪಾರಿಭಾಷಿಕ ಪದಸಂಗ್ರಹವನ್ನು ಬಳಸಿ ಪಠ್ಯಪುಸ್ತಕಗಳನ್ನು ರಚಿಸಬಹುದು; ಆವಶ್ಯಕವೆಂದು ಕಂಡುಬಂದಲ್ಲಿ ವಿವರಣೆಗಳನ್ನು ನೀಡಬಹುದು, ವಿಚಾರಗಳನ್ನು ಲಂಬಿಸಬಹುದು, ಉದಾಹರಣೆಗಳ ಮೂಲಕ ವಿಶದಪಡಿಸಬಹುದು. ಆದರೆ ವಿಚಾರ, ವಿವರಣೆ ಮತ್ತು ವಿಶದೀಕರಣಗಳ ದೃಷ್ಟಿಯಿಂದ ಹಿತಮಿತವಾಗಿ, ಸ್ಪಷ್ಟವಾಗಿ ನಿರ್ದುಷ್ಟವಾಗಿ ನಿಖರವಾಗಿ ವಿಚಾರಗಳನ್ನು ವ್ಯಕ್ತಪಡಿಸುವಾಗ ಭಾಷೆ ಪರೀಕ್ಷೆಗೊಳಗಾಗುತ್ತದೆ. ಅದರ ಸುಪ್ತಶಕ್ತಿಗಳು ಹೊರಹೊಮ್ಮುತ್ತವೆ, ಸಿಡಿದೇಳುತ್ತವೆ, ಕಿಡಿಗೆದರುತ್ತವೆ, ಭಾಷೆಯ ಸಂಪತ್ತು ಸಮೃದ್ಧವಾಗುತ್ತದೆ. ಭಾಷೆ ಎಲ್ಲ ಬಗೆಯ ವಿಚಾರಾಭಿವ್ಯಕ್ತಿಗೂ ಸಮರ್ಥ ವಾಹಕವಾಗುತ್ತದೆ.

ಯಾವುದೇ ಭಾಷೆಯಲ್ಲಿನ ಮಾನವಿಕ ಅಥವಾ ವೈಜ್ಞಾನಿಕ ಸಾಹಿತ್ಯ ನಿರಂತರ ವಾಗಿ ಭಾಷಾಂತರಗಳನ್ನು ಅವಲಂಬಿಸಿಕೊಂಡಿರುವುದು ಸಾಧ್ಯವಿಲ್ಲ. ಗ್ರಂಥ ಅಚ್ಚಾಗಿ ಹೊರಬರುವ ಹೊತ್ತಿಗಾಗಲೇ ನೂತನ ವಿಚಾರಗಳು ಹೊರಬಂದು ಗ್ರಂಥ ಹಳೆಯದಾಗಿ ಬಿಡುವಂತಹ ಸಂದರ್ಭಗಳಿರುವಾಗ (ಇಂಗ್ಲಿಷಿನಂಥ ಭಾಷೆಯಲ್ಲೂ ಕೂಡ) ಅಂಥ ಗ್ರಂಥ ಭಾಷಾಂತರವಾಗಿ ಹೊರಬೀಳುವ ಹೊತ್ತಿಗೆ ಮತ್ತಷ್ಟು ಹಳೆಯದಾಗಿ ಬಿಟ್ಟಿರುತ್ತದೆ. ಹೀಗಾಗಿ ಹೊಸ ಹೊಸ ಮೌಲಿಕ ಅಥವಾ ಸ್ವತಂತ್ರ ಗ್ರಂಥಗಳನ್ನು ರಚಿಸಬೇಕಾಗುತ್ತದೆ. ಇಲ್ಲವಾದರೆ ಈ ಪ್ರಗತಿಪಥದಲ್ಲಿ ಹೆಗಲೆಣೆಯಾಗಿ ನಡೆಯಲಾರದೆ ಆ ಭಾಷೆ ಮತ್ತು ಆ ಭಾಷೆಯನ್ನಾಡುವ ಜನ ಹಿಂದೆ ಬೀಳುತ್ತಾರೆ. ಮೇಲಾಗಿ ಒಂದು ಭಾಷೆಯಲ್ಲಿ ರಚಿತ ವಾಗುವ ಸ್ವತಂತ್ರ ಗ್ರಂಥಗಳ ಸಂಖ್ಯೆ ಆಯಾ ಜನತೆಯ ಸಂಶೋಧನಾಶಕ್ತಿ, ವಿನೂತನ ವಿಚಾರಗ್ರಹಣ ಸಾಮರ್ಥ್ಯ, ಬುದ್ಧಿ ಪ್ರಖರತೆ ಮತ್ತು ಪ್ರತಿಭೆಯ ಸಂಕೇತವಾಗಿರುತ್ತದೆ. ಕಾಲದೊಡನೆ ಸರಿಜೋಡಿಯಾಗಿ ಸಾಗಬೇಕಾದ್ದು ಅಪೇಕ್ಷಣೀಯ, ಅನಿವಾರ್ಯ.

ಈ ದೃಷ್ಟಿಯಿಂದ ಸ್ವತಂತ್ರ ಗ್ರಂಥಗಳ ರಚನೆ ವಿಶೇಷ ಪ್ರೋತ್ಸಾಹಕ್ಕೆ ಅರ್ಹ ವಾಗಿದೆ. ಈ ಅಂಶವನ್ನು ಗಮನಿಸಿ ವಿಶ್ವವಿದ್ಯಾನಿಲಯ ಬಹುಮಾನ ಯೋಜನೆ ಯೊಂದನ್ನು ಜಾರಿಗೆ ತಂದಿತ್ತು. ಈ ಯೋಜನೆಯ ಅಂಗವಾಗಿ ಮೊದಲ ಹಂತದಲ್ಲಿ ಮಾನವಿಕಗಳಲ್ಲಿ ಮನೋವಿಜ್ಞಾನಕ್ಕೂ, ವಿಜ್ಞಾನಗಳಲ್ಲಿ ಭೌತವಿಜ್ಞಾನ ಮತ್ತು ರಸಾಯನ ವಿಜ್ಞಾನಿಗಳಿಗೂ ಬಹುಮಾನ ಯೋಜನೆಯೊಂದನ್ನು ಜಾರಿಗೆ ಕೊಡ ಲಾಗಿತ್ತು. ಈ ವರ್ಷ ಸಸ್ಯ ವಿಜ್ಞಾನ, ಪ್ರಾಣಿ ವಿಜ್ಞಾನ, ಸಿವಿಲ್ ಎಂಜಿನಿಯರಿಂಗ್ ಮತ್ತು ಅರ್ಥವಿಜ್ಞಾನಗಳನ್ನು ಈ ಯೋಜನೆಗೆ ಒಳಪಡಿಸಲಾಗಿದೆ. ಮುಂಬರುವ ವರ್ಷಗಳಲ್ಲಿ ಈ ಯೋಜನೆಯನ್ನು ಇತರ ವಿಭಾಗಗಳಿಗೂ ವಿಸ್ತರಿಸಲಾಗುತ್ತದೆ.

ಪ್ರತಿಭೆಯಲ್ಲಿ, ವಿದ್ವತ್ತಿನಲ್ಲಿ, ಸಂಶೋಧನಾಸಕ್ತಿಯಲ್ಲಿ, ಆಧುನಿಕ ವಿಚಾರಶೀಲತೆ ಯಲ್ಲಿ ಯಾರಿಗೂ ಕಡಿಮೆ ಇಲ್ಲದ ನಮ್ಮ ಅಧ್ಯಾಪಕವರ್ಗ ವಿಷಯ ಸಂಪತ್ತನ್ನು ಸಮೃದ್ಧ ಗೊಳಿಸಿಕೊಂಡಿರುವುದರ ಜೊತೆಗೆ ಕನ್ನಡ ಭಾಷೆಯ ಜಾಯಮಾನಕ್ಕೆ ಅನುಗುಣ ವಾದ ನಿರೂಪಣ ಪದ್ಧತಿಯನ್ನೂ ಅಳವಡಿಸಿಕೊಳ್ಳಬೇಕಾಗಿದೆ. ವಿಚಾರ ಪರಿಷ್ಕೃತ ವಾಗಿರುವ ಅನೇಕ ಗ್ರಂಥಗಳು ಭಾಷೆಯ ದೃಷ್ಟಿಯಿಂದ ಕುಂಟುತ್ತವೆಂಬುದು ಲೇಖಕರ ಮತ್ತು ಓದುಗರ ಅಭಿಪ್ರಾಯವಾಗಿದೆ. ಈ ದೃಷ್ಟಿಯಿಂದ ಕನ್ನಡ ಭಾಷೆಯ ಬಳಕೆಯ ವಿಚಾರದಲ್ಲಿ 'ಬೇಸಿಗೆ ಶಿಬಿರ'ವೊಂದನ್ನು ಏರ್ಪಡಿಸಲಾಗಿತ್ತು. ಈ ಬಗೆಯ ಲೇಖನ ಕಾರ್ಯದಲ್ಲಿ ಎದುರಾಗುವ ಸಮಸ್ಯೆಗಳನ್ನು ಚರ್ಚಿಸುವುದು, ಕೆಲವಾದರೂ ಮಾರ್ಗ ದರ್ಶಿ ಸೂತ್ರಗಳನ್ನು ಕಂಡುಕೊಳ್ಳುವುದು ಈ ಯೋಜನೆಯ ಉದ್ದೇಶವಾಗಿತ್ತು. ಮೊದಲ ಶಿಬಿರದಲ್ಲಿ 17 ಮಂದಿ ವಿಜ್ಞಾನ ಪಠ್ಯಪುಸ್ತಕ ಬರಹಗಾರರು ಒಂದುಗೂಡಿ ಕನ್ನಡದಲ್ಲಿ ವಿಜ್ಞಾನ ಪಠ್ಯಪುಸ್ತಕ ರಚನೆ ಮತ್ತು ಬೋಧನೆಗೆ ಸಂಬಂಧಿಸಿದ ಸಮಸ್ಯೆ ಗಳನ್ನು ಚರ್ಚಿಸಿದರು. ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಕಂಡುಕೊಂಡರು. ಶಿಬಿರದ ಕಾರ್ಯಕಲಾಪಗಳನ್ನು ಇಷ್ಟರಲ್ಲಿಯೇ ಪುಸ್ತಕರೂಪದಲ್ಲಿ ಹೊರತರಲಾಗುತ್ತದೆ. ಈ

ಶಿಬಿರದಲ್ಲಿ ಗಳಿಸಿದ ಅನುಭವ ಮತ್ತು ಪ್ರತಿಫಲಗಳ ಆಧಾರದ ಮೇಲೆ ಆ ಯೋಜನೆಯನ್ನು ಮತ್ತಷ್ಟು ವಿಸ್ತರಿಸಲಾಗುತ್ತದೆ. ಈ ಎಲ್ಲ ಪ್ರೇರಣೆ, ಪ್ರೋತ್ಸಾಹಗಳ ಫಲವಾಗಿ ಕನ್ನಡದಲ್ಲಿ ಸ್ವತಂತ್ರ ಗ್ರಂಥಗಳ ಉತ್ತಮ ಫಸಲು ಮೂಡಿಬರುವುದೆಂದು ನಂಬಿದ್ದೇವೆ.

ಬೇರೆ ಬೇರೆ ಸಾಹಿತ್ಯಗಳ ಪರಸ್ಪರ ತುಲನೆ ಒಂದು ಅಧ್ಯಯನ ವಿಷಯವಾಗಿ ಶಾಸ್ತ್ರಭಾಗವಾಗಿ ಈಗ ಅಸ್ತಿತ್ವಕ್ಕೆ ಬರುತ್ತಿದೆ. ಅಮೆರಿಕ ಯೂರೋಪುಗಳಲ್ಲಿ ತೌಲನಿಕ ಸಾಹಿತ್ಯ ಸ್ವತಂತ್ರವಾಗಿ ರೂಪುಗೊಳ್ಳುತ್ತಿದೆ. ಅನೇಕ ವಿಶ್ವವಿದ್ಯಾನಿಲಯಗಳಲ್ಲಿ ಈ ಅಧ್ಯಯನಕ್ಕಾಗಿ ಪ್ರತ್ಯೇಕ ವಿಭಾಗಗಳನ್ನೇ ತೆರೆದಿರುವುದುಂಟು. ನಮ್ಮ ದೇಶದಲ್ಲಿಯೂ ಕಲ್ಕತ್ತೆಯ ಜಾದವಪುರ ವಿಶ್ವವಿದ್ಯಾನಿಲಯದಲ್ಲಿ ಕೆಲವು ವರ್ಷಗಳ ಹಿಂದೆ ತೌಲನಿಕ ಸಾಹಿತ್ಯ ವಿಭಾಗವೊಂದನ್ನು ಆರಂಭಿಸಿದರು. ಪೂರ್ಣಪ್ರಮಾಣದಲ್ಲಿ ಅದೇ ರಾಷ್ಟ್ರದ ಮೊದಲ ಪ್ರಯತ್ನ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಎಂ.ಎ. ಪಠ್ಯಕ್ರಮದಲ್ಲಿ ಕಳೆದ ಅನೇಕ ವರ್ಷಗಳಿಂದ ತೌಲನಿಕ ಸಾಹಿತ್ಯವನ್ನು ಕುರಿತ ಒಂದು ಪತ್ರಿಕೆಯಿದೆ. ಅದರಲ್ಲಿ ವಿವಿಧ ಸಾಹಿತ್ಯಪ್ರಕಾರಗಳಿಗೆ ಸಂಬಂಧಿಸಿದಂತೆ ಮುಖ್ಯವಾಗಿ ಕನ್ನಡ, ಸಂಸ್ಕೃತ ಹಾಗೂ ಇಂಗ್ಲಿಷ್ ( ಕೆಲವೊಮ್ಮೆ ಇಂಗ್ಲಿಷ್ ಮೂಲಕ ಬೇರೆ ಬೇರೆ ಐರೋಪ್ಯ ) ಸಾಹಿತ್ಯ ಕೃತಿಗಳನ್ನು ಒಟ್ಟೊಟ್ಟಿಗೆ ಅಭ್ಯಾಸಮಾಡುವ ಅವಕಾಶವಿದೆ. ತೌಲನಿಕ ಸಾಹಿತ್ಯ ಕೇವಲ ಎರಡು ಅಥವಾ ಮೂರು ಸಾಹಿತ್ಯಗಳ ಪಾರ್ಶ್ವಿಕ ತುಲನೆ ಮಾತ್ರವಲ್ಲ; ಜನಾಂಗಗಳ ಜೀವಾಳವನ್ನು ಬೆಸೆಯುವ, ರಾಷ್ಟ್ರೀಯ ಮನೋಧರ್ಮಗಳನ್ನು ಒಟ್ಟಾಗಿ ಪರಿಶೀಲಿಸುವ ಆ ಮೂಲಕ ಮಾನವೀಯತೆಯನ್ನೇ ಸ್ಪಷ್ಟವಾಗಿ ಅರ್ಥೈಸುವ ಪ್ರಯತ್ನ. ರಾಷ್ಟ್ರೀಯ ಭಾವೈಕ್ಯದ ಮಾತು ಬಹುವಾಗಿ ಕೇಳಿಬರುತ್ತಿರುವ ನಮ್ಮ ದೇಶದ ಇಂದಿನ ಪರಿಸ್ಥಿತಿಯಲ್ಲಿ ತೌಲನಿಕ ಸಾಹಿತ್ಯದ ಪಾತ್ರ ತುಂಬ ಮಹತ್ವದ್ದೆಂಬುದನ್ನು ನಾವು ಗಮನಿಸಬೇಕು. ಈ ರಾಷ್ಟ್ರದ ಆಂತರಿಕ ಏಕತೆ ಸಾಹಿತ್ಯದಲ್ಲಿ ದೃಢಪಟ್ಟಿರುವ ಹಾಗೆ ಇನ್ನೊಂದು ಕ್ಷೇತ್ರದಲ್ಲಿಲ್ಲ. ಇದನ್ನು ಅರಿತೇ ಕಳೆದ ವರ್ಷ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಭಾರತೀಯ ಸಾಹಿತ್ಯವನ್ನು ಕುರಿತ ಸ್ನಾತಕೋತ್ತರ ಡಿಪ್ಲೊಮಾ ತರಗತಿಗಳನ್ನು ಆರಂಭಿಸಲಾಯಿತು. ವ್ಯಾಪಕವಾದ ಭಾಷಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ವಿವಿಧ ಭಾರತೀಯ ಭಾಷೆಗಳ ಸಾಹಿತ್ಯವನ್ನು ಒಂದು ಚೌಕಟ್ಟಿನಲ್ಲಿ ನೋಡುವುದೇ ಈ ತರಗತಿಗಳ ಉದ್ದೇಶ. ಇಲ್ಲಿ ಒಂದು ರಾಷ್ಟ್ರೀಯ ಸಾಹಿತ್ಯದ ಕಲ್ಪನೆಗೆ ರೂಪು ಕೊಡಲಾಗುತ್ತದೆ. ನಮ್ಮ ದೇಶದ ವಿದ್ಯಾವಂತರಿಗೆ ರಷ್ಯನ್, ಜರ್ಮನ್, ಫ್ರೆಂಚ್ ಮುಂತಾದ ಸಾಹಿತ್ಯಗಳ ಬಗೆಗೆ ತಿಳಿದಿರುವಷ್ಟು, ಅನ್ಯ ಭಾರತೀಯ ಭಾಷಾ ಸಾಹಿತ್ಯಗಳ ಬಗೆಗೆ ತಿಳಿದಿರುವುದಿಲ್ಲ. ಈ ಕೊರತೆಯನ್ನು ಹೋಗಲಾಡಿಸಲು ತೌಲನಿಕ ಸಾಹಿತ್ಯ ಅಧ್ಯಯನ ಸ್ವಲ್ಪಮಟ್ಟಿಗಾದರೂ ನೆರವಾಗುತ್ತದೆ.

ತೌಲನಿಕ ಸಾಹಿತ್ಯಕ್ಕೆ ಸಂಬಂಧಿಸಿದ ಸಾಹಿತ್ಯವಾದರೂ ನಮ್ಮಲ್ಲಿ ಇಲ್ಲ. ಈ ಹಿಂದೆ ಕೇವಲ ಒಬ್ಬಿಬ್ಬರು ಅಂಥ ಪ್ರಯತ್ನಗಳನ್ನು ಮಾಡಿರುವುದುಂಟು. ಈಗ ಪ್ರಕಟವಾಗುತ್ತಿರುವ ಶ್ರೀ ಕೆ. ವೆಂಕಟರಾಮಪ್ಪನವರ ‘ ಪಂಪ-ನನ್ನಯ : ಒಂದು ಸಮೀಕ್ಷೆ ’

ಈ ಕ್ಷೇತ್ರದ ಒಂದು ಮಹತ್ವದ ಪ್ರಯತ್ನ ಎಂದು ನಾನು ಭಾವಿಸಿದ್ದೇನೆ. ನೆರೆಹೊರೆಯ ಭಾಷೆಗಳಾದ ಕನ್ನಡ ತೆಲುಗುಗಳಲ್ಲಿ ಆದಿಕವಿಗಳೆಂದೂ, ಮಹಾಕವಿಗಳೆಂದೂ ಕೀರ್ತಿತರಾಗಿರುವ ಪಂಪ ಹಾಗೂ ನನ್ನಯ ಅವರ ಕೃತಿಗಳನ್ನು ಈ ಗ್ರಂಥದಲ್ಲಿ ತೌಲನಿಕವಾಗಿ ಸಮೀಕ್ಷಿಸಲಾಗಿದೆ ; ಒಂದು ಮೂಲದಿಂದ ಬೇರೆ ಬೇರೆ ಕವಲುಗಳಾಗಿ ವಿಕಸಿಸಿರುವ ಎರಡು ಮಹಾಕಾವ್ಯಗಳ ಸಾದೃಶ್ಯ ವೈದೃಶ್ಯಗಳನ್ನು ವಿಶ್ಲೇಷಿಸಿ ವಿಮರ್ಶಿಸಲಾಗಿದೆ ; ಮೂಲಕಥೆಯ ಬಳಕೆಯಲ್ಲಿ ಪಾತ್ರಗಳ ಬೆಳವಣಿಗೆಯಲ್ಲಿ ಸನ್ನಿವೇಶಗಳ ಪೋಷಣೆಯಲ್ಲಿ ಇಬ್ಬರು ಮಹಾಕವಿಗಳು ತೋರಿರುವ ನೈಪುಣ್ಯವನ್ನು ಪರೀಕ್ಷಿಸುವುದರ ಮೂಲಕ ಭಿನ್ನಭಿನ್ನವಾದ ಅವರ ಜೀವನ ದೃಷ್ಟಿಗಳನ್ನು ನಿರೂಪಿಸಲಾಗಿದೆ.

ನನ್ನಯ ಪಂಪನ ಕೃತಿಯನ್ನು ನೋಡಿದ್ದನೆ ? ಪಂಪನ ಪ್ರಭಾವ ನನ್ನಯನ ಮೇಲಾಗಿದೆಯೆ ? ಆಗಿದ್ದರೆ ಎಷ್ಟರಮಟ್ಟಿಗೆ ? ಈ ಮುಂತಾದ ಪ್ರಶ್ನೆಗಳು ಸಾಹಿತ್ಯದ ವಿದ್ಯಾರ್ಥಿಗಳಿಗೆ ತುಂಬ ಕುತೂಹಲಕಾರಿಯಾದವು. ಶ್ರೀ ವೆಂಕಟರಾಮಪ್ಪನವರು ಸಂಕ್ಷಿಪ್ತವಾಗಿ ಆದರೆ ಸಮಂಜಸವಾಗಿ ಈ ಸಮಸ್ಯೆಯನ್ನು ಚರ್ಚಿಸಿದ್ದಾರೆ. ಅವರು ಕೊಟ್ಟಿರುವ ಉದಾಹರಣೆಗಳು ನನ್ನಯ ಪ್ರತ್ಯಕ್ಷವಾಗಿಯೊ ಪರೋಕ್ಷವಾಗಿಯೊ ಪಂಪನ ಕೃತಿಯನ್ನು ಬಲ್ಲವನಾಗಿದ್ದನೆಂಬುದನ್ನೂ ಅದರ ಪ್ರಭಾವಕ್ಕೊಳಗಾಗಿದ್ದನೆಂಬುದನ್ನೂ ದೃಢಪಡಿಸುತ್ತವೆ. ಅವರು ಇನ್ನೂ ಕೂಲಂಕಷವಾಗಿ ಪರಿಶೀಲಿಸಬಹುದಾಗಿತ್ತೆಂದು ತೋರುತ್ತದೆ. ಇದು ಕೇವಲ ಸಂಶೋಧನ ಮಹತ್ವದ ಸಮಸ್ಯೆ. ಇದನ್ನು ಇನ್ನೂ ಸವಿವರವಾಗಿ ಅಧ್ಯಯನ ಮಾಡುವ ಅಗತ್ಯ ಇದ್ದೇ ಇದೆ. ಅದಕ್ಕೆ ಶ್ರೀ ವೆಂಕಟರಾಮಪ್ಪನವರು ಸಮರ್ಥವಾಗಿ ಹಾದಿ ಹಾಕಿದ್ದಾರೆ.

ಶ್ರೀ ವೆಂಕಟರಾಮಪ್ಪನವರು ತೆಲುಗನ್ನು ಮನೆಮಾತಾಡುವ ಕನ್ನಡ ವಿದ್ವಾಂಸರು. ತಮ್ಮ ಮನೆಮಾತನ್ನು ಕೇವಲ ಅಷ್ಟಕ್ಕೇ ನಿಲ್ಲಿಸದೆ ಅದರ ಸಾಹಿತ್ಯವನ್ನೂ ಆಳವಾಗಿ ಅಭ್ಯಾಸಮಾಡಿದ್ದಾರೆ. ಅವರು ಇಂಥ ಕೃತಿಗಳನ್ನು ರಚಿಸಲು ಬೇಕಾದ ಅರ್ಹತೆಗಳನ್ನೆಲ್ಲ ಪಡೆದಿದ್ದಾರೆ. ಕನ್ನಡ-ತೆಲುಗು ತೌಲನಿಕ ಕ್ಷೇತ್ರದಲ್ಲಿ ಅವರು ಇನ್ನೂ ಹೆಚ್ಚಿನ ಕೆಲಸಮಾಡುತ್ತಾರೆಂದು ನಾನು ಆಶಿಸಿದ್ದೇನೆ. ಪ್ರಕೃತ ಗ್ರಂಥಕ್ಕಾಗಿ ಅವರನ್ನು ನಾನು ಅಭಿನಂದಿಸುತ್ತೇನೆ. ಅವರು ವಿಶ್ವವಿದ್ಯಾನಿಲಯ ಧನಸಹಾಯ ಆಯೋಗದ ಸಂಶೋಧನ ಪ್ರಾಧ್ಯಾಪಕರಾಗಿದ್ದ ಅವಧಿಯಲ್ಲಿ ರಚಿಸಿದ ಕೃತಿಗಳಲ್ಲಿ ಇದೂ ಒಂದು. ಇದನ್ನು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಕಟಿಸುವ ಅವಕಾಶ ಕೊಟ್ಟಿದ್ದಕ್ಕಾಗಿ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಮೈಸೂರು
೮-೨-೧೯೭೧

ಹಾ. ಮಾ. ನಾಯಕ
ನಿರ್ದೇಶಕ.

# ಲೇಖಕರ ಮಾತು

ಪಂಪ ಮತ್ತು ನನ್ನಯಭಟ್ಟರ ಕಾವ್ಯೋದ್ದೇಶ, ಅನುವಾದ ವಿಧಾನ ಮತ್ತು ಕವಿತಾ ರೀತಿಗಳಲ್ಲಿ ಕಂಡುಬರುವ ಹೋಲಿಕೆಗಳನ್ನು ಗಮನಿಸಿ ಆ ಇಬ್ಬರು ಹಿರಿಯ ಕವಿಗಳ ಕೃತಿ ಸಮೀಕ್ಷೆ ನಡೆಸುವ ಒಂದು ಪ್ರಯತ್ನ ಇಲ್ಲಿ ನಡೆದಿದೆ. ಈ ಅಧ್ಯಯನ ಕಾರ್ಯಕ್ಕೆ ನನಗೆ ನೆರವು ನೀಡಿದ ವಿಶ್ವವಿದ್ಯಾನಿಲಯ ಧನಸಹಾಯ ಆಯೋಗದ ಸಮಿತಿಯವರಿಗೂ, ಆ ನೆರವನ್ನು ನನಗೆ ದೊರಕಿಸಿಕೊಟ್ಟ ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾದ ಪ್ರೊ. ಎನ್. ಎ. ನಿಕ್ಕಂ, ಡಾ. ಶ್ರೀಮಾಲಿ ಮತ್ತು ಪ್ರೊ. ದೇ. ಜವರೇಗೌಡರವರಿಗೂ ನಾನು ಋಣಿ. ಅವರ ಅವ್ಯಾಜ ಉಪಕಾರವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಈ ಪುಸ್ತಕವನ್ನು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಗ್ರಂಥಮಾಲೆಯಲ್ಲಿ ಪ್ರಕಟಿಸುತ್ತಿರುವ ಆ ಸಂಸ್ಥೆಯ ನಿರ್ದೇಶಕರಾದ ಡಾ. ಹಾ. ಮಾ. ನಾಯಕರವರಿಗೆ ನನ್ನ ಕೃತಜ್ಞತೆ ಸಲ್ಲುತ್ತದೆ.

ಅಚ್ಚಿನ ಕೆಲಸವನ್ನು ಅಕ್ಕರೆಯಿಂದ ಅಚ್ಚುಕಟ್ಟಾಗಿ ನಿರ್ವಹಿಸಿಕೊಟ್ಟ ಶ್ರೀ ರಘುವೀರ್ ಪ್ರಿಂಟಿಂಗ್ ಪ್ರೆಸ್ಸಿನ ಶ್ರೀ ದಾಸಪ್ಪ ಮತ್ತು ಶ್ರೀ ಡಿ. ಕೀರ್ತಿಕುಮಾರ್ ಅವರ ಹಾರ್ದಿಕ ಸಹಕಾರ ಮೆಚ್ಚತಕ್ಕದ್ದಾಗಿದೆ.

ಮೈಸೂರು
೬-೨-೭೧

ಕೆ. ವೆಂಕಟರಾಮಪ್ಪ

# ಪ್ರಮಾಣ ಲೇಖನಾವಳಿ


1. A Historical Sketch of Telugu Literature
   —T. S. Rajagopala Rao
2. ಕವಿತ್ವ ತತ್ವ ವಿಚಾರಮು—ಡಾ. ಕಟ್ಟಮಂಚಿ ರಾಮಲಿಂಗಾರೆಡ್ಡಿ
3. ಆಂಧ್ರ ವಾಙ್ಮಯಾರಂಭದಶ—ಡಾ. ದಿವಾಕರ್ಲ ವೇಂಕಟಾವಧಾನಿ
4. ಆಂಧ್ರ ವಾಙ್ಮಯ ಚರಿತ್ರ ಸಂಗ್ರಹಮು—'ಕವಿತ್ವ ವೇದಿ'
5. ಆಂಧ್ರ ಮಹಾಭಾರತಂ
   (ವಾವಿಳ್ಲ ರಾಮಸ್ವಾಮಿ ಶಾಸ್ತ್ರುಲು ಅಂಡ್ ಸನ್ಸ್ ಪ್ರಕಾಶನ)
6. ಶ್ರೀಮನ್ಮಹಾಭಾರತಂ
   (ಗೋರಖಪುರದ ಗೀತಾ ಪ್ರೆಸ್ಸಿನ ಪ್ರಕಾಶನ)
7. ವಿಕ್ರಮಾರ್ಜುನ ವಿಜಯಂ
   (ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಾಶನ)
8. ಪಂಪ—ತೀ. ನಂ. ಶ್ರೀಕಂಠಯ್ಯ
   (ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕಮಾಲೆ)
9. ಸಮಾಲೋಕನ—ತೀ. ನಂ. ಶ್ರೀಕಂಠಯ್ಯ
   (ಶಾರದಾ ಮಂದಿರ, ಮೈಸೂರು)
10. ನಾಡೋಜ ಪಂಪ—ಪಂಡಿತ ಮುಳಿಯ ತಿಮ್ಮಪ್ಪಯ್ಯ

# ವಿ ಷ ಯ  ಸೂ ಚಿ

# ಮೊದಲ ಮಾತು

ಶ್ರೀಮನ್ಮಹಾಭಾರತವನ್ನು ಕನ್ನಡದಲ್ಲಿ ಮೊದಲು ರಚಿಸಿದ ಕೀರ್ತಿ ಕವಿತಾ ಗುಣಾರ್ಣವನೆಂಬ ಬಿರುದು ಹೊತ್ತ ಪಂಪನಿಗೆ ಸಂದಿದೆ. ಅವನಿಗಿಂತ ಮೊದಲು 'ಸಮಸ್ತ ಭಾರತ' ವನ್ನು ಯಾವ ಕವಿಯೂ ರಚಿಸಿರಲಿಲ್ಲವೆಂದೂ ಅರಿಕೇಸರಿ ಮಹಾರಾಜನಂತೆ ಬೇರಾವ ಅರಸನೂ ಅಂಥ ಕಾವ್ಯರಚನೆಯನ್ನು ಮಾಡಿಸಿರಲಿಲ್ಲ ವೆಂದೂ ಆ ಕಾಲದ ಪಂಡಿತರು ಹೇಳಿದುದಲ್ಲದೆ 'ವರ್ಣಕಂ ಕತೆಯೊಳೊಡಂಬಡಂ ಪಡೆಯೆ ಪೇಟ್ಟೊಡೆ ಪಂಪನೆ ಪೇಟ್ಗುಂ' ಎಂದು ನಿರ್ಣಯಿಸಿ ಪಂಪನನ್ನು ಈ ಮಹಾ ಕಾರ್ಯಕ್ಕೆ ತೊಡಗುವಂತೆ ಪ್ರೋತ್ಸಾಹಿಸಿದರಂತೆ. ಅದುವರೆಗೆ ಕನ್ನಡದಲ್ಲಿ ಯಾರೂ ಮಾಡದೆ ಇದ್ದ ಒಂದು ಮಹಾಕಾರ್ಯವನ್ನು ಪಂಪನು ಕೈಕೊಂಡನೆಂಬುದು ಇದರಿಂದ ಸ್ಪಷ್ಟವಾಗುತ್ತದೆ. 'ಸಮಸ್ತ ಭಾರತ' ವನ್ನು ಯಾರೂ ಬರೆಯಲಿಲ್ಲ ವೆಂಬ ಮಾತಿನಿಂದ ಭಾರತದ ಕೆಲವು ಭಾಗಗಳನ್ನು ಪಂಪಪೂರ್ವಯುಗದ ಕವಿಗಳು ಕನ್ನಡದಲ್ಲಿ ರಚಿಸಿರಬಹುದೆಂದೂ ಇಡೀ ಭಾರತವನ್ನು ಯಾರೂ ಕನ್ನಡಿಸಿರಲಿಲ್ಲ ವೆಂದೂ ಊಹಿಸಲು ದಾರಿಯಾಗಿದೆ. ಇದಕ್ಕೆ ತಕ್ಕ ಹಾಗೆ ಪಂಪನು 'ಮುನ್ನಿನ ಕಬ್ಬಮನೆಲ್ಲಮನಿಕ್ಕಿ ಮೆಟ್ಟಿದುವು ಸಮಸ್ತ ಭಾರತಮುಮಾದಿಪುರಾಣ ಮಹಾ ಪ್ರಬಂಧಮುಂ' ಎಂದು ಹೇಳಿಕೊಂಡಿದ್ದಾನೆ. ತನಗಿಂತ ಮುಂಚೆ ಕನ್ನಡದಲ್ಲಿ ಕಾವ್ಯರಚನೆ ನಡೆದಿದ್ದಿತೆಂದೂ ಆದರೆ ತನ್ನ ಈ ಮಹಾಕೃತಿಗಳೆರಡು ಬಂದಮೇಲೆ ಅವುಗಳ ಪ್ರಾಶಸ್ತ್ಯ ತಗ್ಗಿ ಅವು ಸಂಪೂರ್ಣವಾಗಿ ಅಡಗಿಯೇ ಹೋದುವೆಂದೂ ಅವನ ಅಭಿಪ್ರಾಯ. ಈಗ ಪಂಪನಿಗಿಂತ ಹಿಂದಿನ ಯಾವ ಭಾರತ ಕಾವ್ಯವೂ ಲಭಿಸಿಲ್ಲ. ನೃಪತುಂಗನೆಂಬ ಚಕ್ರವರ್ತಿಯು ಬರೆದುದೆಂದು ಪ್ರಸಿದ್ಧವಾಗಿರುವ 'ಕವಿರಾಜಮಾರ್ಗ'ವೆಂಬ ಲಕ್ಷಣ ಗ್ರಂಥವೊಂದು ಮಾತ್ರ ಉಪಲಬ್ಧವಾಗಿದೆಯೇ ಹೊರತು ಆ ಕಾಲದ ಇನ್ನಾವ ಗ್ರಂಥವೂ ಸಿಕ್ಕಿಲ್ಲ. ಈ ಕಾರಣದಿಂದಲೇ ಆದೀತು. ಪಂಪನಿಗೆ ಕನ್ನಡದ ಮೊದಲ ಕವಿಯೆಂಬ ಹೆಸರು ಬಂದಿದೆ. ಕ್ರಿಸ್ತಶಕ ೧೩೮೫ ರ ಸುಮಾರಿನಲ್ಲಿ ಕಾವ್ಯರಚನೆ ಮಾಡಿದ ಮಧುರನೆಂಬ ಕನ್ನಡ ಕವಿಯು ಪಂಪನ ಪ್ರಶಂಸೆಗೆ ತೊಡಗಿ

> ಆದಿಕವಿ ಪಂಪನೆಂದನು
> ಪಾಡಿಸಿ ವಾದಿಸಿ ವಿರೋಧಿ ವಿಪರೀತತೆಯಿಂ
> ದೋದೆ ವಿಲೋಮದೆ ಪೆಸರಂ
> ಮೇದಿನಿಯೊಳಗವನ ಪೆಸರೆ ಪೆಸರ್ವಡೆದೆಸೆಗುಂ

ಎಂದು ಹೇಳಿದ್ದಾನೆ. ಇಲ್ಲಿ 'ಆದಿಕವಿ ಪಂಪನ್' ಎಂದು ಕವಿ ಹೇಳಿರುವುದು ಆ ಕಾಲಕ್ಕಾಗಲೇ ಪಂಪಪೂರ್ವಯುಗದ ಕಾವ್ಯಗಳು ಮೂಲೆಗುಂಪಾಗಿದ್ದುವೆಂಬ

೨

ಊಹೆಗೆ ಆಸ್ಪದವಾಗಿದೆ. ಇತಿಹಾಸದ ಲೆಕ್ಕದಲ್ಲಿ ಪಂಪ ಕನ್ನಡದ ಮೊದಲ ಕವಿ ಯಾಗದಿದ್ದರೂ ಅವನು ರಚಿಸಿರುವ ಕಾವ್ಯಗಳ ಹಿರಿಮೆಯ ದೃಷ್ಟಿಯಿಂದ ಅವನು ಅಗ್ರ ಗಣ್ಯನೆಂಬುದರಲ್ಲಿ ಸಂಶಯಕ್ಕೆಡೆಯಿಲ್ಲ. ಈತನು ಬರೆದ 'ವಿಕ್ರಮಾರ್ಜುನವಿಜಯಂ' ಎಂಬ ಮಹಾಕಾವ್ಯವೇ 'ಪಂಪ ಭಾರತಂ' ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ವ್ಯಾಸಮಹರ್ಷಿಪ್ರಣೀತವಾದ ಶ್ರೀಮನ್ಮಹಾಭಾರತವನ್ನು ಕನ್ನಡದಲ್ಲಿ 'ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ' ಹೇಳುವ ಸಂಕಲ್ಪ ಪಂಪನದು.

ಕನ್ನಡದಲ್ಲಿ ಪಂಪ ಆದಿಕವಿಯೆನ್ನಿಸಿಕೊಂಡಂತೆಯೇ ರಾಜಮಹೇಂದ್ರಪುರದ ನನ್ನಯಭಟ್ಟನೆಂಬ ಕವಿ ತೆಲುಗಿನಲ್ಲಿ ಆದಿಕವಿಯೆಂಬ ಪ್ರಶಸ್ತಿಯನ್ನು ಪಡೆದು ಕೊಂಡಿದ್ದಾನೆ. ಈತನು ಬರೆಯತೊಡಗಿದ ಭಾರತವೇ ತೆಲುಗಿನಲ್ಲಿ ಇದುವರೆಗೆ ಲಭಿಸಿರುವ ಕಾವ್ಯಗಳಲ್ಲಿ ಮೊದಲನೆಯದು. ಅದಕ್ಕಿಂತ ಹಿಂದಿನ ಯಾವ ತೆಲುಗು ಕಾವ್ಯವೂ ಇಂದಿನವರೆಗೆ ಲಭಿಸಿಲ್ಲ. ವ್ಯಾಸ ಮಹರ್ಷಿಯ ಕೃತಿಯನ್ನು ಯಾವ ವ್ಯತ್ಯಾಸವನ್ನೂ ಮಾಡದೆ 'ಕೃಷ್ಣದ್ವೈಪಾಯನ ಮುನಿವೃಷಭಾಭಿಹಿತ ಮಹಾ ಭಾರತ ಬದ್ಧನಿರೂಪಿತಾರ್ಥ' ವೇರ್ಪಡುವಂತೆ ಹೇಳಬೇಕೆಂಬುದು ನನ್ನಯಭಟ್ಟನ ಸಂಕಲ್ಪ. ಆದರೆ ಲಕ್ಷ ಶ್ಲೋಕಗಳನ್ನೊಳಗೊಂಡ ಆ ಮಹಾಕೃತಿಯನ್ನು ಯಥಾ ತಥವಾಗಿ ಅನುವಾದ ಮಾಡುವುದು ಸುಲಭವೆ? ಭಾರತವನ್ನು ಚ, ಜು, ತಪ್ಪದೆ ಮಾತಿಗೆ ಮಾತು ಜೋಡಿಸಿ ಭಾಷಾಂತರ ಮಾಡುವುದು ನನ್ನಯನ ಉದ್ದೇಶವಲ್ಲ. ವ್ಯಾಸರು ನಿರೂಪಿಸಿದ ಅರ್ಥ ಗೋಚರಿಸುವಂತೆ ಹೇಳುವುದಷ್ಟೇ ಆ ಕವಿಯ ಧ್ಯೇಯ. ನನ್ನಯಭಟ್ಟ ಈ ಧ್ಯೇಯವನ್ನು ಸಾಧಿಸಿರುವ ದಾರಿ ಯಾವುದು? ಗ್ರಂಥವನ್ನು ಸಂಗ್ರಹ ಮಾಡಿಯೂ ಮೂಲಕೃತಿಯ ಮುಖ್ಯ ವಿಷಯಕ್ಕೆ ಸ್ವಲ್ಪವೂ ಕುಂದು ತೋರದಂತೆ ಕೃತಿರಚನೆ ಮಾಡುವೆನೆಂದು ತೆಲುಗಿನ ಮೊದಲ ಕವಿ ನನ್ನಯಭಟ್ಟನು ಪ್ರತಿಜ್ಞೆ ಹೂಡಿದ್ದಾನೆ.

ಕನ್ನಡದ ಪಂಪ, ತೆಲುಗಿನ ನನ್ನಯಭಟ್ಟ—ಇಬ್ಬರೂ ವ್ಯಾಸ ಮಹಾಭಾರತ ವನ್ನು ಸಂಕ್ಷೇಪವಾಗಿಯಾದರೂ ಮೂಲಕೃತಿಯ ಪೂರ್ಣ ಸ್ವರೂಪ ಗೋಚರಿಸುವಂತೆ ತಮ್ಮ ತಮ್ಮ ಭಾಷೆಯಲ್ಲಿ ಕೃತಿ ರಚನೆ ಮಾಡಿದ್ದಾರೆ. ಅವರಿಬ್ಬರೂ ಸಂಗ್ರಹ ಕಾರರೇ. ಆದರೂ ಆ ಇಬ್ಬರ ಕಾರ್ಯವಿಧಾನ ಬೇರೆ ಬೇರೆ. ಈ ಉಭಯ ಕವಿಗಳ ಅನುವಾದಪದ್ಧತಿ, ಅವರ ಕಾವ್ಯೋದ್ದೇಶ, ಅವರು ಸಾಧಿಸಿದ ಸಿದ್ಧಿ, ಇವುಗಳನ್ನು ಕುರಿತು ವಿಚಾರ ಮಾಡುವುದೇ ಈ ಅಧ್ಯಯನದ ಉದ್ದೇಶ.

## ಕವಿ ಪರಿಚಯ

ಪಂಪ ನನ್ನಯರಿಬ್ಬರೂ ಚಾಳುಕ್ಯರಾಜರ ಆಶ್ರಿತ ಕವಿಗಳು. ಹತ್ತನೆಯ ಶತಮಾನದ ಮಧ್ಯಕಾಲದಲ್ಲಿ ವೇಮುಲವಾಡದಲ್ಲಿ ರಾಜ್ಯಭಾರ ಮಾಡುತ್ತಿದ್ದ ಇಮ್ಮಡಿ ಅರಿಕೇಸರಿಯ ಆಸ್ಥಾನದಲ್ಲಿ ಇದ್ದವನು ಪಂಪ. ಅರಸನ ಪ್ರಾರ್ಥನೆಗೆ ಓಗೊಟ್ಟು

ಭಾರತ ರಚನೆಯ ಮಹಾಕಾರ್ಯವನ್ನು ಆತನು ಕೈಕೊಂಡನು. ನನ್ನಯಭಟ್ಟನು ವೆಂಗಿಮಂಡಲದ ಅಂದಿನ ರಾಜಧಾನಿಯಾದ ರಾಜಮಹೇಂದ್ರಪುರದಲ್ಲಿ ರಾಜರಾಜನ ಆಸ್ಥಾನದಲ್ಲಿದ್ದುಕೊಂಡು ಅರಸನ ಪ್ರಾರ್ಥನೆಯಂತೆ ಆಂಧ್ರ ಮಹಾಭಾರತರಚನೆಗೆ ಕೈಹಾಕಿದನು. ರಾಜಪ್ರೇರಣೆ ಮತ್ತು ಪಂಡಿತ ಪ್ರೋತ್ಸಾಹಗಳೇ ಈ ಉಭಯ ಕವಿಗಳನ್ನೂ ಭಾರತರಚನೆಯಲ್ಲಿ ತೊಡಗಿಸಿದ ನಿಮಿತ್ತಗಳು. ವ್ಯಾಸ ಭಾರತವನ್ನು ದೇಶಭಾಷೆಗಳಲ್ಲಿ ಹೇಳುವ ಘನಕಾರ್ಯಕ್ಕೆ ಈ ಮಹಾಕವಿಗಳನ್ನು ಪ್ರಾರ್ಥಿಸಿ ಅವರಿಗೆ ಬೇಕಾದ ನೆರವು ನೀಡಿದ ಆ ಚಾಳುಕ್ಯರಾಜರ ಭಾರತಭಕ್ತಿ, ಭಾಷಾಭಿಮಾನಗಳು ಕೊಂಡಾಡುವಂಥವೇ ಸರಿ. ರಾಷ್ಟ್ರಕೂಟ ಚಕ್ರವರ್ತಿಗಳ ಸಾಮಂತರಾಗಿದ್ದರೂ ಅವರು ಸ್ವಯಂ ಯುದ್ಧವೀರರು. ತಮ್ಮ ಅಧಿರಾಜರ ಸಂತತಿಯವರಲ್ಲಿಯೇ ಒಳಜಗಳ ಸಂಭವಿಸಿದಾಗ ಅವರಲ್ಲಿ ಪಕ್ಷ ವಹಿಸಿ ಕಾದಾಡಿದವರು ಇವರು. ಅಲ್ಲದೆ ರಾಷ್ಟ್ರಕೂಟರ ಶತ್ರುಗಳ ಮೇಲೆ ದಾಳಿಯಿಟ್ಟು ಹೋರಾಡಿ ಸಾರ್ವಭೌಮರ ಪ್ರೀತ್ಯಾದರಗಳಿಗೆ ಪಾತ್ರರಾದವರು. ಯುದ್ಧಕರ್ಮ ವಿಶಾರದರಾದ ಈ ರಾಜರಿಗೆ ಚಂದ್ರವಂಶದ ರಾಜರಾದ ಕೌರವ ಪಾಂಡವರ ನಡುವೆ ನಡೆದ ಭಾರತ ಮಹಾಯುದ್ಧದ ವೃತ್ತಾಂತದಲ್ಲಿ ಆಸಕ್ತಿ ಮೂಡಿದುದೇನೂ ಆಶ್ಚರ್ಯದ ಸಂಗತಿಯಲ್ಲ. ಸಂಸ್ಕೃತದ ಮಹಾಭಾರತವನ್ನೇ ಓದಿಸಿ ಕೇಳಿ ಆನಂದಿಸಲು ಅವರಿಗೇನೂ ಕಷ್ಟವಿರಲಿಲ್ಲ. ಬಹುಶಃ ಹಾಗೆ ಕೇಳಿದುದರಿಂದಲೇ ಈ ಮಹಾ ಇತಿಹಾಸ ಗ್ರಂಥವನ್ನು ದೇಶಭಾಷೆಯಲ್ಲಿ ಹೇಳಿಸಿ ಜನತೆಯಲ್ಲಿ ಪ್ರಚಾರ ಮಾಡಬೇಕೆಂಬ ಸಂಕಲ್ಪ ಅವರಲ್ಲಿ ಮೂಡಿರಬಹುದು. ಅದಕ್ಕಾಗಿ ಕಾವ್ಯಪ್ರೇಮಿಗಳಾದ ಆ ರಾಜರು ತಮ್ಮ ಆಸ್ಥಾನಗಳಲ್ಲಿನ ಹಿರಿಯ ಕವಿಗಳನ್ನು ಆಯ್ದು ಅವರಿಗೆ ಬೇಕಾದ ಸೌಲಭ್ಯಗಳನ್ನು ಕಲ್ಪಿಸಿ ವಿಶೇಷವಾದ ಮನ್ನಣೆ ಮಾಡಿ ಅವರಿಂದ ಈ ಮಹಾಕಾರ್ಯವನ್ನು ಆಗಮಾಡಿಸಿದ್ದಾರೆ. ಆ ಪ್ರಭುಗಳ ಭಾರತಭಕ್ತಿಯೂ ದೇಶಭಾಷಾಭಿಮಾನವೂ ಸ್ತೋತ್ರಾರ್ಹವೇ ಸರಿ.

ರಾಜಪ್ರೇರಣೆ ಒದಗದಿದ್ದರೆ ಪಂಪ ಭಾರತರಚನೆ ಮಾಡುತ್ತಿದ್ದನೋ ಇಲ್ಲವೋ ಹೇಳಲು ಬರುವುದಿಲ್ಲ. ಆ ಜಿನಸಮಯದೀಪಕನಿಗೆ ಜಿನಚರಿತ್ರೆಯ ವಿಷಯದಲ್ಲಿ ಇದ್ದ ಭಕ್ತಿ ವೈದಿಕ ಸಂಪ್ರದಾಯದ ಈ ಗ್ರಂಥದ ವಿಚಾರದಲ್ಲಿ ಇರಲಿಲ್ಲವೆಂದೇ ತಿಳಿಯಬಹುದು. ಅವನು ಭಾರತರಚನೆ ಮಾಡಿದ್ದು ಅರಸನಾದ ವಿಕ್ರಮಾರ್ಜುನನ ಸಂತೋಷಾರ್ಥವಾಗಿಯೇ ಎಂಬಂಶದಲ್ಲಿ ಸಂದೇಹವೇ ಇಲ್ಲ. ಆದ್ದರಿಂದಲೇ ಅದಕ್ಕೆ ಕವಿ 'ವಿಕ್ರಮಾರ್ಜುನ ವಿಜಯಂ' ಎಂದೇ ಹೆಸರು ಕೊಟ್ಟಿದ್ದಾನೆ. ಭಾರತರಚನೆ ಮಾಡುವುದಕ್ಕೂ ಮುಂಚೆ ಪಂಪನು ಆದಿತೀರ್ಥಂಕರನ ದಿವ್ಯಚರಿತ್ರೆಯನ್ನೊಳಗೊಂಡ 'ಆದಿಪುರಾಣ' ಎಂಬ ಚಂಪೂಕಾವ್ಯವನ್ನು ರಚಿಸಿದ್ದನು. ಶಕವರ್ಷ ೮೬೩ರಲ್ಲಿ (ಕ್ರಿಸ್ತಾಬ್ದ ೯೪೧) 'ಆದಿಪುರಾಣ' ವನ್ನು ರಚಿಸಿದೆನೆಂದು ಕವಿಯೇ ಹೇಳಿಕೊಂಡಿದ್ದಾನೆ. ಆ ವೇಳೆಗೆ ಪಂಪನು ತನ್ನ ಹಿರಿಯತ

ಜನ್ಮಭೂಮಿಯಾದ ವೆಂಗಿಪಟುವಿನಲ್ಲಿದ್ದನೋ ಪುಲಿಗೆರೆಗೇ ಹೋಗಿದ್ದನೋ ಅಥವಾ ತನ್ನನ್ನು ವಿಶೇಷವಾಗಿ ಆಕರ್ಷಿಸಿದ ಬನವಾಸಿ ನಾಡಿನಲ್ಲಿಯೇ ಇದ್ದನೋ ತಿಳಿಯದು. ಅರಿಕೇಸರಿ, ಪಂಪರ ಪರಸ್ಪರ ಪರಿಚಯವಾದ ಕಾಲ ತಿಳಿಯದು. ಪಂಪ ತನ್ನ ಮೊದಲ ಕೃತಿಯಾದ ಆದಿಪುರಾಣದ ರಚನಾಕಾಲವನ್ನು ತಿಳಿಸಿದ ಹಾಗೆ ಭಾರತ ರಚನೆಯ ಕಾಲವನ್ನು ತಿಳಿಸಿಲ್ಲ. 'ಪೂಣ್ದು ತೆಱದೊಂದಱುದಿಂಗಳೊಳೊಂದು ಮೂಱು ತಿಂಗಳೊಳೆ ಸಮಾಪ್ತಿಯಾದುದೆನೆ ಬಣ್ಣಿಸಿದಂ ಕವಿತಾಗುಣಾರ್ಣವಂ' ಎಂದು 'ವಿಕ್ರಮಾರ್ಜುನ ವಿಜಯ'ದಲ್ಲಿ ಕವಿ ಹೇಳಿಕೊಂಡಿರುವುದನ್ನು ಗಮನಿಸಿ ಪಂಪನು ತನ್ನ ಈ ಎರಡು ಕೃತಿಗಳನ್ನೂ ಒಂದೇ ವರ್ಷದಲ್ಲಿ. ಅಂದರೆ ಬಹುಶಃ ಕ್ರಿ. ಶ. ೯೪೧ರಲ್ಲಿ ರಚಿಸಿ ಮುಗಿಸಿರಬೇಕೆಂದು ವಿದ್ವಾಂಸರು ಭಾವಿಸಿರುವುದುಂಟು. ಆದರೆ ಈ ಎರಡು ಮೇರು ಕೃತಿಗಳ ರಚನಾ ಕಾಲಗಳ ನಡುವೆ ಪಂಪಕವಿಯ ಮನೋಧರ್ಮವೇ ಸಂಪೂರ್ಣವಾಗಿ ವ್ಯತ್ಯಾಸ ಹೊಂದಿತ್ತೆಂದು ಭಾವಿಸಲು ಕಾರಣ ಇದೆ. ಆದಿಪುರಾಣದಲ್ಲಿ ಪಂಪನ ಸ್ವತಂತ್ರಮನೋಧರ್ಮ ಸ್ಪಷ್ಟವಾಗಿ ಎದ್ದು ಕಾಣುತ್ತದೆ. ಅವನ ಆತ್ಮಪ್ರತ್ಯಯ, ಕೆಚ್ಚು, ಅಲ್ಲಿ ಸುವ್ಯಕ್ತವಾಗಿದೆ. ಅವನು ಆಗ ರಾಜಾಶ್ರಯದಲ್ಲಿದ್ದು ಅರಸನ ಪೋಷಣೆ ಪಡೆದಂತೆ ಕಾಣುವುದಿಲ್ಲ.

> 'ಕವಿತೆಯೊಳಾಸೆ ಗೆಯ್ವ ಫಲಮಾವುದೊ ಪೂಜೆ ನೆಗಳ್ತೆ ಲಾಭಮೆಂ
> ಬಿವೆ ವಲಮಿಂದ್ರ ಪೂಜೆ ಭುವನಸ್ತುತಮಪ್ಪನೆಗಳ್ತೆ ಮುಕ್ತಿ ಸಂ
> ಭವಿಸುವ ಲಾಭಮೆಂಬಿವೆ ಜಿನೇಂದ್ರ ಗುಣಸ್ತುತಿಯಿಂದೆ ತಃಮೆ
> ಸಾರವೆ ಪೆಱರೀವುದೇಂ ಪೆಱಱ ಮಾಡುವುದೇಂ ಪೆಱರಿಂದಮಪ್ಪುದೇಂ'

ಎಂದು ಕವಿ ಆದಿಪುರಾಣದಲ್ಲಿ ಘೋಷಿಸಿದ್ದಾನೆ. ಇಲ್ಲಿ ಕವಿ ಬಯಸಿ ನಿರೀಕ್ಷಿಸಿದ ಕವಿತಾಫಲಗಳು ಜಿನೇಂದ್ರ ಗುಣಸ್ತುತಿಯಿಂದ ಲಭಿಸಬಹುದಾದ ಇಂದ್ರಪೂಜೆ, ಮುಕ್ತಿಗಳೇ ಹೊರತು ಬೇರೇನೂ ಅಲ್ಲ. ರಾಜಸನ್ಮಾನದ ಯೋಚನೆಯೇ ಆ ಕಾಲದಲ್ಲಿ ಕವಿಗೆ ಇದ್ದಹಾಗೆ ತೋರುವುದಿಲ್ಲ. ಅಷ್ಟೇ ಅಲ್ಲದೆ 'ಪೆಱರ್ಗೀವುದೇಂ ಪೆಱಱ ಮಾಡುವುದೇಂ ಪೆಱಱಿಂದ ಮಪ್ಪುದೇಂ' ಎಂದು ಪಂಪನು ಕೆಚ್ಚಿನಿಂದ ಪ್ರಶ್ನಿಸಿರುವುದನ್ನು ಗಮನಿಸುವಾಗ ಅವನು ರಾಜಾಶ್ರಿತನಾದ ಕವಿಯಾಗಿದ್ದಿರಲಾರನೆಂದೇ ತೋರುತ್ತದೆ. ಬಹುಶಃ ಆದಿಪುರಾಣ ರಚನೆ ಮಾಡುವಾಗ ಪಂಪನಿಗೆ ಅರಿಕೇಸರಿಯ ಸ್ನೇಹ ಲಭಿಸಿದ್ದಿರಲಾರದು. ಪಂಪ ಆ ಕಾವ್ಯದಲ್ಲಿ ಅರಿಕೇಸರಿಯ ಹೆಸರನ್ನು ಹೇಳದೆ ಬಿಟ್ಟಿರುವುದೇ ಅಲ್ಲದೆ ಬೇರೆ ಯಾವ ಅರಸನ ಪ್ರಸ್ತಾಪವನ್ನೂ ಮಾಡಿಲ್ಲ. ಅದರಲ್ಲಿ ಯಾವ ಆಶ್ರಯದಾತನ ಸುದ್ದಿಯೂ ಇಲ್ಲ. ಅವನ ಕವಿಕೀರ್ತಿ ಸಾಕಷ್ಟು ಬೆಳೆದಮೇಲೆಯೇ ಅವನು ಅರಿಕೇಸರಿಯ ಆಸ್ಥಾನವನ್ನು ಪ್ರವೇಶಿಸಿರಬಹುದು.

ಆದರೆ 'ಆದಿಪುರಾಣದಲ್ಲಿ' ಪಂಪ 'ಕವಿತಾ ಗುಣಾರ್ಣವ' ನೆಂಬ ಬಿರುದನ್ನು 'ಳಿಕೊಂಡಿದ್ದಾನೆ. ಅರಿಕೇಸರಿಗೆ 'ಗುಣಾರ್ಣವ' ನೆಂಬ ಬಿರುದು ಇತ್ತು. ಅವನ

ಆಶ್ರಿತನಾದ ಕವಿ 'ಕವಿತಾ ಗುಣಾರ್ಣವ'ನಾಗಿರಬಹುದು. ಆದರೆ ಈ ಬಿರುದು ತನಗೆ ಲಭಿಸಿದ ಬಗೆಯನ್ನು ಪಂಪ ಬೇರೆ ರೀತಿಯಲ್ಲಿ ವಿವರಿಸಿದ್ದಾನೆ. 'ಇದು ನಿಚ್ಚಂ ಪೊಸತರ್ಣವಂಬೊಲತಿ ಗಂಭೀರಂ ಕವಿತ್ವಂ ಜಗಕ್ಕದಱಿಂದಂ ಕವಿತಾ ಗುಣಾರ್ಣವನ್' ಎಂದು ಪಂಡಿತರು ಪ್ರೀತಿಯಿಂದ ಕವಿಯನ್ನು ಮೆಚ್ಚಿ ಹೊಗಳಿದರು. ಇದು ಕವಿಗೆ ಅರಸನು ಅನುಗ್ರಹಿಸಿದ ಮೆಚ್ಚಿನ ಬಿರುದಲ್ಲ. ಸಮುದ್ರದಂತೆ ಮಹಾಗಂಭೀರವಾದ ಇವನ ಕವಿತ್ವವನ್ನು ಮೆಚ್ಚಿ ಮಾರುಹೋಗಿ ಬುಧಸಮೂಹ ಮನ್ನಣೆ ಮಾಡಿ ಕೊಟ್ಟ ಪ್ರೀತಿಯ ಬಿರುದು. ಆದ್ದರಿಂದ ಪಂಪನ 'ಕವಿತಾ ಗುಣಾರ್ಣವ'ನೆಂಬ ಬಿರುದಿಗೂ ಅರಿಕೇಸರಿ ರಾಜನಿಗೂ ಯಾವ ಸಂಬಂಧವೂ ಇಲ್ಲ. ಅರಸನ ಆಶ್ರಯ ಲಭಿಸುವುದಕ್ಕಿಂತ ಮುಂಚೆಯೇ ವಿದ್ವಜ್ಜನ ಪಂಪ ಕವೀಶ್ವರನನ್ನು 'ಕವಿತಾ ಗುಣಾರ್ಣವ'ನೆಂದು ಕೊಂಡಾಡುತ್ತಿದ್ದರೆಂದು ತಿಳಿಯಬೇಕಾಗಿದೆ.

ಆದರೆ ಇದು 'ಹೀಗೆಯೇ ಸರಿ' ಎಂದು ಪ್ರಮಾಣೀಕರಿಸಿ ಹೇಳುವುದಕ್ಕೆ ಸಾಕಾದಷ್ಟು ನಿರ್ಣಾಯಕವಾದ ಸಾಕ್ಷ್ಯಾಧಾರಗಳಿಲ್ಲ. ಪಂಪನ ಬಾಲ್ಯ ಯೌವನಗಳ ವೃತ್ತಾಂತವೇನೂ ತಿಳಿಯದು. ಅವನ ವಿದ್ಯಾರ್ಜನೆ ಎಲ್ಲಿ ಆಯಿತೋ, ಜೀವನದಲ್ಲಿ ಅವನು ಯಾವ ವೃತ್ತಿಯನ್ನು ಅವಲಂಬಿಸಿದ್ದನೋ ಖಚಿತವಾಗಿ ತಿಳಿಯದು. ಪಂಪ ಸ್ವವಿಷಯವನ್ನು ತನ್ನ ಭಾರತದಲ್ಲಿ ಹೀಗೆ ಹೇಳಿಕೊಂಡಿದ್ದಾನೆ:

'ಕವಿತೆ ನೆಗೞ್ತೆಯುಂ ನಿಲಿಸೆ ಜೋಳದ ಪಾೞಿ ನಿಜಾದಿನಾಥ ನಾ<br>
ಹವದೊಳರಾತಿ ನಾಯಕರ ಪಟ್ಟನೆ ಪಾಱಿಸೆ ಸಂದ ಪೆಂಪು ಭೂ<br>
ಭುವನದೊಳಾಗಳುಂ ಬೆಳಗೆ ವಿಕ್ರಮಭಿಮಾನದ ಮಾತು ಕೀರ್ತಿಯುಂ<br>
ವಿವರಿಸೆ ಸುದನೇಂ ಕಲಿಯೋ ಸತ್ಕವಿಯೋ ಕವಿತಾ ಗುಣಾರ್ಣವಂ

ಪಂಪ ಕವಿಯೂ ಹೌದು, ಕಲಿಯೂ ಹೌದು. 'ಜೋಳದ ಪಾೞಿ'ಗಾಗಿ ಒಡೆಯನ ಶತ್ರುಗಳನ್ನು ಯುದ್ಧದಲ್ಲಿ 'ಪಟ್ಟನೆ ಪಾಱಿಸೆ ಸಂದ ಪೆಂಪುಭೂ ಭುವನ' ದೊಳಗೆಲ್ಲ ಬೆಳಗಿತಂತೆ! ಪಂಪ ಅರಿಕೇಸರಿಯ ಆಸ್ಥಾನದಲ್ಲಿ ಸೈನ್ಯಾಧಿಕಾರಿಯಾಗಿದ್ದಿರಬಹುದೆಂಬ ಸಂಶಯಕ್ಕೆ ಇದರಿಂದ ಅವಕಾಶವಾಗಿದೆ. ಅಲ್ಲದೆ ಪಂಪಭಾರತವನ್ನು ಓದುವಾಗ ಕವಿ ಜೈನಮತ ಗ್ರಂಥಗಳನ್ನು ವ್ಯಾಸಂಗಮಾಡಿ ಕೃತವಿದ್ಯನಾಗಿದ್ದುದೇ ಅಲ್ಲದೆ ವೈದಿಕ ಮತದ ಸಂಸ್ಕಾರವನ್ನೂ ಪಡೆದಿದ್ದ ಹಾಗೆ ತೋರುತ್ತದೆ. ಎಲ್ಲ ಧರ್ಮಗಳಲ್ಲಿಯೂ ಶ್ರೇಷ್ಠವಾದುದು ಜೈನಧರ್ಮವೇ ಎಂದು ಬಗೆದು ತನ್ನ ತಂದೆಯು ಜಿನಧರ್ಮವನ್ನು ಅವಲಂಬಿಸಿದನೆಂದು ಕವಿ ಹೇಳಿಕೊಂಡಿದ್ದಾನೆ. ಈ ಮತಾಂತರ ಕಾರ್ಯ ಯಾವಾಗ ನಡೆಯಿತೊ! ಪಂಪನಿಗೆ ಕೊಂಚ ವಯಸ್ಸಾದ ಮೇಲೆ, ಅವನು ಸಾಕಷ್ಟು ವಿದ್ಯೆ ಕಲಿತಮೇಲೆ ಅವನ ತಂದೆ ಮತಾಂತರ ಹೊಂದಿದನೆ, ಅಥವಾ ಪಂಪನು ಜನಿಸುವ ಮೊದಲೇ ಅವನು ಜೈನನಾಗಿದ್ದನೆ, ಎಂಬುದು ನಮಗೆ ತಿಳಿಯದು. ಪಂಪನ ಪೂರ್ವಿಕರೆಲ್ಲ ಪರಮ ವೈದಿಕರಾದವರು. ಮಾಧವ ಸೋಮಯಾಜಿಯೆಂಬ ಈತನ ಹಿರಿಯನೊಬ್ಬನು ಯಜ್ಞಗಳನ್ನು ಮಾಡಿ 'ಅಧ್ವರ

ಧೂಮದೆ ಕರಿದು ಮಾಡಿದಂ ನಿಜಯಶಮಂ'! ಪಂಪ ವೈದಿಕ ಸಂಪ್ರದಾಯವನ್ನೂ ಜೈನ ಸಂಪ್ರದಾಯವನ್ನೂ ಚೆನ್ನಾಗಿ ಬಲ್ಲ ಪಂಡಿತ. ಬಾಣಭಟ್ಟ. ಹರ್ಷ, ಕಾಳಿದಾಸಾದಿ ಮಹಾಕವಿಗಳ ಕೃತಿಗಳನ್ನೆಲ್ಲ ವ್ಯಾಸಂಗ ಮಾಡಿದ್ದನೆಂಬುದು ಆತನ ಗ್ರಂಥಗಳ ಅವಲೋಕನದಿಂದ ಸ್ಪಷ್ಟವಾಗುತ್ತದೆ.

ಈ ಮಹಾ ವಿದ್ವಾಂಸನು ಆದಿಪುರಾಣವನ್ನು ಕನ್ನಡದಲ್ಲಿ ರಚಿಸಿದುದರಿಂದ ಈತನ ಕವಿಕೀರ್ತಿ ಸಹಜವಾಗಿಯೇ ನಾಡಿನಲ್ಲಿ ಎಲ್ಲ ಕಡೆಗೂ ಹಬ್ಬಿತು. ಅದು ಅರಿಕೇಸರಿ ಮಹಾರಾಜನ ಕಿವಿಗೂ ಮುಟ್ಟಿತು. ಆತನು ತಾನು ಅಪೇಕ್ಷಿಸಿದ ಕನ್ನಡ ಭಾರತ ಕಾವ್ಯ ರಚನೆಗೆ ಈತನೇ ತಕ್ಕವನೆಂದು ಭಾವಿಸಿ ಪಂಪನನ್ನು ತನ್ನಲ್ಲಿಗೆ ಬರಮಾಡಿಕೊಂಡನು.

> ಆತಂಗರಿಕೇಸರಿ ಸಂ
> ಪ್ರೀತಿಯೆ ಬೞಿಯಟ್ಟೆ ಬಿರಿದನಿತ್ತು ನಿಜಾಭಿ
> ಖ್ಯಾತಿಯನಿಳೆಯೊಳ್ ನಿಜಾಸ
> ಲ್ಕ್ಯೀತಿಜದಿತಿಹಾಸ ಕಥೆಯನೊಪ್ಪಿಸೆ ಕುಜಾತಂ

ಅರಸನ ಪ್ರೀತಿಯ ಆಹ್ವಾನ, ಅವನು ಆದರದಿಂದ ಸ್ವಾಗತಿಸಿ ಮಾಡಿದ ಮನ್ನಣೆ, ತೋರಿದ ಆದರ—ಇವುಗಳಿಂದ ಸುಪ್ರೀತನಾದ ಕವಿಯು ಅವನ ಖ್ಯಾತಿಯನ್ನು ಲೋಕದಲ್ಲಿ ಸ್ಥಿರವಾಗಿ ನಿಲ್ಲಿಸುವ ಉದ್ದೇಶ ಹೊಂದಿದವನಾಗಿ ಭಾರತದ ಇತಿಹಾಸ ಕಥೆಯನ್ನು ಬರೆದು ದೊರೆಗೆ ಒಪ್ಪಿಸಲು ಸಂಸಿದ್ಧನಾದನು.

ಕವಿ ಜೈನ ಧರ್ಮಾವಲಂಬಿಯೆಂಬ ಕಾರಣದಿಂದ ಅರಿಕೇಸರಿಗೆ ಅಪ್ರೀತಿಯೇನೂ ಇರಲಿಲ್ಲ. ತಾನು ಜೈನನಾದರೂ ಪಂಪ ಅರಸನ ಪ್ರಾರ್ಥನೆಗೆ ಮನವೊಲಿದು ಅನ್ಯಮತದ ಒಂದು ಮಹಾಗ್ರಂಥವನ್ನು ಕನ್ನಡದಲ್ಲಿ ಬರೆಯಲು ಒಪ್ಪಿಕೊಂಡನು. ರಾಜ ಕವಿಗಳಿಬ್ಬರೂ ಅಸಾಧಾರಣವಾದ ಅನ್ಯಮತ ಸಹನೆಯನ್ನು ಮೆರೆದಿದ್ದಾರೆನ್ನಬೇಕು. ಆದಮಟ್ಟಿಗೂ ಪಂಪ ವ್ಯಾಸಭಾರತದ ಕಥೆಯ ಚೌಕಟ್ಟಿಗೇ ಹೊಂದಿಕೊಂಡು ತನ್ನ ಕಾವ್ಯವನ್ನು ರಚಿಸಿದ್ದಾನೆ. ಅದರಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿದ್ದರೂ ಅವುಗಳಿಂದ ಭಾರತ ಕಥೆಗೆ ಕುಂದೇನೂ ಆಗಿಲ್ಲವೆನ್ನಬಹುದು. ಆಳವಾಗಿ ಒಳಹೊಕ್ಕು ನೋಡಿದಲ್ಲದೆ ಪಂಪಭಾರತದಲ್ಲಿ ಜೈನಮತದ ಪ್ರಭಾವ ಕಾಣುವುದಿಲ್ಲ. ಆದರೆ ಕವಿ ಎಷ್ಟೇ ಪ್ರಯತ್ನ ಮಾಡಿದರೂ ಸಂಪೂರ್ಣವಾಗಿ ತನ್ನ ಆವರಣದ ಪ್ರಭಾವದಿಂದ ದೂರನಾಗಲು ಸಾಧ್ಯವಾಗದು. ತಿಳಿದೋ ತಿಳಿಯದೆಯೋ ಪಂಪ ಅಲ್ಲಲ್ಲಿ ಜೈನಧರ್ಮದ ಪ್ರಭಾವವನ್ನು ತೋರಿದ್ದಾನೆ.

ಅರಿಕೇಸರಿ ಪಂಪಕವಿಗೆ ಬಚ್ಚೆಸಾಸಿರದ ನಾಡಿನಲ್ಲಿ ಧರ್ಮಪುರವೆಂಬ ಅಗ್ರಹಾರವನ್ನು ಕೊಟ್ಟನು. ಅದು ಅರಿಗನ ಧರ್ಮಭಂಡಾರದಂತೆ ಸಾರವತ್ತಾದುದರಿಂದ ಅದಕ್ಕೆ ಅರಸನು 'ಸಾರ' ಎಂದೇ ಹೆಸರಿಟ್ಟು ಕವಿಗೆ ದಾನ ಕೊಟ್ಟನಂತೆ! ಪಂಪನಿಗೆ ಅರಿಕೇಸರಿಯ ಒಳ್ಳೆಯತನ ಮೆಚ್ಚಿಗೆಯಾಯಿತು. ಆತನ ಹಿರಿಮೆಯನ್ನು

ಹೊಗಳಿ ಕಾವ್ಯ ಬರೆಯಬೇಕೆಂಬ ಆಸೆ ಅವನ ಮನಸ್ಸಿನಲ್ಲಿ ಮೂಡಿತು. 'ಗುಣಾರ್ಣವನೊಳ್ಪು ಮನ್ಮನೋವಾಸಮನೆಯ್ದೆ ಪೇೞ್ದಪೆನ್' ಎಂದು ಪಂಪ ತನಗೆ ತನ್ನ ಅರಸನ ವಿಷಯದಲ್ಲಿದ್ದ ಅಭಿಮಾನವನ್ನು ಹೇಳಿಕೊಂಡಿದ್ದಾನೆ.

> " . . . . . . ಪೋಲಿಪೊಡೀತನುದಾತ್ತ ಪೂರ್ವಭೂ
> ಮಿಪರುಮನೊಳ್ಪಿನೊಳ್ ತಗುಳಿವಂದೊಡೆ ಈ ಕಥೆಯೊಳ್ ತಗುಳ್ಚಿ ಪೋ
> ಲಿಪೊಡೆನಗಪ್ಪುದಾದುದು ಗುಣಾರ್ಣವ ಭೂಭುಜನಂ ಕಿರೀಟಿಯೊಳ್ "

ಎಂದು ಸ್ಪಷ್ಟವಾಗಿ ಹೇಳಿ ಪಂಪಭಾರತದ ಅರ್ಜುನನಿಗೂ ತನ್ನ ಆಶ್ರಯದಾತನಾದ ಅರಿಕೇಸರಿಗೂ ಅಭೇದ ಕಲ್ಪಿಸಲು ಅರಸನ ಗುಣಾತಿಶಯವೇ ಕಾರಣವೆಂದು ತಿಳಿಸಿದ್ದಾನೆ.

ಭಾರತದ ಇತಿಹಾಸ ಕಥೆಯನ್ನು ತನಗೋಸ್ಕರ ರಚಿಸಬೇಕೆಂದು ಅರಿಕೇಸರಿ ಪಂಪನನ್ನು ಪ್ರಾರ್ಥಿಸಿದಾಗ ಪಂಡಿತಜನ ಅವನನ್ನು ಪ್ರಶಂಸಿಸಿ ಪ್ರೋತ್ಸಾಹಿಸಿದರಂತೆ

> ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತ ಭಾ
> ರತಮನಪೂರ್ವಮಾಗೆ ಸಲೆ ಪೇೞ್ದ ಕವೀಶ್ವರರಿಲ್ಲ ವರ್ಣಕಂ
> ಕತೆಯೊಳೊಡಂಬಡಂ ಪಡೆಯೆ ಪೇೞ್ದೊಡೆ ಪಂಪನೆ ಪೇೞ್ಗುಮೆಂದು ಪಂ
> ಡಿತರ್ಕೃತಗುಳ್ದು ಬಿಚ್ಚಳಿಸೆ ಪೇೞಲೊಡರ್ಚಿದೆನೀ ಪ್ರಬಂಧಮಂ

ಎಂದು ಪಂಪನು ಪಂಡಿತರ ಒತ್ತಾಯಪೂರ್ವಕವಾದ ಪ್ರೋತ್ಸಾಹವೂ ದೊರೆತುದರಿಂದ ಈ ಪ್ರಬಂಧವನ್ನು ರಚಿಸಲು ಸಂಕಲ್ಪಿಸಿದೆನೆಂದು ಹೇಳಿಕೊಂಡಿದ್ದಾನೆ.

> " ವ್ಯಾಸ ಮುನೀಂದ್ರರುಂದ್ರ ವಚನಾಮೃತ ವಾರ್ಧಿಯನೀಸುವೆಂ ಕವಿ
> ವ್ಯಾಸನೆಂಬ ಗರ್ವಮೆನಗಿಲ್ಲ ........"

ಎಂದು ಹೇಳಿ ಪಂಪ ತನ್ನ ಸ್ವಾಹಂಕಾರ ಖಂಡನೆ ಮಾಡಿಕೊಂಡಿರುವುದೇ ಅಲ್ಲದೆ ವ್ಯಾಸಮುನಿಗಳ ವಿಷಯದಲ್ಲಿಯೂ ಅವರ ಮೇರುಕೃತಿಯಾದ ಮಹಾಭಾರತದ ವಿಷಯದಲ್ಲಿಯೂ ತನಗಿದ್ದ ಅಮಿತವಾದ ಗೌರವವನ್ನು ಸೂಚಿಸಿದ್ದಾನೆ.

ವ್ಯಾಸಭಾರತ ಕಥೆಯನ್ನೇ ಹೇಳಬೇಕೆಂಬುದು ಅರಸನ ಕೋರಿಕೆ. ಕವಿಯೂ ಮೂಲಕಥೆಯ ಚೌಕಟ್ಟನ್ನೇ ಅನುಸರಿಸಿಕೊಂಡು ಕಾವ್ಯ ಬರೆಯಬೇಕೆಂದು ಸಂಕಲ್ಪಿಸಿದ್ದಾನೆ. ಆದರೆ ತನ್ನ ಅರಸ ಅರಿಕೇಸರಿಯನ್ನು ಅರ್ಜುನನಿಗೆ ಹೋಲಿಸಿ ಅವನನ್ನೇ ಭಾರತ ಕಥಾನಾಯಕನನ್ನಾಗಿಸಬೇಕೆಂಬ ಪಂಪನ ಅಪೇಕ್ಷೆ ಇದಕ್ಕೆ ಕೊಂಚಮಟ್ಟಿಗೆ ಬಾಧಕವಾಗಿ ಪರಿಣಮಿಸಿತು. ಪಂಪನ ಕೃತಿ ವ್ಯಾಸಭಾರತದ ಸಕ್ರಮವಾದ ಕನ್ನಡ ಅನುವಾದವಲ್ಲ. ಅದು " ವಿಕ್ರಮಾರ್ಜುನ ವಿಜಯಂ " ! ವಿಕ್ರಮಾರ್ಜುನನೆಂಬುದು ಅರಿಕೇಸರಿಯ ಒಂದು ಹೆಮ್ಮೆಯ ಬಿರುದು. ಅದನ್ನು ಕುಂತೀಪುತ್ರನಾದ ಅರ್ಜುನನಿಗೇ ಹಚ್ಚಿ ಅರ್ಜುನನನ್ನೇ ತನ್ನ ಕಾವ್ಯಕ್ಕೆ ಕಥಾ

ನಾಯಕನೆಂದು ಕಲ್ಪಿಸಿ ಪಂಪನು 'ಸಮಸ್ತ ಭಾರತ'ವನ್ನು ರಚಿಸಿದ್ದಾನೆ. ಸಮಸ್ತ
ಭಾರತವೆಂಬ ಮಾತಿಗೆ ಇಡೀ ಭಾರತವೆಂದು ಸಹಜವಾಗಿ ಅರ್ಥವಾಗುತ್ತದೆ.
ವಿಸ್ತಾರವಾದುದನ್ನು ಸಂಗ್ರಹವಾಗಿ ಹೇಳುವುದೆಂಬ ಅರ್ಥವೂ ಈ ಪದಕ್ಕೆ ಬರ
ಬಹುದು. 'ಸಮಾಸೇ ವ್ಯಾಸಧಾರಣಂ' ಎಂಬಂತೆ ವಿಸ್ತಾರವಾದ ಒಂದು
ವ್ಯಾಸದ ಅಂಶವನ್ನು ಒಂದು ಸಮಾಸದಲ್ಲಿ ಹೇಳಿದರೆ ಅದು 'ಸಮಸ್ತ'ವಾಯಿತು!
ಸಮಸ್ತ ಭಾರತವೆಂದರೆ ಸಂಕ್ಷೇಪನಾದ ಭಾರತವೆಂದೂ ಹೇಳಬಹುದು. ಇನ್ನೊಂದು
ವ್ಯಾಖ್ಯಾನವೂ ಇದೆ ಈ ಪದಕ್ಕೆ! ಮಹಾಭಾರತ ಕಥೆಯೊಡನೆ ಸಮಕಾಲೀನ
ವಾದ ಅರಿಕೇಸರಿಯ ಕಥೆಯೂ ಇಲ್ಲಿ ಸೇರಿರುವುದರಿಂದ ಇದು "ಸಮಸ್ತ ಭಾರತ!"
ಈ ಮೂರು ವಿವರಣೆಗಳೂ ಇಲ್ಲಿ ಹೊಂದುತ್ತವೆ. ಮಹಾ ವಿಸ್ತಾರವಾಗಿರುವ
ಭಾರತವನ್ನು ನಮ್ಮ ಕನ್ನಡ ಕವಿ ಸಂಕ್ಷೇಪವಾಗಿ ಹೇಳಿದ್ದಾನೆ. ಭಾರತ ಕಥೆ
ಯೊಡನೆ ಅರಿಕೇಸರಿಯ ಕಥೆಯನ್ನು—ಎರಡು ಪದಗಳನ್ನು ಸೇರಿಸಿ ಸಮಾಸ
ಮಾಡುವ ಹಾಗೆ—ಸೇರಿಸಿ ಒಂದು ಕಥೆಯನ್ನು ಮಾಡಿದ್ದಾನೆ. ಮಹಾಭಾರತದ
ಹದಿನೆಂಟು ಪರ್ವಗಳ ಕಥೆಯನ್ನೆಲ್ಲ ಹೇಳದಿದ್ದರೂ ಕುರುಕ್ಷೇತ್ರ ಯುದ್ಧ ಮುಗಿದು
ಪಾಂಡವರು ವಿಜಯಶಾಲಿಗಳಾಗಿ ಹಸ್ತಿನಾಪುರದಲ್ಲಿ ಪಟ್ಟಾಭಿಷೇಕ ನಡೆದ ಕಥೆ
ಯಷ್ಟನ್ನೂ ಹೇಳಿದ್ದಾನೆ. ಇಲ್ಲಿ ಪಂಪನಿಗೆ ಅರ್ಜುನನ ಹಿರಿಮೆಯ ವರ್ಣನೆಯ
ಕಡೆಗೆ ಹೆಚ್ಚು ಗಮನ. ಭಾರತ ಯುದ್ಧದ ಅನಂತರ ಕವಿ ಅರ್ಜುನ ಸುಭದ್ರೆಯರಿಗೇ
ಪಟ್ಟಾಭಿಷೇಕ ಮಾಡಿಸಿದ್ದಾನೆ. ಇತರರ ವೃತ್ತಾಂತವನ್ನು ಆದಮಟ್ಟಿಗೂ ಸಂಕ್ಷೇಪ
ವಾಗಿ ಹೇಳಿ ಅರ್ಜುನನ ಕಥೆಯನ್ನು ಪ್ರಧಾನವಾಗಿ ನಿರೂಪಿಸುವುದೇ ಕವಿಯ
ಆಶಯ. ಆದ್ದರಿಂದಲೇ ಅವನು ತನ್ನ ಭಾರತಕ್ಕೆ "ವಿಕ್ರಮಾರ್ಜುನ ವಿಜಯಂ"
ಎಂದೇ ಹೆಸರಿಟ್ಟಿದ್ದಾನೆ. ಅಲ್ಲದೆ ಪ್ರತಿಯೊಂದು ಆಶ್ವಾಸದ ಆದಿಯಲ್ಲಿಯೂ ಅಂತ್ಯ
ದಲ್ಲಿಯೂ ಯಾವುದೋ ಒಂದು ನೆಪದಿಂದ ಅರ್ಜುನನ ಅರ್ಥಾತ್ ಅರಿಕೇಸರಿಯ
ಪ್ರಶಂಸೆ ಬರುವಂತೆ ಕವಿ ಏರ್ಪಡಿಸಿದ್ದಾನೆ.

ಕವಿಗಳು ತಮಗೆ ಆಶ್ರಯ ಕೊಟ್ಟು ಕಾವ್ಯರಚನೆಗೆ ಪ್ರೋತ್ಸಾಹ ನೀಡಿದ
ರಾಜ, ಮಂತ್ರಿ, ಶ್ರೀಮಂತರೇ ಮೊದಲಾದ ಪೋಷಕರನ್ನು ತಮ್ಮ ಕಾವ್ಯಗಳಲ್ಲಿ
ಹೊಗಳುವುದು ಹೊಸ ವಿಷಯವೇನೂ ಅಲ್ಲ. ಅವರ ಚರಿತ್ರೆಯನ್ನೇ ಕಾವ್ಯವಸ್ತು
ವಾಗಿ ಆರಿಸಿಕೊಂಡು ಕೃತಿರಚನೆ ಮಾಡಿದವರೂ ಹಲವರು ಇದ್ದಾರೆ. ತಾವು
ರಚಿಸಿದ ಕಾವ್ಯಗಳನ್ನು ತಮ್ಮ ಆಶ್ರಯದಾತರ ಹೆಸರಿನಲ್ಲಿ ಪ್ರಕಟಿಸಿರುವುದೂ ಉಂಟು.
ಈ ಕಾರಣದಿಂದಲೇ ಇರಬಹುದು, ರಾಜರು ಕಾವ್ಯರಚನೆ ಮಾಡಿದರೆಂದರೆ ಜನ ಸುಲಭ
ವಾಗಿ ನಂಬಲಾರದವರಾಗಿದ್ದಾರೆ! ಇದೆಲ್ಲ ಬಿಟ್ಟು ತಮ್ಮ ಪ್ರೀತ್ಯಾಸ್ಪದರಾದ ರಾಜರ
ಚರಿತ್ರೆಯನ್ನು ಪುರಾಣ ವೀರರ ಕಥೆಗೆ ಗಂಟುಹಾಕಿ ಅವರಿಬ್ಬರಿಗೂ ಅಭೇದವನ್ನು
ಕಲ್ಪಿಸಿ ಕಾವ್ಯ ಕಟ್ಟುವುದು ಬಹಳ ಅಪೂರ್ವ ವಿಷಯವೇ ಸರಿ. ಬಹುಶಃ ಈ
ವಿಷಯದಲ್ಲಿ ಮೊದಲನೆಯ ಗುಣವರ್ಮನೆಂಬ ಕನ್ನಡ ಕವಿ ಮೊದಲಿಗನಿರಬಹುದೆಂದು

ತೋರುತ್ತದೆ. ಅವನ ‘ ಶೂದ್ರಕ ’ ಎಂಬ ತನ್ನ ಕಾವ್ಯದಲ್ಲಿ ಗಂಗರಾಜ ಎರೆಯಪ್ಪ ನನ್ನು ಶೂದ್ರಕನಿಗೆ ಹೋಲಿಸಿ ಬರೆದಿರಬಹುದೆಂದು ತಿಳಿಯಬಂದಿದೆ. ಈ ಪದ್ಧತಿ ಯನ್ನೇ ಪಂಪನು ತನ್ನ “ ವಿಕ್ರಮಾರ್ಜುನ ವಿಜಯ ”ದಲ್ಲಿ ಅನುಸರಿಸಿದ್ದಾನೆ.

ವಿಕ್ರಮಾರ್ಜುನ ವಿಜಯದ ನಾಂದೀ ಪದ್ಯವೇ ಅರಿಕೇಸರಿಯ ಸ್ತೋತ್ರರೂಪ ವಾಗಿದೆ. ಕವಿ ತನ್ನ ಕಾವ್ಯವನ್ನು ಆರಂಭಿಸುವಾಗ ಇಷ್ಟದೈವವನ್ನು ಪ್ರಾರ್ಥಿಸಿ ಕೊಳ್ಳುವುದು ವಾಡಿಕೆ. ಗ್ರಂಥಾದಿಯಲ್ಲಿ ಮಾಡುವ ಮಂಗಳಾಚರಣೆ ಅದು. ಪಂಪನು ತನ್ನ ಆರಾಧ್ಯಮೂರ್ತಿಯಾದ ಜಿನೇಂದ್ರನನ್ನು ಸ್ತೋತ್ರ ಮಾಡುವುದು ಸಹಜವಾಗಿತ್ತು. ಆದರೆ ತಾನು ಬರೆಯಹೊರಟಿದ್ದುದು ವೈದಿಕ ಸಂಪ್ರದಾಯದ ಭಾರತವಾದುದರಿಂದ ಹಾಗೆ ಮಾಡುವುದು ಉಚಿತವಾಗಲಾರದೆಂದು ಪಂಪ ಭಾವಿಸಿರ ಬೇಕು. ಮಹಾವಿಷ್ಣುವನ್ನೇ ಸ್ತೋತ್ರಮಾಡಲು ಈ ‘ ಜಿನ ಪದಾಂಭೋಜ ವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರ ವಚನ ರಚನ ಚತುರ ’ನಿಗೆ ಇಷ್ಟವಿಲ್ಲ. ಭಾರತಕರ್ತನಾದ ವ್ಯಾಸಮಹರ್ಷಿಯನ್ನೇ ಸ್ಮರಿಸಬಹುದಿತ್ತೇನೊ! ಆದರೆ ಪಂಪ ಅದಾವುದನ್ನೂ ಮಾಡದೆ “ ಉದಾತ್ತ ನಾರಾಯಣನಾದ ದೇವನ್ ಎಮಗೀಗೆ ಅರಿಕೇಸರಿ ಸೌಖ್ಯ ಕೋಟಿಯಂ ” ಎಂದು ಹೇಳಿ ತನ್ನ ಅರಸನಾದ ಅರಿಕೇಸರಿಯನ್ನೇ ಸ್ತುತಿಸಿದ್ದಾನೆ! ಶ್ರೀಮನ್ನಾರಾಯಣನು ಭೂಮಿಯನ್ನು ಪಡೆಯುವ ಸಲುವಾಗಿ ಭೂಲೋಕದಲ್ಲಿ ವಾಮನನಾಗಿ ಹುಟ್ಟಿ ಬಲಿಚಕ್ರವರ್ತಿಯಲ್ಲಿಗೆ ಅರ್ಥಿಯಾಗಿ ಹೋಗಿ “ ಜೀಯ ” ಎಂದು ಬೇಡಿಕೊಂಡರೆ ಅರಿಕೇಸರಿಯು ಅರಾತಿಗಳನ್ನು ಯುದ್ಧದಲ್ಲಿ ಗೆದ್ದು ರಾಜ್ಯಗಳನ್ನು ವಶಪಡಿಸಿಕೊಂಡನಂತೆ! ಆದ್ದರಿಂದಲೇ ಅವನು “ ಉದಾತ್ತ ನಾರಾಯಣ ”! ಹೀಗೆಯೇ ಮುಂದಿನ ಪದ್ಯಗಳಲ್ಲಿ ಕವಿ ಅರಿಕೇಸರಿಯ ‘ ಉದಾರ ಮಹೇಶ್ವರ ’ ‘ ಪ್ರಚಂಡ ಮಾರ್ತಾಂಡ ’ ‘ ಸಹಜ ಮನೋಜ ’ ಎಂಬ ಬಿರುದು ಗಳನ್ನು ಬಳಸಿ ಅರಸನನ್ನೇ ಹೊಗಳಿದ್ದಾನೆ. ಆಮೇಲೆ ಸರಸ್ವತಿಯನ್ನೂ ವಿನಾಯಕ ನನ್ನೂ ಹೊಗಳಿ “ ವಿನಾಯಕಂ ತಾನ್ನಿಮಿರ್ಚುಗೆ ಕಬ್ಬಮಂ ನಯದಿಂ ಗುಣಾರ್ಣವ ಭೂಪನಾ ” ಎಂದು ಪ್ರಾರ್ಥಿಸಿ ಈ ಭಾರತಕಾವ್ಯ ‘ ಗುಣಾರ್ಣವ ಭೂಪನ ’ ಕಾವ್ಯ ವೆಂದು ಸ್ಪಷ್ಟಪಡಿಸಿದ್ದಾನೆ. ಅರಿಕೇಸರಿಗಿಂತ ಮೊದಲು ಇಂಥ ಭಾರತ ರಚನೆ ಮಾಡಿಸಿದ ರಾಜರು ಯಾರೂ ಇರಲಿಲ್ಲ. ವರ್ಣನೆ ಕಥೆಗಳೆರಡೂ ಪರಸ್ಪರ ಹೊಂದು ವಂತೆ ಅಚ್ಚುಕಟ್ಟಾಗಿ ಹಿರಿದಾದ ಈ ಮಹಾಕಾವ್ಯವನ್ನು ರಚಿಸಿದ ಕವಿಶ್ರೇಷ್ಠರೂ ಇರಲಿಲ್ಲ. ಆ ರೀತಿಯಲ್ಲಿ ಹೇಳಬೇಕೆಂದರೆ ಪಂಪನೇ ಆಗಬೇಕೆಂದು ಪಂಡಿತರೇ ಒತ್ತಾಯಮಾಡಿ ಹೇಳಿದ್ದರಿಂದ ತಾನು ಈ ‘ ಪ್ರಬಂಧ ’ವನ್ನು ಹೇಳತೊಡಗಿದುದಾಗಿ ಪಂಪ ಹೇಳಿಕೊಂಡಿದ್ದಾನಷ್ಟೆ! ಚಂಪೂ ಕಾವ್ಯಕ್ಕೆ ಪಂಪನ ಕಾಲದಲ್ಲಿ ಪ್ರಬಂಧ ವೆಂಬ ಹೆಸರಿದ್ದಿರಬಹುದೆ? ಚಂಪು, ಷಟ್ಪದಿ, ರಗಳೆ, ವಚನ ಎಂದು ಕೃತಿಗಳ ಛಂದಸ್ಸಿಗೆ ಅನುಗುಣವಾಗಿ ಕಾವ್ಯಗಳನ್ನು ವಿಂಗಡಿಸುವ ಪರಿಪಾಠ ಆಮೇಲೆ ಬಂದಿರ ಬಹುದೆ? ರಾಮಾಯಣ ಭಾರತಾದಿ ಪ್ರಸಿದ್ಧ ಮಹಾಗ್ರಂಥಗಳಿಂದ ವಸ್ತುವನ್ನು

ಆರಿಸಿಕೊಂಡು ಅದನ್ನು ಕವಿ ತನಗೆ ಅನುಕೂಲವಾಗುವಂತೆ ಅಳವಡಿಸಿಕೊಂಡು ಸೂಕ್ತವಾದ ವರ್ಣನೆಗಳನ್ನು ಸೇರಿಸಿ ತನ್ನ ಕಲ್ಪನಾಶಕ್ತಿಯಿಂದ ಹಲವು ಸನ್ನಿವೇಶ ಗಳನ್ನು ಚಿತ್ರಿಸಿ ಬರೆದ ಕಾವ್ಯಗಳನ್ನು 'ಪ್ರಬಂಧ'ಗಳೆಂದು ಕರೆಯುವ ವಾಡಿಕೆ ಇದೆ. ಕನ್ನಡದ ನೇಮಿಚಂದ್ರ ತನ್ನ 'ಲೀಲಾವತಿ'ಗೆ 'ಲೀಲಾವತೀ ಪ್ರಬಂಧಂ' ಎಂದೇ ಹೆಸರು ಕೊಟ್ಟಿರುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಪ್ರಬಂಧವೆಂದರೆ ಕಲ್ಪನಾ ಕಥೆಯೆಂದು ಅಮರಸಿಂಹ ಹೇಳಿದ್ದಾನೆ. ಕಲ್ಪನಾ ಪ್ರಧಾನವಾಗಿದ್ದು ವರ್ಣನೆ ಗಳಿಂದ ಕೂಡಿದ, ಕಾವ್ಯದ ಮೂಲವಸ್ತು ಬೇರೊಂದು ಗ್ರಂಥದಿಂದ ತೆಗೆದು ಕೊಂಡಿದ್ದರೂ ಅದನ್ನು ಕವಿ ತನ್ನ ಪ್ರತಿಭೆಯಿಂದ ಶೃಂಗರಿಸಿ ಹೊಸದಾದ ಸ್ವತಂತ್ರ ಕೃತಿಯಂತೆಯೇ ರಚಿಸಿರುವುದರಿಂದ ಅದನ್ನು ಪ್ರಬಂಧವೆಂದು ಕರೆಯುವುದು ರೂಢಿ ಯಾಗಿದೆ. ಇಲ್ಲಿ ಪಂಪ ವ್ಯಾಸಭಾರತದ ಕಥೆಯನ್ನೇ ಆಯ್ದುಕೊಂಡಿದ್ದರೂ ಅದರಲ್ಲಿ ಕೆಲವು ಮಾರ್ಪಾಟುಗಳನ್ನು ಮಾಡಿರುವುದರಿಂದ ಇದನ್ನು ಪ್ರಬಂಧವೆಂದು ಕರೆದಿರಬಹುದು. ಇದು ಪುರಾಣ ಕಾವ್ಯವಲ್ಲ; ಪುರಾಣದ ಯಥಾವತ್ತಾದ ಅನುವಾದವಲ್ಲ ಎಂಬುದನ್ನು ಸೂಚಿಸುವುದಕ್ಕಾಗಿ ಈ ಹೆಸರು ಕೊಟ್ಟಿರಬಹುದೆಂದು ತೋರುತ್ತದೆ.

ಹಿರಿದಾದ ಭಾರತದ ಕಥೆಯನ್ನು ಮೆಯ್ಗಿಡದಂತೆ ಹೇಳುವುದು ಪಂಪನ ಸಂಕಲ್ಪ. ಅಷ್ಟೇ ಹೊರತು ವ್ಯಾಸನನ್ನೇ ಅನುಸರಿಸಿ ಕಾವ್ಯ ಕಟ್ಟುವ ನಿಯಮಕ್ಕೆ ಅವನು ಕಟ್ಟುಬಿದ್ದಿಲ್ಲ. ಆದರೆ ಇದು ಜಿನಭಾರತವಲ್ಲ. ಜೈನ ಧರ್ಮದ ಪ್ರಸ್ತಾಪ ಇಲ್ಲಿಲ್ಲ. ಆದರೆ ಕವಿ ತಿಳಿದೋ ತಿಳಿಯದೆಯೋ ಅಲ್ಲಲ್ಲಿ ಕೆಲವು ಮಾತುಗಳಿಂದ ಸನ್ನಿವೇಶ ಸೃಷ್ಟಿಯಿಂದ ತನ್ನ ಜೈನ ಧರ್ಮದ ಬಲವನ್ನು ತೋರಿಸಿಕೊಂಡಿದ್ದಾನೆ. ಆದರೆ ಅದು ಎದ್ದುಕಾಣುವುದಿಲ್ಲ, ಆಳವಾಗಿ ಗಮನಿಸಿದರೆ ಮಾತ್ರ ಅದು ಗೋಚರವಾದೀತು. ಪಂಪನು ಆದನುಟ್ಟಿಗೂ ವ್ಯಾಸಭಾರತದ ಕಥಾಸೂತ್ರಕ್ಕೆ ಹೊಂದಿಸಿಕೊಂಡು ಅರಿಕೇಸರಿಯ ಕಾವ್ಯವನ್ನು ಕಟ್ಟಲು ಹೆಣಗಿದ್ದಾನೆ. ಆದರೆ ಈ ಹೆಣಗಾಟದಲ್ಲಿ ಪಂಪ ಕೆಲವು ಸಲ ಬಹಳ ಕಷ್ಟಕ್ಕೆ ಸಿಕ್ಕಿಕೊಂಡು ಹಣ್ಣಾಗಿದ್ದಾನೆ.

ಭಾರತಕ್ಕೆ ಅರ್ಜುನನೇ ಕಥಾನಾಯಕನೆಂದು ಹೇಳಿದುದರಿಂದಲೂ ಅರಿ ಕೇಸರಿಯೇ ಅರ್ಜುನನೆಂದು ಕಲ್ಪಿಸಿಕೊಂಡುದರಿಂದಲೂ ಅವನ ಯುದ್ಧ ಪರಾಕ್ರಮ, ದಾನಪರತೆ, ಶರಣಾಗತರಕ್ಷಣೆ ಮೊದಲಾದ ಗುಣಾತಿಶಯಗಳನ್ನು ಹಾಡಿ ಹೊಗಳುವ ಭರದಲ್ಲಿ ಅರಿಕೇಸರಿಯ ಬಿರುದಾವಳಿಯನ್ನೆಲ್ಲ ಆ ಪುರಾಣಯುಗದ ಕುಂತೀಪುತ್ರನಿಗೆ ಅಂಟಿಸಿರುವುದು ಅಷ್ಟೇನೂ ಹಿತವಾಗಿ ತೋರುವುದಿಲ್ಲ. ಅರ್ಜುನನನ್ನು "ಚಾಳುಕ್ಯ ವಂಶೋದ್ಭವಂ" ಎಂದು ಕರೆಯುವುದು ಬಹಳ ವಿಚಿತ್ರವಾಗಿದೆ. ಅವನನ್ನು 'ಸಾಮಂತ ಚೂಡಾಮಣಿ' ಎಂದು ಹೇಳುವುದು ತಾನೆ ಹೇಗೆ ಸಮಂಜಸವಾದೀತು ? ಅರ್ಜುನನು ಯಾರಿಗೆ ಸಾಮಂತ ? "ಹಿತಮಿತ ಮೃದುವಚನ"ನಾದ ಪಂಪನು ತನ್ನ ಪ್ರೀತಿಯ ಅರಸನನ್ನು ಮಿತಿಮೀರಿ ಹೊಗಳಿ ಮೆಚ್ಚಿಸುವ ಭರದಲ್ಲಿ ಔಚಿತ

ಭಂಗದೋಷಕ್ಕೆ ಆಸ್ಪದ ಕೊಟ್ಟಿರುವನೆಂದು ಭಾವಿಸದೆ ವಿಧಿಯಿಲ್ಲವಾಗಿದೆ. ಆದರೆ ಅರಸನ ವ್ಯಕ್ತಿತ್ವವನ್ನು ವಿಶೇಷವಾಗಿ ಮೆಚ್ಚಿಕೊಂಡ ಪಂಪನು ಅವನನ್ನು ಹಾರ್ದಿಕ ವಾಗಿ ವರ್ಣಿಸುವಾಗ ಇದನ್ನು ಗಮನಿಸಲಿಲ್ಲ. ಅರಿಕೇಸರಿಯು ಅರ್ಜುನನ ಅವತಾರ ಮಾತ್ರವಲ್ಲ. ಅವನು ಅಕಳಂಕ ರಾಮ! ಹಿಂದೆ ರಾಮನಾಗಿದ್ದವನೂ ಅವನೆ. ದಕ್ಷಿಣ ಸಮುದ್ರತೀರಕ್ಕೆ ಹೋದಾಗ ಅರ್ಜುನನಿಗೆ ಹಿಂದಿನ ಜನ್ಮವೃತ್ತಾಂತವೆಲ್ಲ ನೆನಪಿಗೆ ಬಂದಿತೆಂದು ಕವಿ ವರ್ಣಿಸಿದ್ದಾನೆ! ಸ್ನೇಹ ಅಭಿಮಾನ ಮಮತೆಗಳಿಗೆ ಕಟ್ಟುಬಿದ್ದ ಜನ ಆತ್ಮಸಂತೋಷದಿಂದ ಹೇಳಹೊರಟಾಗ ಹೊಗಳತೊಡಗಿದಾಗ, ಇಂಥಾದ್ದೆಲ್ಲ ಸಹಜವೇ ಇರಬಹುದು.

## ನನ್ನಯಭಟ್ಟ

ತೆಲುಗಿನಲ್ಲಿ ಭಾರತ ರಚನೆಗೆ ಮೊದಲು ಕೈಹಾಕಿದ ನನ್ನಯಭಟ್ಟನಿಗೆ ಇಂಥ ಕ್ಲೇಶವೇನೂ ಇರಲಿಲ್ಲ. ಅವನೂ ರಾಜಾಶ್ರಿತನಾದ ಕವಿಯೇ. ವೇಗಿ ದೇಶದ ನಾಯಕರತ್ನದೋಪಾದಿಯಲ್ಲಿದ್ದ. ರಾಜಮಹೇಂದ್ರ ನಗರದಲ್ಲಿ ಹನ್ನೊಂದನೆಯ ಶತ ಮಾನದ ಆದಿಭಾಗದಲ್ಲಿ ಅರಸನಾಗಿದ್ದ ರಾಜರಾಜನ ಆಶ್ರಿತ, ಆತನ ಕುಲ ಬ್ರಾಹ್ಮಣ. ಅವಿರಳ ಜಪಹೋಮತತ್ಪರನಾಗಿ ಬ್ರಹ್ಮಾಂಡಾದಿ ನಾನಾ ಪುರಾಣ ವಿಜ್ಞಾನ ನಿರತ ನೆನಿಸಿದ ನನ್ನಯಭಟ್ಟ ಪರಮ ವೈದಿಕ ಶಿರೋಮಣಿ. ಸಹಜವಾಗಿಯೇ ಆತನಿಗೆ ವ್ಯಾಸಮಹರ್ಷಿಗಳ ವಿಚಾರದಲ್ಲಿಯೂ ಅವರು ಲೋಕಹಿತಾರ್ಥವಾಗಿ ರಚಿಸಿದ ಭಾರತದ ವಿಚಾರದಲ್ಲಿಯೂ ವಿಶೇಷವಾದ ಭಕ್ತಿ. ಅವನನ್ನು ರಾಜರಾಜ ನರೇಂದ್ರನು ಆದರಿಸಿ

> ಜನನುತ ಕೃಷ್ಣ ದ್ವೈಪಾ
> ಯನ ಮುನಿ ವೃಷಾಭಾಭಿಹಿತ ಮಹಾಭಾರತ ಬ
> ದ್ಧ ನಿರೂಪಿತಾರ್ಥ ಮೇರ್ಪಡ
> ದೆನುಗುನ ರಚಿಯಿಂಪುಮಧಿಕ ಧೀಯುಕ್ತಿಮೆಯಿನ್

ಎಂದು ಪ್ರಾರ್ಥಿಸಿಕೊಂಡಾಗ ವ್ಯಾಸಭಾರತವನ್ನು ಅನುಸರಿಸಿ ಕೃತಿ ರಚಿಸುವ ಕೆಲಸ ಅವನದಾಯಿತು. ಭಾರತದಂಥ ಬೃಹದ್ಗ್ರಂಥವನ್ನು ಅನುವಾದ ಮಾಡುವುದೇನು ಸುಲಭದ ಮಾತಲ್ಲ. ಅದರ ಬೃಹತ್ತು ಮಹತ್ತುಗಳ ಸಂಪೂರ್ಣವಾದ ಅರಿವು ನನ್ನಯಭಟ್ಟನಿಗೆ ಇತ್ತು. ಆದ್ದರಿಂದಲೇ ಆತನು ಅರಸನ ಪ್ರಾರ್ಥನೆಯನ್ನು ಕೇಳಿ ದಾಗ ಅಂಜಿಕೊಂಡನು. ಈ ಮಹಾಕಾರ್ಯ ತನಗೆ ಸಾಧ್ಯವಾದೀತೇ ಎಂಬ ದೊಡ್ಡ ಅಳುಕು ಅವನನ್ನು ಬಾಧಿಸಿತು. ಆದರೆ ತನಗೆ ಅತ್ಯಂತ ಇಷ್ಟನಾದ ಅರಸನ ಉತ್ಸಾಹ ವನ್ನು ಭಂಗಗೊಳಿಸುವುದು ಅವನ ಮನಸ್ಸಿಗೊಪ್ಪದ ಕೆಲಸ. ಆದಕಾರಣ ನನ್ನಯ

ಕವಿ ಕೊಂಚ ಹೊತ್ತು ಮನಸ್ಸಿನಲ್ಲಿಯೇ ಮಥನ ನಡೆಸಿ ಕಡೆಗೆ ಅರಸನಿಗೆ ಹೇಳಿದ ಉತ್ತರ ಇದು

ಅಮಲಿನ ತಾರಕಾಸಮುದಯಂಬುಲ ನೆನ್ನನು ಸರ್ವವೇದ ಶಾ
ಸ್ತ್ರಮುಲ ಯಶೇಷ ಸಾರಮು ಮುದಂಬುನ ಬೊಂದನು ಬುದ್ಧಿಬಾಹು ವಿ
ಕ್ರಮಮುನ ದುರ್ಗಮಾರ್ಥ ಜಲಗೌರವ ಭಾರತ ಭಾರತೀ ಸಮು
ದ್ರಮು ದಜಾಯುಂಗನೀದನು ವಿಧಾತ್ರನಕೈನನು ನೇರ ಬೋಲುನೇ

[ಪರಿಶುದ್ಧವಾದ ನಕ್ಷತ್ರ ಸಮೂಹವನ್ನು ಎಣಿಸಲು ಸಾಧ್ಯವೇ? ಸಮಸ್ತ ವೇದ ಶಾಸ್ತ್ರಗಳ ಅಶೇಷ ಸಾರ ಸರ್ವಸ್ವವನ್ನೂ ಬುದ್ಧಿಶಕ್ತಿಯಿಂದ ತಿಳಿದುಕೊಳ್ಳಲು ಶಕ್ಯವೆ? ದುರ್ಗಮವಾದ ಅರ್ಥಗಳೆಂಬ ನೀರಿ (ಜಲಗೌರವ) ನಿಂದ ತುಂಬಿದ ಭಾರತವೆಂಬ ಭಾರತೀ ಸಮುದ್ರವನ್ನು ಈಜಿ ದಾಟುವುದಕ್ಕೆ ಆ ವಿಧಾತ್ರನಿಗ ದಮೂ ಸಾಧ್ಯ ವಾದೀತೆ?]

ನನ್ನಯಭಟ್ಟ ಭಾರತವನ್ನು 'ದುರ್ಗಮಾರ್ಥ ಜಲಗೌರವ ಭಾರತ ಭಾರತೀ ಸಮುದ್ರ'ವೆಂದು ವರ್ಣಿಸಿದತೆ ಕನ್ನಡಕವಿ ಪಂಪನು 'ವ್ಯಾಸ ಮುನೀಂದ್ರ ರುಂದ್ರ ವಚನಾಮೃತವಾರ್ಧಿ' ಎಂದು ಹೊಗಳಿದ್ದಾನೆ. 'ನಾನು ಈ ವಚನಾಮೃತ ವಾರಿಧಿಯನ್ನು ಈಜುತ್ತೇನೆ. ನಾನೂ ಒಬ್ಬ ಕವಿವ್ಯಾಸನೆಂಬ ಅಹಂಕಾರ ನನಗಿಲ್ಲ' ಎಂದು ಪಂಪನು ನುಡಿದಿದ್ದರೆ 'ಈ ಭಾರತೀ ಸಮುದ್ರವನ್ನು ಈಜಿ ದಾಟುವುದಕ್ಕೆ ಆ ಬ್ರಹ್ಮನಿಗೂ ಶಕ್ಯವಲ್ಲ' ಎಂಬ ಅರ್ಥವನ್ನು ನನ್ನಯ ಹೇಳಿ ಭಾರತಾನುವಾದ ಕಾರ್ಯ ಎಷ್ಟು ಗಹನ ಎಂಬುದನ್ನು ಸ್ಪಷ್ಟಪಡಿಸಿದ್ದಾನೆ. 'ಭಾರತ ರಚನೆ ಒಂದು ದೊಡ್ಡ ಸಮುದ್ರವನ್ನು ಈಜಿ ದಾಟಿದಂತೆ' ಎಂಬ ಈ ಕಲ್ಪನೆ ಪಂಪ ನನ್ನಯರಿಬ್ಬರಿಗೂ ಸಮಾನವಾದ ಕಲ್ಪನೆ. ಆದರೆ ಈ ಕೆಲಸ ಕಷ್ಟವೆಂದು ಹೇಳಿ ಹೆದರಿ ಹಿಮ್ಮೆಟ್ಟುವ ಹಾಗಿಲ್ಲ. ಆದ್ದರಿಂದ ನನ್ನಯಭಟ್ಟನು 'ದೇವ, ನಿನ್ನ ಅನುಮತದಿಂದಲೂ, ವಿದ್ವಜ್ಜನರ ಅನುಗ್ರಹದಿಂದಲೂ ನನಗೆ ಸಾಧ್ಯವಾದ ರೀತಿಯಲ್ಲಿ ಈ ಕಾವ್ಯರಚನೆ ಮಾಡುತ್ತೇನೆ' ಎಂದು ತನ್ನ ನಿರ್ಧಾರವನ್ನು ಬಹಳ ನಮ್ರತೆಯಿಂದ ಪ್ರಕಟಿಸಿ ಭಾರತ ರಚನಾ ಕಾರ್ಯಕ್ಕೆ ಒಪ್ಪಿಕೊಂಡನು.

ನನ್ನಯ ತನ್ನ ಗ್ರಂಥದ ಆದಿಯಲ್ಲಿ ತ್ರಿಮೂರ್ತಿ ಸ್ತೋತ್ರಾತ್ಮಕವಾದ ಒಂದು ಸಂಸ್ಕೃತ ಶ್ಲೋಕವನ್ನೇ ರಚಿಸಿ ಮಂಗಳಾಚರಣೆ ಮಾಡಿದ್ದಾನೆ! ಬಹುಶಃ ಆ ವೇಳೆಗಾಗಲೇ ಹರಿಹರರಲ್ಲಿ ಅಭೇದವನ್ನು ಹೇಳುವ ಪಂಥವೊಂದು ಹುಟ್ಟಿದ್ದಿರಬೇಕು. ಕವಿ ಹರಿಹರರನ್ನು ಹೊಗಳುವಾಗ ಜತೆಗೆ ಸೃಷ್ಟಿಕರ್ತನಾದ ಬ್ರಹ್ಮನನ್ನೂ ಸೇರಿಸಿ ಕೊಂಡಿದ್ದಾನೆ. ಬ್ರಹ್ಮನ ಮೇಲಿನ ಭಕ್ತಿಗಿಂತ ಆತನ ರಾಣಿಯಾದ ಆ ವಾಣಿಯ ಮೇಲಿನ ಅತಿಶಯ ಭಕ್ತಿಯೇ ಅದಕ್ಕೆ ಕಾರಣವಿದ್ದರೂ ಇರಬಹುದು.

ಶ್ರೀ ವಾಣೀ ಗಿರಿಜಾ ಶ್ಚಿರಾಯ ದಧತೋ ವಕ್ಷೋ ಮುಖಾಂಗೇಷು ಯೇ
ಲೋಕಾನಾಂ ಸ್ಥಿತಿ ಮಾವಹಂತ್ಯ ವಿಹತಾಂ ಸ್ತ್ರೀಪುಂಸಯೋಗೋದ್ಭವಾಂ

> ತೇವೇವತ್ರಯಮೂರ್ತಯ ಸ್ತ್ರಿಪುರುಷಾ ಸ್ಸಂಪೂಜಿತಾ ವ ಸ್ಸುರೈ
> ಭೂರ್ ಯಾಸುಃ ಪುರುಷೋತ್ತಮಾಮ್ಬುಜಭವ ಶ್ರೀಕಂಧರಾ ಶ್ರೇಯಸೇ

ಹೀಗೆ ಆ ವೇದತ್ರಯಮೂರ್ತಿಗಳನ್ನು ಭಕ್ತಿಯಿಂದ ಪ್ರಾರ್ಥಿಸಿ ಕವಿ ತನ್ನ ಕಾವ್ಯಕ್ಕೆ ಆದಿ ಮಂಗಳವನ್ನಾಚರಿಸಿದ್ದಾನೆ. ಇಷ್ಟಾದ ಕೂಡಲೆ ಕವಿ ತನ್ನ ಆಶ್ರಯದಾತನಾದ ಅರಸನ ಗುಣಸಂಕೀರ್ತನೆಯನ್ನು ಆರಂಭಿಸಿದ್ದಾನೆ. ವೇಗಿಮಂಡಲ, ಅದರ ರಾಜಧಾನೀ ನಗರವಾದ ರಾಜಮಹೇಂದ್ರ ನಗರಗಳನ್ನು ವರ್ಣಿಸಿ ವಿಮಲಾದಿತ್ಯ ತನೂಜ ವಿಮಲವಿಚಾರ ಕುಮಾರವಿದ್ಯಾಧರ ಉತ್ತಮಚಾಳುಕ್ಯ ವಿವಿಧಾಗಮ ವಿಹಿತಶ್ರಮನೆನಿಸಿಕೊಂಡ ರಾಜರಾಜನನ್ನೂ ಅವನ ಆಳ್ವಿಕೆಯನ್ನೂ ಕವಿ ಕೊಂಡಾಡಿದ್ದಾನೆ. ಅವನನ್ನು 'ಚಳುಕ್ಯ ಮನ್ಮಥ'ನೆಂದು ಹೊಗಳಿರುವುದು ನಮ್ಮ ಅರಿಕೇಸರಿಯ "ಸಹಜ ಮನೋಜ"ನೆಂಬ ಬಿರುದನ್ನು ನೆನಪಿಗೆ ತರುವಂತಿದೆ. ಈ ರಾಜವರೇಣ್ಯರಿಗೆ ತಮ್ಮ ರೂಪಾಧಿಕ್ಯದ ಹೆಮ್ಮೆಯೂ ಇದ್ದಿರಬಹುದೆಂದು ಕಾಣುತ್ತದೆ. ಆದ್ದರಿಂದಲೇ ಈ ಆಶ್ರಿತ ಕವಿಗಳು ಅವರಿಗೆ ಈ ಬಿರುದುಗಳನ್ನು ಕೊಟ್ಟಿರಬೇಕು!

ರಾಜರಾಜ ನರೇಂದ್ರನು 'ಸಮಸ್ತವರ್ಣಾಶ್ರಮಧರ್ಮರಕ್ಷಣ ಮಹಾಮಹಿಮ'ನೆಂದು ಹೇಳಿ ನನ್ನಯ ಅವನ ವೈದಿಕ ಧರ್ಮಶ್ರದ್ಧೆಯನ್ನು ವ್ಯಕ್ತಗೊಳಿಸಿದ್ದಾನೆ. ಇಲ್ಲದಿದ್ದರೆ ಆ ಅರಸನಿಗೆ 'ವಿವಿಧಾಗಮವಿಹಿತಶ್ರಮ' ಏಕೆ ಬೇಕು? ಆ ಅರಸನ ಕುಲಬ್ರಾಹ್ಮಣ ನನ್ನಯಭಟ್ಟ. ಅವನಲ್ಲಿ ವಿಶೇಷವಾದ ಅಭಿಮಾನವುಳ್ಳವನು. ಅದು ಬರಿಯ ಆಶ್ರಿತ ಆಶ್ರಯದಾತರ ಸಂಬಂಧವಲ್ಲ. ನನ್ನಯನ ಪಾಂಡಿತ್ಯ ಪ್ರತಿಭೆಗಳನ್ನೂ ಗುಣಾತಿಶಯವನ್ನೂ ಅಮಿತವಾಗಿ ಮೆಚ್ಚಿಕೊಂಡು ಅರಸನು ಆತನನ್ನು ಆದರದಿಂದ ಗೌರವಿಸಿದ್ದನು. "ಅವಿರಳ ಜಪಹೋಮತತ್ಪರನ್, ಸಂಹಿತಾಭ್ಯಾಸಿ ಬ್ರಹ್ಮಾಂಡಾದಿ ನಾನಾ ಪುರಾಣ ವಿಜ್ಞಾನ ನಿರತನ್, ಲೋಕಜ್ಞನ್, ಉಭಯ ಭಾಷಾ ಕಾವ್ಯ ರಚನಾಭಿ ಶೋಭಿತನ್, ಸತ್ಪ್ರತಿಭಾತಿಯೋಗ್ಯನ್ . ನಿತ್ಯಸತ್ಯವಚನನ್" ಎಂದು ಅರಸನು ನನ್ನಯನನ್ನು ಬಹಳ ಅಕ್ಕರೆಯಿಂದ ಪೋಷಿಸುತ್ತಿದ್ದನು. ಇಂಥ ಬ್ರಾಹ್ಮಣೋತ್ತಮನಲ್ಲದೆ ಬೇರೆ ಯಾರು ತಾನೆ ಭಾರತ ರಚನಾ ಕಾರ್ಯಭಾರಕ್ಕೆ ಸರಿಯಾದಾರು? ಆದ್ದರಿಂದ ರಾಜರಾಜ ನರೇಂದ್ರನು ಆತನನ್ನು ಬೇಡಿಕೊಂಡನು. ಎಲ್ಲ ಪುರಾಣಗಳನ್ನೂ ಅರ್ಥಶಾಸ್ತ್ರ, ಧರ್ಮಶಾಸ್ತ್ರಗಳನ್ನೂ ಕೇಳಿ ಶ್ರೇಷ್ಠವಾದ ಕಾವ್ಯ ನಾಟಕಗಳನೇಕವನ್ನು ತಾನೇ ಓದಿ ನೋಡಿದ್ದರೂ ಜಗತ್ಪರಿಪೂಜ್ಯವಾದ ಈಶ್ವರಾಗಮಗಳಲ್ಲಿ ಆತನ ಮನಸ್ಸು ನೆಲೆ ನಿಂತಿದ್ದಿತಂತೆ! ಭಾರತವನ್ನು ಕೇಳುವ ಅಭಿಲಾಷೆ ಆತನಿಗೆ ವಿಶೇಷವಾಗಿದ್ದಿತು. ಅಲ್ಲದೆ ರಾಜರಾಜನು ಚಂದ್ರವಂಶದವನು. ಚಂದ್ರ ಪೂರು ಭರತೇಶ ಕುರುಪ್ರಭು ಪಾಂಡು ಭೂಪತಿಗಳು ತನ್ನ ವಂಶದವರೆಂಬ ಅಭಿಮಾನ, ಹೆಮ್ಮೆ, ಆ ಚಾಳುಕ್ಯ ಭೂಪನಿಗೆ! ಆದ್ದರಿಂದ 'ಅಸ್ಮದೀಯ ವಂಶಮುನ ಪ್ರಸಿದ್ಧುಲೈ ವಿಮಲ ಸದ್ಗುಣ ಶೋಭಿತುಲೈನ ಪಾಂಡವೋತ್ತಮುಲ ಚರಿತ್ರ ನಾಕು ಸಂತತಂಬು

ವಿನಂಗನಭೀಷ್ಟಮೆನ್ಮಯಿನ್ ’ ಎಂಬ ತನ್ನ ಉತ್ಕಟವಾದ ಅಪೇಕ್ಷೆಯನ್ನು ಸೂಚಿಸಿ ಭಾರತವನ್ನು ತೆಲುಗಿನಲ್ಲಿ ಹೇಳಬೇಕೆಂದು ಅರಸನು ನನ್ನಯಭಟ್ಟನಿಗೆ ಸೂಚಿಸಿದನು.

ಈ ಮಹಾಕಾರ್ಯ ಸಾಧನೆಗೆ ನನ್ನಯಭಟ್ಟನಿಗಿಂತ ಹೆಚ್ಚಿನ ಶಕ್ತರು ಯಾರು ಸಿಕ್ಕಬೇಕು ? ವ್ಯಾಸಮುನಿ ಸಮ್ಮತವಾದ ರೀತಿಯಲ್ಲಿ ತೆಲುಗಿನಲ್ಲಿ ರಚಿಸಬೇಕೆಂದು ರಾಜರಾಜನು ಹೇಳಿರುವುದನ್ನು ಗಮನಿಸುವಾಗ ಆತನಿಗೆ ಆ ವೇಳೆಗಾಗಲೇ ಕನ್ನಡದಲ್ಲಿ “ ಜಿನಸಮಯ ದೀಪಕ”ನೆನಿಸಿದ ಪಂಪನಿಂದ ವಿರಚಿತವಾದ ‘ ವಿಕ್ರಮಾರ್ಜುನ ವಿಜಯ ’ದ ಪರಿಚಯವಾಗಿದ್ದಿರಬಹುದೆಂಬ ಊಹೆಗೆ ಅವಕಾಶವಾಗುತ್ತದೆ. ಅದರಲ್ಲಿ ವ್ಯಾಸಭಾರತವನ್ನೇ ಆಮೂಲಾಗ್ರವಾಗಿ ಅನುಸರಿಸದೆ ಹಲವು ಮಾರ್ಪಾಡುಗಳನ್ನು ಮಾಡಿದ್ದುದು ಆತನಿಗೆ ಇಷ್ಟವಾಗಲಿಲ್ಲವೆಂದು ತೋರುತ್ತದೆ. ರಾಜರಾಜನರೇಂದ್ರನು ತನ್ನ ಕುಲಬ್ರಾಹ್ಮಣನಿಗೆ ಹೇಳಿದ ಇನ್ನೊಂದು ಮಾತು ಇಲ್ಲಿ ಸ್ಮರಣಾರ್ಹವಾಗಿದೆ.

ಬಹುಭಾಷಲ ಬಹುವಿಧಮುಲ
ಬಹುಜನಮುಲವಲನ ವಿನುಚು ಭಾರತ ಬದ್ಧ
ಸ್ಪೃಹಲಗುವಾರಿಕಿ ನೆಪ್ಪುಡು
ಬಹು ಯಾಗಂಬುಲ ಫಲಂಬು ಪರಮಾರ್ಥಮುಗುನ್

ಭಾರತ ಬದ್ಧಸ್ಪೃಹರಾದವರಿಗೆ ಅನೇಕ ಯಾಗಗಳನ್ನು ಮಾಡಿದ ಫಲ ಲಭಿಸುವುದೆಂದು ಅರಸನ ನಂಬಿಕೆ. ಆದ್ದರಿಂದ ಆತನು ಬಹುಭಾಷೆಗಳಲ್ಲಿ ಬಹು ವಿಧಗಳಲ್ಲಿ ರಚಿತವಾದ ಭಾರತಗಳನ್ನೆಲ್ಲ ಆಸಕ್ತಿಯಿಂದ ಕೇಳಿದ್ದನೆಂದು ತಿಳಿಯಬಹುದಾಗಿದೆ. ‘ ಬಹು ಭಾಷೆ, ಬಹು ವಿಧ ’ ಎಂಬ ಮಾತುಗಳಿಂದ ಸಂಸ್ಕೃತವೊಂದೇ ಅಲ್ಲದೆ ಇತರ ಭಾಷೆಗಳಲ್ಲಿ ರಚಿತವಾದ ಭಾರತಗಳ ಪರಿಚಯವೂ ಈತನಿಗಾಗಿದ್ದಿತೆಂದು ತಿಳಿಯಬೇಕು. ಬಾಲ್ಯದಲ್ಲಿ ಚೋಳರಾಜರಲ್ಲಿದ್ದವನಾದ್ದರಿಂದ ಆ ವೇಳೆಗೆ ತಮಿಳಿನಲ್ಲಿ ರಚಿತವಾಗಿದ್ದ ಭಾರತ ಕಾವ್ಯವನ್ನು ಇವನು ಓದಿಸಿ ಕೇಳಿರಬಹುದು. ಚಾಳುಕ್ಯರೇ ಆದ ವೇಮುಲವಾಡದ ರಾಜರ ಆಸ್ಥಾನದಲ್ಲಿದ್ದ ಪಂಪನ ಕನ್ನಡ ಭಾರತವೂ ಆತನಿಗೆ ಶ್ರುತವಾಗಿರಬೇಕು. ವೆಂಗಿ ಆ ಕಾಲಕ್ಕೆ ತೆಲುಗು ಕನ್ನಡಗಳೆರಡೂ ಬಳಕೆಯಲ್ಲಿದ್ದ ನಾಡೆಂದು ನಾವು ತಿಳಿಯಬೇಕು. ಗೋದಾವರಿಯವರೆಗೆ ಕನ್ನಡ ಹಬ್ಬಿದ್ದಿತೆಂಬ ನೃಪತುಂಗನ ಹೇಳಿಕೆ ಬರಿಯ ಅಭಿಮಾನದ, ಹೆಮ್ಮೆಯ ಮಾತೆಂದು ತಿಳಿಯುವಂತಿಲ್ಲ. ಅರಿಕೇಸರಿಗೂ ರಾಜರಾಜನಿಗೂ ಅಂತರ ಬಹಳವಲ್ಲ. ಕೇವಲ ಅರುವತ್ತು ಎಪ್ಪತ್ತು ವರ್ಷಗಳಿದ್ದರೆ ಹೆಚ್ಚೆನ್ನಬಹುದು. ಆದ್ದರಿಂದ ರಾಜರಾಜ ಪಂಪನ ‘ ವಿಕ್ರಮಾರ್ಜುನ ವಿಜಯ ’ ವನ್ನು ಓದಿಸಿ ಕೇಳಿ ಅದರಲ್ಲಿ ಅರಿಕೇಸರಿಯ ವೃತ್ತಾಂತ ಬರೆದಿರುವುದನ್ನು ಮೆಚ್ಚದೆ ಹೋಗಿರಬಹುದು ! ಆದ್ದರಿಂದಲೇ ಅವನು ‘ ಕೃಷ್ಣ ದ್ವೈಪಾಯನ ಮುನಿವೃಷಭಾಭಿಹಿತ ’ವಾದ ಭಾರತಾರ್ಥವನ್ನೇ ಹೇಳಬೇಕೆಂದು ಒತ್ತಾಯಪೂರ್ವಕವಾಗಿ ನನ್ನಯನಿಗೆ ಹೇಳಿದ್ದಾನೆ.

ನನ್ನಯ ರಾಜರಾಜನ ಕೋರಿಕೆಯಂತೆ ಭಾರತ ಕಥೆಯನ್ನು ತೆಲುಗಿನಲ್ಲಿ ರಚಿಸಲು ಒಪ್ಪಿಕೊಂಡಾದ ಮೇಲೆ ನಾರಾಯಣಭಟ್ಟನೆಂಬ ಒಬ್ಬ ಮಹಾವಿದ್ವಾಂಸ ನನ್ನು ಸ್ಮರಿಸಿ ಭಾರತ ರಚನಾಕಾರ್ಯದಲ್ಲಿ ತನಗೆ ಮಹತ್ತರವಾದ ಸಹಾಯ ಮಾಡಿದ ನೆಂದು ತಿಳಿಸಿ ಕೃತಜ್ಞತೆಯಿಂದ ಕೊಂಡಾಡಿದ್ದಾನೆ.

> ಪಾಯಕ ಪಾಕಶಾಸನಿಕಿ ಭಾರತ ಘೋರ ರಣಂಬುನಂದು ನಾ
> ರಾಯಣುನಟ್ಲು ವಾಸಿಗ ಧರಾಮರವಂಶ ವಿಭೂಷಣುಂಡು ನಾ
> ರಾಯಣ ಭಟ್ಟು ವಾಙ್ಮಯ ಧುರಂಧರುಡೂ ದನಕಿಪ್ಪುಡುನ ಸಹಾ
> ಧ್ಯಾಯುಡುನೈನವಾಡಭಿಮತಸ್ಥಿತಿ ದೋಡಯಿ ನಿರ್ವಹಿಂಪಗನ್

[ಆ ಘನ ಘೋರವಾದ ಮಹಾಭಾರತ ಯುದ್ಧದಲ್ಲಿ ಅರ್ಜುನನಿಗೆ ಆ ನಾರಾಯಣನು ಜತೆಯಾಗಿ ಸಹಾಯ ಮಾಡಿದಂತೆ ಬ್ರಾಹ್ಮಣವಂಶ ವಿಭೂಷಣ ನಾದ ನಾರಾಯಣಭಟ್ಟನು ತನಗೆ ಈ ಕಾರ್ಯಗೌರವದಲ್ಲಿ ಸಹಾಯ ಮಾಡಿದನು.] ಅವನು ನನ್ನಯನಿಗೆ ಸಹಾಧ್ಯಾಯಿ. ಅವನು ವಾಙ್ಮಯ ಧುರಂಧರ. ಎಲ್ಲಕ್ಕಿಂತ ಮಿಗಿಲಾಗಿ ಅವನು ನನ್ನಯನಿಗೆ ಇಷ್ಟನಾದವನು. ಅವನು ಜತೆಯಾಗಿ ಭಾರತ ರಚನಾ ಕಾರ್ಯಭಾರದಲ್ಲಿ ಸಹಾಯ ಮಾಡಿದನಂತೆ. ಹೀಗೆ ನನ್ನಯಭಟ್ಟ ಕಾವ್ಯಾ ರಂಭದಲ್ಲಿ ನಾರಾಯಣಭಟ್ಟನನ್ನು ಮಾತ್ರ ಸ್ಮರಿಸಿ ಬೇರಾವ ತೆಲುಗು ಕವಿಯನ್ನೂ ಸ್ಮರಿಸದೆ ಬಿಟ್ಟಿದ್ದಾನೆ. ಪಂಪನೂ ತನ್ನ ಹಿಂದಿನ ಕನ್ನಡ ಕವಿಗಳನ್ನಾಗಲಿ, ಸಮ ಕಾಲಿಕರನ್ನಾಗಲಿ ಹೆಸರಿಸಿಲ್ಲವೆಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. ಈ 'ಆದಿ ಕವಿ' ಗಳು ಗ್ರಂಥ ರಚನೆ ಕೈಕೊಂಡಾಗ ಹೇಳಿಕೊಳ್ಳಬಹುದಾದ ಹಿರಿಯ ಕೃತಿ ಕರ್ತರು ಯಾರೂ ಆ ಕಾಲದಲ್ಲಿ ಇಲ್ಲದೆ ಹೋಗಿರಬಹುದೆ? ಆದರೆ ಇವರಿಗಿಂತ ಮುಂಚೆ ಚಂಪೂ ಶೈಲಿಯ ಕೃತಿಗಳ ರಚನೆ ಆ ಭಾಷೆಗಳೆರಡರಲ್ಲಿಯೂ ನಡೆದಿತ್ತೆಂಬು ದಕ್ಕೆ ಆ ಕಾಲದ ಶಾಸನಗಳೇ ಸಾಕ್ಷಿಗಳಾಗಿವೆ. ಶಾಸನಗಳಲ್ಲಿಯೇ ಅಂಥ ಪದ್ಯ ಗಳನ್ನು ರಚಿಸಿದ ಜನ ಬೇರೆ ಕಾವ್ಯಗಳನ್ನು ಬರೆಯಬಲ್ಲವರಾಗಿದ್ದರೆಂಬುದರಲ್ಲಿ ಸಂಶಯವೇ ಇಲ್ಲ.

ನಾರಾಯಣಭಟ್ಟ ನನ್ನಯನಿಗೆ ನೀಡಿದ ಸಹಾಯವೇನಿರಬಹುದೆಂಬ ಪ್ರಶ್ನೆ ಹುಟ್ಟುತ್ತದೆ. ನಾರಾಯಣಭಟ್ಟನು ಸಂಸ್ಕೃತ, ಆಂಧ್ರ ಪ್ರಾಕೃತ ಭಾಷೆಗಳಲ್ಲಿಯೇ ಅಲ್ಲದೆ ಕರ್ಣಾಟ ಭಾಷೆಯಲ್ಲಿಯೂ ಹಿರಿಯ ಪಾಂಡಿತ್ಯಗಳಿಸಿದ್ದುದೇ ಅಲ್ಲದೆ ಕವಿಯೂ ಆಗಿದ್ದನೆಂದೂ ತಿಳಿದುಬಂದಿದೆ.* ಆತನು ರಚಿಸಿದ ಕಾವ್ಯಗಳು ಈಗ ಲಭಿಸಿಲ್ಲ. ಆತನು ಬರೆದ ಕಾವ್ಯಗಳು ಯಾವುವೆಂಬುದೂ ತಿಳಿಯದು. ಆದರೆ ಆತನು ಕನ್ನಡವನ್ನು ಚೆನ್ನಾಗಿ ಬಲ್ಲ ಮಹಾ ವಿದ್ವಾಂಸನಾಗಿದ್ದನೆಂಬ ವಿಚಾರದಲ್ಲಿ ಸಂದೇಹವಿಲ್ಲ. ಈತನು ನನ್ನಯಭಟ್ಟನಿಗೆ ಭಾರತ ರಚನೆಗೆ ಸಹಾಯಕನಾಗಿದ್ದನು.

---

* ನಂದಮಪೂಡಿ ಶಾಸನ.

“ ಪಾರ್ಥನಿಗೆ ಶ್ರೀಕೃಷ್ಣ ಹೇಗೆ ಸಹಾಯ ಮಾಡಿದನೋ ನನಗೆ ನಾರಾಯಣ ಭಟ್ಟ ಹಾಗೆ ನೆರವಾದನು ” ಎಂಬ ಕವಿಯ ವಾಕ್ಯವನ್ನು ಗ್ರಹಿಸಿದರೆ ನಾರಾಯಣಭಟ್ಟನು ಕವಿಗೆ ಮಾರ್ಗದರ್ಶಿಯಾಗಿದ್ದಿರಬೇಕೆಂದು ತೋರುತ್ತದೆ. ಶ್ರೀಕೃಷ್ಣನು ಪಾರ್ಥನ ಸಾರಥಿ, ಮಾರ್ಗದರ್ಶಿ, ಗುರು, ಗೆಳೆಯ! ಹಾಗೆಯೇ ಈತನೂ ನನ್ನಯನಿಗೆ ಸಹಾಧ್ಯಾಯಿ, ಇಷ್ಟನು! ಹಲವಾರು ಭಾರತ ಪಾಠಗಳು ಲಭಿಸಿದಾಗ ಯಾವುದನ್ನು ಇಟ್ಟುಕೊಳ್ಳಬೇಕು, ಯಾವುದನ್ನು ಬಿಡಬೇಕು ಎಂಬುದೇ ಮೊದಲ ಸಮಸ್ಯೆಯಾಗುತ್ತದೆ. ಹಲವು ಭಾಷೆಗಳಲ್ಲಿ ಪರಿಶ್ರಮ ಪಡೆದಿದ್ದ ಈ ಮಿತ್ರ ನನ್ನಯನಿಗೆ ಪಾಠ ನಿರ್ಣಯದಿಂದ ಹಿಡಿದು ಅನುವಾದ ಕಾರ್ಯ ಕೈಗೂಡುವವರೆಗೆ ಎಲ್ಲ ವಿಷಯಗಳಲ್ಲಿಯೂ ಮಾರ್ಗದರ್ಶಿಯಾಗಿದ್ದಿರಬಹುದು. ಆದ್ದರಿಂದಲೇ ಈತನನ್ನು ನನ್ನಯ ವಿಶೇಷವಾಗಿ ಮೆಚ್ಚಿಕೊಂಡು ಸ್ತೋತ್ರ ಮಾಡಿದ್ದಾನೆ. ರಾಜರಾಜ ನರೇಂದ್ರನು ನಾರಾಯಣಭಟ್ಟನಿಗೆ ನಂದಮಪೂಡಿಯೆಂಬ ಗ್ರಾಮವನ್ನು ಅಗ್ರಹಾರವಾಗಿ ಕೊಟ್ಟಿದ್ದಾನೆ. ಆ ದಾನಶಾಸನವನ್ನು ಸ್ವಯಂ ನನ್ನಯಭಟ್ಟನೇ ರಚಿಸಿದ್ದಾನೆ. ಭಾರತ ಬರೆದವನಿಗಿಂತ ಮುಂಚೆ ಅದಕ್ಕೆ ನೆರವು ನೀಡಿದ ಬ್ರಾಹ್ಮಣನಿಗೇ ಮನ್ನಣೆಯಾಗಿರುವುದನ್ನು ನೋಡಿದರೆ ಆತನು ನೀಡಿದ ನೆರವು, ಮಾಡಿದ ಮಾರ್ಗದರ್ಶನ, ಮಹತ್ವಪೂರ್ಣವಾದುದೇ ಆಗಿರಬೇಕು. ಕನ್ನಡದ ಕವಿ ಪಂಪ ರಚಿಸಿದ್ದ ‘ ವಿಕ್ರಮಾರ್ಜುನ ವಿಜಯ ’ ವನ್ನು ನಾರಾಯಣಭಟ್ಟನು ಕವಿಗೆ ಓದಿ ಹೇಳಿರಬೇಕು. ಭಾರತವನ್ನು ಕನ್ನಡಿಸುವಾಗ, ಸಂಕ್ಷೇಪಿಸುವಾಗ, ಆ ಕವಿ ಅಳವಡಿಸಿಕೊಂಡಿದ್ದ ಕ್ರಮವನ್ನು ನಾರಾಯಣಭಟ್ಟ ಕವಿಗೆ ತಿಳಿಯಹೇಳಿದ್ದಾನೆ. ಇದಕ್ಕೆ ಮೊದಲು ತೆಲುಗಿನಲ್ಲಿ ಇಂಥ ಮಹಾಕಾವ್ಯವಿರಲಿಲ್ಲ. ಪದ್ಯ ಗದ್ಯ ಮಿಶ್ರಿತವಾದ ಚಂಪೂ ಶೈಲಿಯಲ್ಲಿ ಬರೆಯುವ ವಾಡಿಕೆ ಪಂಪನಿಂದ ಕನ್ನಡದಲ್ಲಿ ಬಳಕೆಗೆ ಬಂದಿತ್ತು. ಅದನ್ನೇ ನನ್ನಯ ಭಟ್ಟನು ಅನುಸರಿಸಿದ್ದಾನೆ. ತನಗೆ ಮಾದರಿಯಾಗಬಹುದಾದಂಥ ದೊಡ್ಡ ಕಾವ್ಯಗಳಾವುವೂ ಆ ಕಾಲಕ್ಕೆ ತೆಲುಗಿನಲ್ಲಿ ಇಲ್ಲದೆಹೋದುದರಿಂದಲೂ ತಾನು ರಚಿಸುವ ಕಾವ್ಯ ರಾಜರಾಜನ ಸಭೆಯಲ್ಲಿ ಮೆಚ್ಚುಗೆಗೆ ಪಾತ್ರವಾಗದೆ ಹೋದೀತೆಂಬ ಅಂಜಿಕೆ ಬಂದುದರಿಂದಲೂ ನನ್ನಯಭಟ್ಟ ಆ ವೇಳೆಗೆ ಪ್ರಸಿದ್ಧವಾಗಿ ಜನಪೂಜೆಗೆ ಪಾತ್ರವಾಗಿದ್ದ ಇತರ ದೇಶಭಾಷೆಗಳಲ್ಲಿನ ಭಾರತ ಕಾವ್ಯಗಳ ಪರಿಚಯ ಪಡೆಯಬಯಸಿದ್ದರೆ ಆಶ್ಚರ್ಯವೇನೂ ಇಲ್ಲ. ಅರ್ಜುನನಿಗೆ ಕೃಷ್ಣ ಭಾರತಯುದ್ಧದಲ್ಲಿ ಧೈರ್ಯ ತುಂಬಿದ ಹಾಗೆ ಭಾರತ ಕಾವ್ಯ ನಿರ್ಮಾಣ ಕಾರ್ಯದಲ್ಲಿ ನನ್ನಯನಿಗೆ ಧೈರ್ಯ ನೀಡಲು ಆತನ ಗೆಳೆಯನಾದ ನಾರಾಯಣಭಟ್ಟ ತನಗೆ ಚೆನ್ನಾಗಿ ಪರಿಚಿತವಾದ ಕನ್ನಡ ಭಾರತದ ರಚನಾ ವಿಧಾನವನ್ನು ವಿಶದೀಕರಿಸಿ ಮಾರ್ಗದರ್ಶನ ಮಾಡಿದನೆಂದು ತಿಳಿಯಬಹುದು.

# ೧. ಅನುಕ್ರಮಣಿಕೆ

ಪಂಪ ನನ್ನಯರಿಬ್ಬರೂ ವ್ಯಾಸಪ್ರಣೀತವಾದ ಮಹಾಭಾರತವನ್ನೇ ಆಧಾರವಾಗಿಟ್ಟುಕೊಂಡು ಕಾವ್ಯ ರಚನೆ ಮಾಡಿರುವರಾದರೂ ಅವರು ಅದನ್ನು ಸಂಗ್ರಹ ಮಾಡಿದ್ದಾರೆ. ನನ್ನಯನು ತನ್ನ ಗ್ರಂಥದ ಆರಂಭದಲ್ಲಿ ಒಂದು ಪರ್ವಾನುಕ್ರಮಣಿಕೆಯನ್ನೂ ಪರ್ವ ಸಂಗ್ರಹವನ್ನೂ ಕೊಟ್ಟಿದ್ದಾನೆ. ಅದರಲ್ಲಿ ತಾನು ಕಂಡಿದ್ದ ವ್ಯಾಸಭಾರತದ ಗಾತ್ರವನ್ನು ತಿಳಿಸಿದ್ದಾನೆ. ನನ್ನಯನ ಹೇಳಿಕೆಯ ಪ್ರಕಾರ ಭಾರತ ಒಂದು ಲಕ್ಷಕ್ಕಿಂತ ಹೆಚ್ಚು ಶ್ಲೋಕಗಳಿಂದ ಕೂಡಿದ್ದ ಮಹಾ ಗ್ರಂಥ. ಅವನ ಅನುಕ್ರಮಣಿಕೆಯಂತೆ ಅದು ನೂರು ಪರ್ವಗಳಿಂದ ಕೂಡಿದ ಗ್ರಂಥ! ಅಷ್ಟಾದಶ ಪರ್ವಗಳೆಂದು ಹೇಳುವುದು ವಾಡಿಕೆಯಾಗಿದೆ. ನನ್ನಯನ ಕಾಲಕ್ಕೂ ಆ ಪದ್ಧತಿ ಇದ್ದಿತೆಂದು ಅವನ ಪರ್ವಸಂಗ್ರಹದೊಳಗಿನ ಈ ಪದ್ಯದಿಂದ ತಿಳಿಯುತ್ತದೆ.

> ಮದಿ ಪೌಷ್ಯಪರ್ವ ಮಾದಿಗ
> ಬದುನೆನಿಮಿದಿ ಪರ್ವಮುಲನು ಬರ್ವಿ ಮನಃ ಪ್ರೀ
> ತಿದ ಮಗುಚು ನಾದಿಪರ್ವಂ
> ಬದಿ ವಿನಗಾ ನೊಪ್ಪು ಭಾರತಾದ್ಯಂ ಬಗುಚುನ್
>
> [I–36]

[ಪೌಷ್ಯಪರ್ವವಾದಿಯಾಗಿ ಹದಿನೆಂಟು ಪರ್ವಗಳಲ್ಲಿ ಹಬ್ಬಿ ಮನಃಪ್ರೀತಿಕಾರಕವಾದ ಮಹಾಭಾರತಕ್ಕೆ ಆದಿಪರ್ವವೇ ಮೊದಲನೆಯದು] ಆದರೂ ನನ್ನಯ ಕೊಟ್ಟಿರುವ ಪರ್ವಾನುಕ್ರಮಣಿಕೆ ಮಾತ್ರ ಶತಪರ್ವಗಳ ಹೆಸರುಗಳನ್ನು ಹೇಳಿದೆ. ಒಂದೊಂದು ಪರ್ವವನ್ನೂ ಉಪಪರ್ವಗಳಾಗಿ ವಿಂಗಡಿಸುವುದೂ ಉಂಟಷ್ಟೆ.

ಅನುಕ್ರಮಣಿಕೆಯಲ್ಲಿ ನನ್ನಯ ನೂರು ಪರ್ವಗಳ ಹೆಸರುಗಳನ್ನು ಮಾತ್ರ ಹೇಳಿದ್ದಾನೆ. ಅದರಲ್ಲಿ ಆ ಪರ್ವಗಳ ಶ್ಲೋಕಸಂಖ್ಯೆ ಇಲ್ಲ. ಸಂಸ್ಕೃತಭಾರತದಲ್ಲಿಯೂ ಈಗ ಅನುಕ್ರಮಣಿಕೆ ಪರ್ವಸಂಗ್ರಹಗಳೆರಡೂ ಇರುತ್ತವೆಯಾದರೂ ಆ ಅನುಕ್ರಮಣಿಕೆಯೇ ಹಲವು ಶ್ಲೋಕಗಳಿಂದ ಕೂಡಿ ಹೆಚ್ಚು ವಿಸ್ತಾರವಾಗಿರುತ್ತದೆ. ಅದರಲ್ಲಿ ನನ್ನಯ ಹೇಳಿರುವಂತೆ ಬಹಳ ಸಂಕ್ಷೇಪವಾದ ಹೆಸರುಗಳಿಲ್ಲ.

ಪಂಪ ತನ್ನ ಗ್ರಂಥದ ಆರಂಭದಲ್ಲಿ ಇಂಥ ಅನುಕ್ರಮಣಿಕೆ ಯಾವುದನ್ನೂ ಕೊಟ್ಟಿಲ್ಲ. ಅವನು ಪರ್ವಸಂಗ್ರಹವನ್ನೂ ಹೇಳಿಲ್ಲ. ತಾನೇ ನೋಡಿದ ಸಂಸ್ಕೃತ ಭಾರತದ ಶ್ಲೋಕಸಂಖ್ಯೆ ಮುಂತಾದ ವಿವರಗಳೇನನ್ನೂ ಪಂಪ ಹೇಳಿಲ್ಲ. ಆದರೆ ತನ್ನ ಭಾರತವನ್ನೆಲ್ಲ ರಚಿಸಿಯಾದಮೇಲೆ ಕೊನೆಯಲ್ಲಿ ಒಂದು ಅನುಕ್ರಮಣಿಕೆಯನ್ನು ಕೊಟ್ಟಿದ್ದಾನೆ. ಅದು ಬಹಳಮಟ್ಟಿಗೆ ನನ್ನಯ ರಚಿಸಿರುವ ಪರ್ವಾನುಕ್ರಮಣಿಕೆಯನ್ನೇ ಹೋಲುತ್ತದೆ. ಪಂಪ ನೂರು ಪರ್ವಗಳ ಹೆಸರುಗಳನ್ನು ಹೇಳಿಲ್ಲ.

ಆರವತ್ತೊಂಬತ್ತು ಹೆಸರುಗಳನ್ನು ಮಾತ್ರ ಕೊಟ್ಟು "ಪೆಱವುಮುಪಾಖ್ಯಾನ ಕಥೆಗಳೊಳವೊಂದುಂ ಕುಂದಲೀಯದೆ ಪೇಟ್ದೆಂ" ಎಂದು ನುಡಿದು ಮುಗಿಸಿದ್ದಾನೆ.

ಈ ಉಭಯ ಕವಿಗಳೂ ಕೊಟ್ಟಿರುವ ಅನುಕ್ರಮಣಿಕೆಗಳ ಪರಸ್ಪರ ಸಾಮ್ಯ ಗಮನಾರ್ಹವಾಗಿದೆ. ಪಂಪ ಭಾರತಾಂತ್ಯದಲ್ಲಿ ಕೊಟ್ಟಿರುವ ಅನುಕ್ರಮಣಿಕೆ ಹೀಗಿದೆ:

"ಆದಿವಂಶಾವತಾರ ಸಂಭವಂ ರಂಗಪ್ರವೇಶಂ ಜತುಗೃಹದಾಹಂ ಹಿಡಿಂಬ ವಧೆ ಬಕಾಸುರವಧೆ ದ್ರೌಪದೀ ಸ್ವಯಂವರಂ ವೈವಾಹಂ, ಯುಧಿಷ್ಠಿರಪಟ್ಟಬಂಧನಂ, ಇಂದ್ರಪ್ರಸ್ಥ ಪ್ರವೇಶಂ ಅರ್ಜುನ ದಿಗ್ವಿಜಯಂ, ದ್ವಾರಾವತೀ ಪ್ರವೇಶಂ ಸುಭದ್ರಾ ಹರಣಂ, ಸುಭದ್ರಾ ವಿವಾಹಂ, ಖಾಂಡವವನ ದಹನಂ ಮಯದರ್ಶನಂ ನಾರದಾ ಗಮನಂ ಜರಾಸಂಧವಧೆ ರಾಜಸೂಯಂ ಶಿಶುಪಾಲವಧೆ, ದ್ಯೂತವ್ಯತಿಕರಂ ವನ ಪ್ರವೇಶಂ, ಕಿಮ್ಮೀರವಧೆ ಕಾಮ್ಯಕವನದರ್ಶನಂ ದ್ವೈತವನ ಪ್ರವೇಶಂ, ಸೈಂಧವ ಬಂಧನಂ ಚಿತ್ರಾಂಗದಯುದ್ಧಂ ಕಿರಾತ ದೂತಾಗಮನಂ ದ್ರೌಪದೀವಾಕ್ಯಂ, ಪಾರಾ ಶರ ವೀಕ್ಷಣಂ ಇಂದ್ರಕೀಲಾಭಿಗಮನಂ, ಈಶ್ವರಾರ್ಜುನಯುದ್ಧಂ ದಿವ್ಯಾಸ್ತ್ರಲಾಭಂ ಇಂದ್ರಲೋಕಾಲೋಕನಂ ನಿವಾತಕವಚಾಸುರವಧೆ, ಕಾಳಕೇಯ ಪೌಳೋಮವಧೆ ಸೌಗಂಧಿಕ ಕಮಲಾಹರಣಂ ಜಟಾಸುರವಧೆ ಮಾಯಾಮತ್ತ ಹಸ್ತಿವ್ಯಾಜಂ (೩೮) ಇಲ್ಲಿಗೆ ಆದಿಪರ್ವ, ಸಭಾಪರ್ವ, ಅರಣ್ಯಪರ್ವಗಳ ಕಥಾಭಾಗ ಮುಗಿಯುತ್ತದೆ. ನನ್ನಯಭಟ್ಟನ ಈ ಭಾಗದ ಅನುಕ್ರಮಣಿಕೆಯನ್ನು ಗಮನಿಸೋಣ :

ಆದಿಯುನುಂ ಪೌಷ್ಯಂಬು, ಪೌಲೋಮಂಬು, ಆಸ್ತೀಕಂಬು, ಆದಿವಂಶಾವ ತಾರಂಬು, ಸಂಭವಪರ್ವಂಬು, ಜತುಗೃಹದಾಹಂಬು, ಹೈಡಿಂಬಂಬು, ಬಕವಧ ಚೈತ್ರ ರಥಂಬು, ದ್ರೌಪದೀಸ್ವಯಂವರಂಬು, ವೈವಾಹಿಕಂಬು, ವಿದುರಾಗಮನಂಬು ರಾಜ್ಯಾರ್ಥಲಾಭಂಬು, ಅರ್ಜುನತೀರ್ಥಯಾತ್ರ ಸುಭದ್ರಕಲ್ಯಾಣಂಬು, ಹರಣಹಾರಿಕ ಖಾಂಡವದಹನಂಬು, ಮಯದರ್ಶನಂಬು, ಸಭಾಪರ್ವಂಬು, ಮಂತ್ರಪರ್ವಂಬು, ಜರಾ ಸಂಧವಧ ದಿಗ್ವಿಜಯಂಬು, ರಾಜಸೂಯಂಬು, ಆರ್ಘ್ಯಾಭಿಹರಣಂಬು, ಶಿಶುಪಾಲವಧ ದ್ಯೂತಂಬು, ಅನುದ್ಯೂತಂಬು, ಅರಣ್ಯಂಬು, ಕಿಮ್ಮೀರವಧ ಇಂದ್ರಕೀಲಾಭಿ ಗಮನಂಬು, ಕೈರಾತಂಬು, ಧರ್ಮಜ ತೀರ್ಥಯಾತ್ರ, ಜಟಾಸುರವಧ, ಯಕ್ಷ ಯುದ್ಧಂಬು, ಆಜಗರಂಬು, ಮಾರ್ಕಂಡೇಯೋಪಾಖ್ಯಾನಂಬು, ಸತ್ಯಾ ದ್ರೌಪದೀ ಸವಾದಂಬು, ಘೋಷಯಾತ್ರ ಪ್ರಾಯೋಪವೇಶಂಬು, ವ್ರೀಹಿ ದ್ರೋಣಕಾಖ್ಯಾ ನಂಬು, ದೌಪದೀಹರಣಂಬು, ಕುಂಡಲಾಹರಣಂಬು, ಆರಣೇಯಂಬು, (೪೩).

ಇಲ್ಲಿಗೆ ಆದಿಪರ್ವ ಸಭಾಪರ್ವ ಅರಣ್ಯಪರ್ವಗಳ ಇತಿವೃತ್ತ ಮುಗಿಯುತ್ತದೆ. ಪಂಪನ ಅನುಕ್ರಮಣಿಕೆಯ ಈ ಭಾಗದಲ್ಲಿ ಮೂವತ್ತೆಂಟು ಹೆಸರುಗಳೂ, ನನ್ನಯ ನಲ್ಲಿ ನಲವತ್ತುಮೂರು ಹೆಸರುಗಳೂ ಇವೆ. ಕಂಡಹಾಗೆ ನನ್ನಯಭಟ್ಟ ಐದು ಹೆಸರುಗಳನ್ನು ಹೆಚ್ಚಾಗಿ ಹೇಳಿದ್ದಾನೆ. ಆದರೆ ನನ್ನಯನ ಅನುಕ್ರಮಣಿಕೆಯಲ್ಲಿ ಇಲ್ಲದ ಕೆಲವು ಹೆಸರುಗಳನ್ನು ಪಂಪ ಹೇಳಿರುವನೆಂಬುದನ್ನು ಗಮನಿಸಬೇಕು.

"ರಾಜ್ಯಾರ್ಥಲಾಭಂಬು" ಎಂಬ ಒಂದು ಮಾತಿನಲ್ಲಿ ನನ್ನಯ ಹೇಳಿ ಮುಗಿಸಿರುವುದನ್ನು ಪಂಪ "ಯುಧಿಷ್ಠಿರ ಪಟ್ಟಬಂಧನಂ, ಇಂದ್ರಪ್ರಸ್ಥಪ್ರವೇಶಂ" ಎಂದು ಬೆಳೆಸಿದ್ದಾನೆ. ನನ್ನಯ "ಅರ್ಜುನ ತೀರ್ಥಯಾತ್ರ" ಎಂದರೆ ನಮ್ಮ ಪಂಪ 'ಅರ್ಜುನ ದಿಗ್ವಿಜಯಂ' ಎಂದು ವ್ಯತ್ಯಾಸ ಮಾಡಿದ್ದಾನೆ. "ದ್ವಾರಾವತೀ ಪ್ರವೇಶಂ, ಸುಭದ್ರಾಹರಣಂ' ಎಂಬ ಹೆಸರುಗಳು ಪಂಪನಲ್ಲಿ ಮಾತ್ರ ಕಾಣಿಸಿವೆ. ಪಂಪ 'ದ್ಯೂತವ್ಯತಿಕರಂ' ಎಂದಿಷ್ಟೇ ಹೇಳಿದ್ದಾನೆ. ಏಕೆಂದರೆ ಅವನು ಅನುದ್ಯೂತದ ಕಥೆಯನ್ನೇ ಹೇಳಿಲ್ಲ!

"ಈಶ್ವರಾರ್ಜುನ ಯುದ್ಧಂ, ದಿವ್ಯಾಸ್ತ್ರಲಾಭಂ, ಇಂದ್ರಲೋಕಾಲೋಕನಂ, ನಿವಾತಕವಚಾಸುರ ವಧೆ, ಕಾಳಕೇಯ ಪೌಲೋಮವಧೆ ಸೌಗಂಧಿಕ ಕಮಲಾಹರಣಂ" ಎಂಬ ಹೆಸರುಗಳು ನನ್ನಯನಲ್ಲಿಲ್ಲ. ಪಂಪನು ಅರ್ಜುನನ ಪ್ರಾಶಸ್ತ್ಯವನ್ನು ನಿರೂಪಿಸಲು ಕಥೆಯಲ್ಲಿ ಮಾಡಿದ ಹಲವು ವ್ಯತ್ಯಾಸಗಳನ್ನು ಈ ಅನುಕ್ರಮಣಿಕೆಯಲ್ಲಿಯೂ ಸೂಚಿಸಿದ್ದಾನೆ. ಅರ್ಜುನ ದ್ವಾರಾವತಿಗೆ ಹೋಗಿ ಸುಭದ್ರೆಯನ್ನು ತಂದುಕೊಂಡ ವೃತ್ತಾಂತವನ್ನು ವರ್ಣಿಸುವುದರಲ್ಲಿ ಪಂಪನಿಗೆ ಉತ್ಸಾಹ ಹೆಚ್ಚು! ಇದರಿಂದ ಮೂಲ ಭಾರತದ ಪ್ರತಿಯಲ್ಲಿದ್ದ ಅನುಕ್ರಮಣಿಕೆಯನ್ನು ಬಹುಶಃ ನನ್ನಯ ಭಟ್ಟ ಯಥಾತಥವಾಗಿ ಅನುವಾದ ಮಾಡಿದ್ದಾನೆಂದೂ, ಪಂಪ ತನಗೆ ಅನಗತ್ಯವೆನಿಸಿದ ಕೆಲವು ಅಂಶಗಳನ್ನು ಬಿಟ್ಟು ಬೇಕೆನಿಸಿದ ಬೇರೆ ಕೆಲವು ಅಂಶಗಳನ್ನು ಸೇರಿಸಿರುವನೆಂದೂ ಭಾವಿಸಬೇಕಾಗಿದೆ. ಆದರೆ ಅನೇಕ ಮಾತುಗಳು ಎರಡು ಭಾರತಗಳಲ್ಲಿಯೂ ಒಂದೇ ಆಗಿವೆ! ತೆಲುಗಿನ ವಿಭಕ್ತಿ ಪ್ರತ್ಯಯವನ್ನು ಬಿಟ್ಟರೆ ಪಂಪನ ಮಾತೇ ಆಗಿ ಉಳಿಯುತ್ತವೆ ಆ ಹೆಸರುಗಳು! ಆದಕಾರಣ ಪಂಪ ಬಳಸಿದ ಸಂಸ್ಕೃತ ಭಾರತದ ಪಾಠದಲ್ಲಿ ಈ 'ಶತಪರ್ವ' ಗಳ ವಿವರಣೆಯಿಂದ ಕೂಡಿದ ಅನುಕ್ರಮಣಿಕೆಯಿದ್ದಿರಬೇಕು. ನನ್ನಯಭಟ್ಟನೂ ಬಹುಶಃ ಆ ಪಾಠವನ್ನೇ ಬಳಸಿದ್ದಾನೆ. ಏಕೆಂದರೆ ಇಬ್ಬರು ಕವಿಗಳೂ ಹತ್ತಿರದ ಊರುಗಳಲ್ಲಿ ಚಾಲುಕ್ಯ ರಾಜರ ಆಸ್ಥಾನಗಳಲ್ಲಿದ್ದವರು. ಇಬ್ಬರ ಕಾಲಗಳ ನಡುವಿನ ಅಂತರವೂ ಹೆಚ್ಚಾಗಿರಲಿಲ್ಲ. ಅನುಕ್ರಮಣಿಕೆಯ ಉಳಿದ ಭಾಗದಲ್ಲಿಯೂ ಹೀಗೆಯೇ ನನ್ನಯ ಮೂಲದಲ್ಲಿದ್ದ ಎಲ್ಲ ಹೆಸರುಗಳನ್ನೂ ಕೊಟ್ಟು ಕಡೆಯಲ್ಲಿ 'ಅನು ಶತಪರ್ವಂಬು ಗಲಿಗಿ' ಎಂದು ಹೇಳಿ ಭಾರತ ಮಹಿಮೆಯನ್ನು ಹೊಗಳುವ ಒಂದು ಸೀಸಪದ್ಯವನ್ನು ಬರೆದು ಮುಗಿಸಿದ್ದಾನೆ. ಪಂಪ ಇದರಲ್ಲಿ ಕೆಲವು ಹೆಸರುಗಳನ್ನು ಹೇಳದೆ ಬಿಟ್ಟು "ಪೆಱವುಮುಪಾಖ್ಯಾನ ಕಥೆಗಳೊಳವೊಂದು ಕುಂದಲೀಯದೆ ಪೇೞ್ದೆಂ" ಎಂದು ಹೇಳಿಕೊಂಡಿದ್ದಾನೆ! ಪಂಪನಿಗೆ ವಿಕ್ರಮಾರ್ಜುನನ ವಿಜಯ ಪರಂಪರೆಯನ್ನು ಹೊಗಳುವುದರಲ್ಲಿ ಆಸಕ್ತಿಯೇ ಹೊರತು ವ್ಯಾಸಭಾರತವನ್ನು ಆಮೂಲಾಗ್ರವಾಗಿ ಅನುವಾದ ಮಾಡುವುದರಲ್ಲಿಲ್ಲ. ಮಹಾಭಾರತದ ಕಥೆಯಲ್ಲಿ ಪಂಪ ಸ್ವಾತಂತ್ರ್ಯ ವಹಿಸಿ ಹಲವು ವ್ಯತ್ಯಾಸಗಳನ್ನು ಮಾಡಿದ್ದಾನೆ. ನನ್ನಯ ಪಂಪರಿಬ್ಬರೂ ಹೇಳಿರುವ

ಅನುಕ್ರಮಣಿಕೆಯ ಪರ್ವನಾಮಗಳಲ್ಲಿ 'ಸ್ತ್ರೀ ಪರ್ವಂ' ಎಂಬುದೊಂದು ಮಾತ್ರ ಇಂದು ಬಳಕೆಯಲ್ಲಿರುವ ಭಾರತದ ಹದಿನೆಂಟು ಪರ್ವಗಳಲ್ಲಿ ಒಂದರ ಹೆಸರಾಗಿದೆ. ಉಳಿದುವೆಲ್ಲ ಬೇರೆ ಬೇರೆ ಹೆಸರುಗಳೇ ಆಗಿವೆ. ಆದರೆ ಪಂಪನೂ ನನ್ನಯಭಟ್ಟನೂ ಆ ಹೆಸರುಗಳನ್ನು ಒಂದೇ ಕ್ರಮದಲ್ಲಿ ಹೇಳಿದ್ದಾರೆ. ಉಭಯ ಕವಿಗಳೂ ಬಳಸಿರುವ ಸಮಾಸ ಪದಗಳ ಸಾದೃಶ್ಯ ಗಮನಾರ್ಹವಾಗಿದೆ.

ನನ್ನಯಭಟ್ಟನು ಪರ್ವಾನುಕ್ರಮಣಿಕೆಯಾದಮೇಲೆ ಒಂದು 'ಪರ್ವಸಂಗ್ರಹ'ವನ್ನೂ ಬರೆದಿದ್ದಾನೆ. ಅದರಲ್ಲಿ ಕವಿಯು ಪ್ರತಿಯೊಂದು ಪರ್ವದ ಕಥಾ ವಿವರಗಳನ್ನು ಇನ್ನಷ್ಟು ವಿಸ್ತಾರವಾಗಿ ತಿಳಿಸಿರುವುದಲ್ಲದೆ ತಾನು ಅನುವಾದಕ್ಕೆ ಆರಿಸಿಕೊಂಡ ಸಂಸ್ಕೃತ ಭಾರತದಲ್ಲಿನ ಶ್ಲೋಕಸಂಖ್ಯೆಯನ್ನೂ ಹೇಳಿದ್ದಾನೆ. ಅದರ ಪ್ರಕಾರ ಮಹಾಭಾರತದ ಶ್ಲೋಕಸಂಖ್ಯೆ ಒಂದು ಲಕ್ಷಕ್ಕಿಂತ ಹೆಚ್ಚಾಗಿಯೇ ಇದೆ. ನನ್ನಯನೂ ಮೂಲಭಾರತದ ಕಥೆಯನ್ನು ಸಂಕ್ಷೇಪಿಸಿ ಅನುವಾದ ಮಾಡಿರುವನೆಂಬುದು ಸುಸ್ಪಷ್ಟವಾಗಿದೆ. ಈ ಗ್ರಂಥ ಸಂಗ್ರಹಣ ಕಾರ್ಯದಲ್ಲಿ ಪಂಪನು ಅನುಸರಿಸಿರುವ ತಂತ್ರಕ್ಕೂ ನನ್ನಯಭಟ್ಟನು ಅನುಸರಿಸಿರುವ ತಂತ್ರಕ್ಕೂ ಹೆಚ್ಚು ಭೇದವಿಲ್ಲ. ಈ ಉಭಯ ಕವಿಗಳ ಧ್ಯೇಯ, ದೃಷ್ಟಿ, ಧರ್ಮ, ಸಂಸ್ಕಾರಗಳಲ್ಲಿ ಭೇದವಿದ್ದರೆ ಅವರ ಕಾರ್ಯವಿಧಾನದಲ್ಲಿ ವ್ಯತ್ಯಾಸವಿಲ್ಲ. ಪಂಪಭಾರತ ಮತ್ತು ಆಂಧ್ರಭಾರತಗಳ ಗಾತ್ರದಲ್ಲಿ ವ್ಯತ್ಯಾಸವಿದೆ. ಅದಕ್ಕೆ ನನ್ನಯನು ಕೆಲವು ಪುರಾಣ ಕಥೆಗಳನ್ನು ಕೈಬಿಡಲು ಇಷ್ಟಪಡದಿದ್ದುದೇ ಕಾರಣ. ಪಂಪನು ಜೈನಧರ್ಮ ಪ್ರಭಾವಕ್ಕೊಳಗಾಗಿ ಕಥೆಯ ಕೆಲವು ಅಂಶಗಳನ್ನು ವ್ಯತ್ಯಾಸಪಡಿಸಿರುವುದೂ ಉಂಟು. ಇವರಿಬ್ಬರ ಕಾವ್ಯಗಳ ಸಾದೃಶ್ಯ-ವೈದೃಶ್ಯಗಳನ್ನು ಗಮನಿಸಿ ಅವುಗಳಿಂದ ಅವರ ಮನೋಧರ್ಮ ಹೇಗೆ ವ್ಯಕ್ತವಾಗಿದೆಯೆಂಬುದನ್ನು ವಿಚಾರಮಾಡೋಣ.

## ೨. ಭಾರತ ದರ್ಶನ—ನನ್ನಯಭಟ್ಟ

ಪರನು ವೈದಿಕಶಿರೋಮಣಿಯಾದ ನನ್ನಯಭಟ್ಟನಿಗೆ ಮಹಾಭಾರತ ಬಹಳ ಪವಿತ್ರವೂ ಪುಣ್ಯಪ್ರದವೂ ಆದ ಗ್ರಂಥ. ಅದರ ವಿಚಾರದಲ್ಲಿ ಆತನಿಗೆ ವೇದ ಸಮನಾದ ಪೂಜ್ಯಭಾವ. ಭಾರತಪಠಣದಿಂದ ಧರ್ಮ ನೀತಿಗಳು ಅರಿವಾಗುತ್ತವೆ. ಅದರಿಂದ ಆತ್ಮಜ್ಞಾನ ಲಭಿಸುತ್ತದೆ.

ಸೀಸ॥ ಧರ್ಮತತ್ತ್ವಜ್ಞುಲು ಧರ್ಮಶಾಸ್ತ್ರಂಬನಿ
ಯಧ್ಯಾತ್ಮವಿದುಲು ವೇದಾಂತಮನಿಯು
ನೀತಿವಿಚಕ್ಷಣುಲ್ ನೀತಿಶಾಸ್ತ್ರಂಬನಿ
ಕವಿವೃಷಭುಲು ಮಹಾಕಾವ್ಯಮನಿಯು
ಲಾಕ್ಷಣಿಕುಲು ಸರ್ವಲಕ್ಷ್ಯ ಸಂಗ್ರಹಮನಿ
ಯೈತಿಹಾಸಿಕುಲಿತಿಹಾಸ ಮನಿಯು
ಬರಮ ಪೌರಾಣಿಕುಲ್ ಬಹುಪುರಾಣ ಸಮುಚ್ಚಯಂ
ಬನಿ ಮಹಿ ಗೊನಿಯಾಡುಚುಂಡ
ವಿವಿಧವೇದ ತತ್ತ್ವವೇದಿ ವೇದವ್ಯಾಸುಡಾದಿಮುನಿ
ಪರಾಶರಾತ್ಮಜುಂಡು
ವಿಷ್ಣುಸನ್ನಿಭುಂಡು ವಿಶ್ವಜನೀನಮೈ
ಪರಗುಚುಂಡ ಜೇಸೆ ಭಾರತಂಬು [1]

ಎಂದು ನನ್ನಯ ಭಾರತದ ಸ್ವರೂಪವನ್ನು ವಿವರಿಸಿದ್ದಾನೆ. ಧರ್ಮಶಾಸ್ತ್ರಜ್ಞರಿಗೆ ಅದು ಧರ್ಮಸಂಹಿತೆ, ಅಧ್ಯಾತ್ಮವಿದರಿಗೆ ಭಾರತ ವೇದಾಂತ, ನೀತಿ ವಿಚಕ್ಷಣರಿಗೆ ಅದು ನೀತಿಶಾಸ್ತ್ರ, ಕವಿವೃಷಭರಿಗೆ ಅದು ಮಹಾಕಾವ್ಯ. ಲಾಕ್ಷಣಿಕರ ಕಣ್ಣಿಗೆ ಅದು ಸರ್ವ ಲಕ್ಷ್ಯಗಳ ಸಂಗ್ರಹವಂತೆ! ಐತಿಹಾಸಿಕರ ಪಾಲಿಗೆ ಭಾರತ ಇತಿಹಾಸ! ಪರಮ ಪೌರಾಣಿಕರು ಭಾರತವನ್ನು ಪುರಾಣ ಸಮುಚ್ಚಯವೆಂದೇ ಭಾವಿಸುತ್ತಾರೆ. ವಿಷ್ಣುಸನ್ನಿಭನಾದ ವೇದವ್ಯಾಸಮುನಿ ವಿಶ್ವಜನರಿಗೂ ಉಪಯುಕ್ತವಾಗಿ ಬೆಳಗುವಂತೆ ಭಾರತವನ್ನು ರಚಿಸಿ ಲೋಕಕ್ಕೆ ನೀಡಿದನು!

ಮಹಾಭಾರತ ಅಮಿತಾಖ್ಯಾನ ಶಾಖೆಗಳೊಡನೆ ಕೂಡಿ ಚಿಗುರಿ ವೇದಾರ್ಥ ವೆಂಬ ಅಮಲಚ್ಛಾಯೆಯನ್ನು ಕೊಡುವ ದಿವ್ಯವೃಕ್ಷ. ಚತುರ್ವರ್ಗಗಳೇ ಈ ವೃಕ್ಷದ ಪುಷ್ಪಗಳು. ಕೃಷ್ಣಾರ್ಜುನರ ಉತ್ತಮ ನಾನಾ ಗುಣ ಕೀರ್ತನೆಯೇ ಫಲ. ಇದು ದ್ವೈಪಾಯನೋದ್ಯಾನದಲ್ಲಿ ಹುಟ್ಟಿದ ಮಹಾ ಪಾರಿಜಾತ! [2] ಮಹಾಭಾರತ

---

[1] ಆದಿಪರ್ವ, I–೩೨.

[2] ಆದಿಪರ್ವ, I–೬೬.

ಶ್ರವಣ ಮಾಡಿದವರಿಗೆ " ಅಶೇಷ ಪಾಪಕ್ಷಯು "ವಾಗುವುದೆಂದೂ ನಾನಾ ಶುಭಫಲಗಳು ಲಭಿಸುವುವೆಂದೂ ನನ್ನಯನ ತ್ರಿಕರಣಶುದ್ಧವಾದ ನಂಬಿಕೆ. ನನ್ನಯನ ಈ ಪದ್ಯವನ್ನು ಕೇಳಿ :

ಸಾತ್ಮವತೇಯ ವಿಷ್ಣುಪದಸಂಭವವಮ್ಯೆ ವಿಬುಧೇಶ್ವರಾಬ್ಧಿಸಂ
ಗತ್ಮುಪಶೋಭಿತಂಬಯಿ ಜಗದ್ವಿದಿತಂಬಗು ಭಾರತೀಯ ಭಾ
ರತ್ನಮರಾಪಗೌಘಮು ನಿರಂತರ ಸಂತತ ಪುಣ್ಯಸಂಪದು
ನ್ನತ್ಯಭಿವೃದ್ಧಿ ಸೇಯು ವಿನಿನಂಗೊನಿಯಾಡಿನನೆಲ್ಲ ವಾರಿಕಿನ್

[ ಭಾರತ ಪವಿತ್ರವಾದ ಗಂಗಾನದಿ ! ಈ ಗಂಗೆ ವ್ಯಾಸರೆಂಬ ವಿಷ್ಣುವಿನ ಪಾದದಲ್ಲಿ ಹುಟ್ಟಿತು. ಬುಧಸಮೂಹವೆಂಬ ಸಮುದ್ರವನ್ನು ಸೇರಿದೆ. ಈ ಕಾವ್ಯಗಂಗೆ ನಿರಂತರವಾಗಿ ಕೇಳಿದರೂ ಕೊಂಡಾಡಿದರೂ ಎಲ್ಲರಿಗೂ ಪುಣ್ಯ ಸಂಪತ್ತು ಉನ್ನತಿ ಅಭಿವೃದ್ಧಿಗಳನ್ನುಂಟುಮಾಡುತ್ತದೆ. ] ನನ್ನಯನ ದೃಷ್ಟಿಯಲ್ಲಿ ಭಾರತ ಕೇವಲ ಕಾವ್ಯ ಮಾತ್ರವಲ್ಲ. ಅದು ಬರಿಯ ಇತಿಹಾಸವೂ ಅಲ್ಲ. ಭಾರತ ವೇದಸಾರವನ್ನೊಳಗೊಂಡು ವಾಚಕರಿಗೆ ಮೋಕ್ಷಸಾಧನವಾದ ತತ್ವಜ್ಞಾನವನ್ನುಂಟುಮಾಡುವ ಪುಣ್ಯಪ್ರದವಾದ ಗ್ರಂಥರತ್ನ. ಲೌಕಿಕ ನೀತಿ, ಅಧ್ಯಾತ್ಮ ಜ್ಞಾನ, ಕಾವ್ಯಾನಂದ ಪುರಾಣಕಥಾಸಾರ ಎಲ್ಲವೂ ಲಭಿಸುವ ' ಭಾರತೀ ಸಮುದ್ರ ' ! ಅದಕ್ಕೆ ಎಣೆಯಾಗಬಹುದಾದಂತಹ ಬೇರೊಂದು ಗ್ರಂಥವಿಲ್ಲ. ಭಾರತದ ವಿಚಾರದಲ್ಲಿ ನನ್ನಯನಿಗೆ ಅಪಾರವಾದ ಭಕ್ತಿ, ಪೂಜ್ಯಭಾವನೆ ! ಅವನು ವ್ಯಾಸವಂದನೆಮಾಡಿ ಅವರು ನಿರೂಪಿಸಿದ ಪರಮಾರ್ಥಕ್ಕೆ ಸ್ವಲ್ಪವೂ ಕುಂದು ತಟ್ಟದ ಕ್ರಮದಲ್ಲಿ ಗ್ರಂಥರಚನೆ ಮಾಡಲು ಹೊರಟವನು.

**ಪಂಪ ಕಂಡ ಭಾರತ**

" ಕವಿತಾ ಗುಣಾರ್ಣವ "ನೆಂದು ಬಿರುದು ಹೊತ್ತ ಕನ್ನಡ ಕವಿ ಪಂಪ ತನ್ನ ಅರಸನ ಕೋರಿಕೆಯಂತೆ ಕನ್ನಡದಲ್ಲಿ ಭಾರತವನ್ನು ರಚಿಸತೊಡಗಿ ತಾನು ಕೈಕೊಂಡ ಕಾರ್ಯದ ಮಹತ್ವವನ್ನು ಕುರಿತು ಹೇಳುತ್ತ " ವ್ಯಾಸಮುನೀಂದ್ರ ರುಂದ್ರ ವಚನಾಮೃತ ವಾರ್ಧಿಯನೀಸುವೆಂ ಕವಿವ್ಯಾಸನೆನೆನ್ ಎಂಬ ಗರ್ವಮೆನಗಿಲ್ಲ " ಎಂದು ವಿನಯದಿಂದ ನುಡಿದಿದ್ದಾನೆ. ಪಂಪನ ದೃಷ್ಟಿಯಲ್ಲಿ ಭಾರತ ಒಂದು ವಿಸ್ತಾರವಾದ " ವಚನಾಮೃತ ವಾರ್ಧಿ ! " ಅದು ಅಗಸ್ತ್ಯಋಷಿಯು ಆಪೋಶನ ತೆಗೆದುಕೊಂಡ ಲವಣ ಸಮುದ್ರವಲ್ಲ ; ವ್ಯಾಸಮಹರ್ಷಿಯಿಂದ ನಿರ್ಮಿತವಾದ " ರುಂದ್ರವಚನಾಮೃತ ವಾರ್ಧಿ." ಓದುಗರಿಗೆ ಇದು ಅಮೃತಸಮುದ್ರ. ಅಂದು ಸಮುದ್ರ ಮಂಥನ ಮಾಡಿದವರಿಗೆ ಅಮೃತ ಲಭಿಸಿತು. ಇಂದು ಈ ಭಾರತ ಮಂಥನ ಮಾಡಿದವರಿಗೆ ಆಲೋಚನಾಮೃತ ಲಭಿಸುತ್ತದೆ. ಇದು ವಚನರೂಪವಾದ ಅಮೃತಸಮುದ್ರ. ಇದನ್ನು ಈಜುವುದು, ಈಜಿಕೊಂಡು ದಾಟುವುದು ಎಲ್ಲರಿಗೂ ಶಕ್ಯವಲ್ಲ. ವ್ಯಾಸಸದೃಶರಾದಂಥ

ಮಹಾತ್ಮರು ಈ ಘನತರವಾದ ಕಾರ್ಯಕ್ಕೆ ಕೈಹಾಕಬಹುದೇನೊ! ಆದರೆ ಪಂಪನಿಗೆ, 'ನಾನೂ ಒಬ್ಬ ಕವಿ ವ್ಯಾಸ' ಎಂಬ ಭಾವನೆ ಸುತರಾಂ ಇರಲಿಲ್ಲ. ಅಂಥ ಧಾರ್ಷ್ಟ್ಯ ಅವನದಲ್ಲ. ಆದ್ದರಿಂದ ವ್ಯಾಸನಿರ್ಮಿತವಾದ 'ಆ ರುಂದ್ರ ಕಾವ್ಯಸಾಗರವನ್ನು ಅನಾಮತ್ತಾಗಿ ತಂದು ಕನ್ನಡದಲ್ಲಿ ನಿಲ್ಲಿಸುವ' ಸಂಕಲ್ಪ ಅವನದಲ್ಲ. ತನಗಿಂತ ಮುಂಚಿನ ಯಾವ ಕವಿಯೂ ಕನ್ನಡದಲ್ಲಿ ಸಮಸ್ತ ಭಾರತವನ್ನೂ ಹೇಳಿರಲಿಲ್ಲ ವಂತೆ. ಆದ್ದರಿಂದ ತಾನು "ಕತೆ ಪಿರಿದಾದೊಡಂ ಕತೆಯ ಮೆಯ್ಗೆಡಲೀಯದೆ" ಭಾರತ ಕಥೆಯನ್ನು ಕನ್ನಡದಲ್ಲಿ ಹೇಳಿ ಮುಗಿಸಲು ಸಂಕಲ್ಪಿಸಿದನು.

ಪಂಪನಿಗೆ ಆದಿಪುರಾಣದ ವಿಚಾರದಲ್ಲಿದ್ದ ಭಕ್ತಿ, ಪೂಜ್ಯಭಾವ, ಭಾರತದ ವಿಷಯದಲ್ಲಿದ್ದಿತೆಂದು ದೃಢವಾಗಿ ಹೇಳಲು ಸಾಧ್ಯವಲ್ಲ.

> ಪ್ರಾಣಹಿತಮಂ ವಿನೇಯ
> ಪ್ರೀಣನ ಕರಮಂ ಜಗತ್ತ್ರಯಪ್ರಕಟಿತ ಕ
> ಲ್ಯಾಣಮನೀ ನೆಗಳ್ದಾದಿ ಪು
> ರಾಣಮನಪರಿಮಿತ ಭಕ್ತಿಯಿಂ ವಿರಚಿಸುವೆಂ

ಎಂದು ಪಂಪ 'ಆದಿಪುರಾಣ'ದ ಆರಂಭದಲ್ಲಿ ಹೇಳಿಕೊಂಡಿದ್ದಾನೆ. ಆ ಗ್ರಂಥದ ಮೇಲೆ ಅವನಿಗೆ ಅಪರಿಮಿತ ಭಕ್ತಿ! ಅದು ವಿನೇಯ ಪ್ರೀಣನಕರ, ಪ್ರಾಣಹಿತ! ಇಂಥ ಭಕ್ತಿಭಾವನೆಯನ್ನು ಪಂಪ ಭಾರತದ ವಿಷಯದಲ್ಲಿ ಹೇಳಿಕೊಂಡಿಲ್ಲ. ಇದು ತನ್ನ ಅರಸನ ಕೋರಿಕೆಯನ್ನು ನೆರವೇರಿಸಲು ಬರೆದ ಕೃತಿಯೇ ಹೊರತು ಪಾಪಪರಿಹಾರಕವಾದ, ಪುಣ್ಯಪ್ರದವಾದ ಪಾವನ ಗ್ರಂಥವೆಂದು ಹೇಳಲು ಅವನು ಮನಸ್ಸು ಮಾಡಲಿಲ್ಲ. ಇನ್ನು ಭಾರತ ವೇದದ ಸಾರವೆಂದಾಗಲಿ 'ಐದನೆಯ ವೇದ'ವೆಂದಾಗಲಿ ಹೇಳುವ ಯೋಚನೆಯೇ ಆ "ಜಿನಸಮಯ ದೀಪಕ"ನ ಮನಸ್ಸಿನಲ್ಲಿ ಮೂಡಲಿಲ್ಲ. ಇದು ಪಂಪನ ದೃಷ್ಟಿಯಲ್ಲಿ ಒಂದು ಲೌಕಿಕ ಗ್ರಂಥ. "ಬೆಳಗುವೆನಿಲ್ಲಿ ಲೌಕಿಕಮನ್" ಎಂಬುದೇ ಪಂಪನ ಘೋಷಣೆ! ಪಂಪನ ದೃಷ್ಟಿಯಲ್ಲಿ ಇದು ಲೌಕಿಕ ವ್ಯವಹಾರ ಪ್ರಜ್ಞೆಯೇ ಪ್ರಧಾನವಿಷಯವಾಗಿರುವ ಲೌಕಿಕ ಕಾವ್ಯವೇ ಹೊರತು ಆಧ್ಯಾತ್ಮಿಕ ಪ್ರಾಧಾನ್ಯವಿರುವ ಪುಣ್ಯಗ್ರಂಥವಲ್ಲ. ಇದು ತನ್ನ ಅರಸನ ಕೀರ್ತಿಯನ್ನು ಲೋಕದಲ್ಲಿ ಶಾಶ್ವತವಾಗಿ ನಿಲ್ಲಿಸುವ ಮನೋರಥ ದಿಂದ ಪಂಪ ವರ್ಣಕ ಮತ್ತು ಕಥೆಗಳು ಹೊಂದಿಕೊಳ್ಳುವಂತೆ ಹೇಳಿದ ಮುದ್ದಾದ ಒಂದು ಇತಿಹಾಸ ಕಾವ್ಯ. ಅರಸನು ಕೂಡ ಪಂಪನನ್ನು "ಈ ತೆಱದಿತಿಹಾಸ ಕಥೆಯನೊಪ್ಪಿಸೆ ಕುಱಿತಂ!" "ವಿನಾಯಕಂ ತಾಂ ನಿಮಿರ್ಚುಗೆ ಕಬ್ಬಮಂ ನಯದಿಂ ಗುಣಾರ್ಣವ ಭೂಪನಾ" ಎಂದು ಗ್ರಂಥಾರಂಭದಲ್ಲಿ ಗಣೇಶನನ್ನು ಪ್ರಾರ್ಥಿಸುತ್ತ ಆನುಷಂಗಿಕವಾಗಿ ತನ್ನ ಈ ಕಾವ್ಯ ಗುಣಾರ್ಣವ ಭೂಪನ ಅಂದರೆ ತನ್ನ ಪೋಷಕನಾದ ಅರಿಕೇಸರಿಯ ಚರಿತ್ರೆಯನ್ನೊಳಗೊಂಡ ಕಾವ್ಯವೆಂದು ಸ್ಪಷ್ಟ ಪಡಿಸಿದ್ದಾನೆ.

## ವಿಕ್ರಮಾರ್ಜುನ ವಿಜಯಂ

ತನ್ನ ಮೆಚ್ಚಿನ ಅರಸನ ಕೀರ್ತಿಸ್ಥಾಪನೆಗಾಗಿ ಹುಟ್ಟಿದ ಈ ಕಾವ್ಯಕ್ಕೆ ಪಂಪಕವಿ ಕೊಟ್ಟ ಹೆಸರು " ವಿಕ್ರಮಾರ್ಜುನ ವಿಜಯಂ ". ತಾನು ರಚಿಸಹೊರಟ ಭಾರತಕ್ಕೆ ಅರ್ಜುನನನ್ನೇ ಕಥಾನಾಯಕನೆಂದು ಹೇಳಿ ಪಂಪನು ವ್ಯಾಸಭಾರತ ದಲ್ಲಿ ಅರ್ಜುನನಿಗಿಲ್ಲದ ಹೆಚ್ಚಿನ ಪ್ರಾಶಸ್ತ್ಯವನ್ನು ಇಲ್ಲಿ ಕಲ್ಪಿಸಿದ್ದಾನೆ. ಅರಿ ಕೇಸರಿಗೂ ಅರ್ಜುನನಿಗೂ ಅಭೇದವನ್ನು ಕಲ್ಪಿಸಿ ಪಂಪ ಒಂದು ದೃಷ್ಟಿಯಿಂದ ಅರಿಕೇಸರಿಯನ್ನೇ ಭಾರತ ಕಥಾನಾಯಕನೆಂದು ಹೇಳಿದಂತಾಯಿತು. " ವಿಕ್ರಮಾ ರ್ಜುನ " ಎಂಬುದು ಅರಿಕೇಸರಿಯ ಬಿರುದು. ಪರಾಕ್ರಮದಲ್ಲಿ ಅವನು ಭಾರತದ ಅರ್ಜುನನಿಗೆ ಸಮನೆಂದು ಆ ಮಾತಿಗೆ ಅರ್ಥ. ಆದರೆ ಪಂಪ ಇಲ್ಲಿ ಆ ಬಿರುದನ್ನು ಪುರಾಣಕಾಲದ ಪಾರ್ಥನಿಗೇ ಅಂಟಿಸಿ ತನ್ನ ಭಾರತವನ್ನು " ವಿಕ್ರಮಾ ರ್ಜುನ ವಿಜಯ "ವನ್ನಾಗಿಸಿದ್ದಾನೆ ! ತನ್ನ ಈ ಭಾರತದ ಉದ್ದಕ್ಕೂ ಅರ್ಜುನನ ಪ್ರಾಶಸ್ತ್ಯವನ್ನು ನಿರೂಪಿಸಲು ಪಂಪ ವಿಶೇಷವಾದ ಪ್ರಯತ್ನ ಮಾಡಿರುವುದನ್ನು ಕಾಣಬಹುದು.

ವ್ಯಾಸಭಾರತ ಕಥೆಯ ಚೌಕಟ್ಟಿಗೆ ಹೊಂದಿಕೊಳ್ಳದ ಈ ಒಂದು ಪ್ರಧಾನ ವಾದ ದೊಡ್ಡ ಮಾರ್ಪಾಡಿನಿಂದ ಪಂಪ ಭಾರತದ ಕಥೆಯಲ್ಲಿ ಇನ್ನೂ ಕೆಲವು ವ್ಯತ್ಯಾಸಗಳನ್ನು ಅನಿವಾರ್ಯವಾಗಿ ಮಾಡಲೇಬೇಕಾಯಿತು. ಅಂಥವುಗಳಲ್ಲಿ ಮುಖ್ಯವಾದದ್ದು ದ್ರೌಪದಿಯ ವಿವಾಹ ಕಥೆ. ಇಲ್ಲಿ ಪಾಂಚಾಲಿ " ವಿಕ್ರಮಾ ರ್ಜುನನ ಮಡದಿ " ; ಪಾಂಡವರೈವರ ವಲ್ಲಭೆಯಲ್ಲ ! ಅವಳು ಐವರು ಪಾಂಡವ ರನ್ನೂ ಮದುವೆನಿಂದು " ಪಂಚವಲ್ಲಭೆ "ಯಾದಳೆಂದು ಹೇಳಲು ಪಂಪನ ಮನಸ್ಸು ಒಪ್ಪಲಿಲ್ಲ. ಆದರೆ ಭಾರತದ ಮುಂದಿನ ಘಟನಾವಳಿಗಳನ್ನು ಈ ಮಾರ್ಪಾಡಿಗೆ ಅನುಗುಣವಾಗಿ ವ್ಯತ್ಯಾಸಗೊಳಿಸಲು " ಕವಿತಾ ಗುಣಾರ್ಣವ " ನಿಗೂ ಸಾಧ್ಯವಾಗ ಲಿಲ್ಲ ! ಕೀಚಕ, ದುಶ್ಯಾಸನ, ದುರ್ಯೋಧನರ ವಧೆಯ ಸಂದರ್ಭಗಳಲ್ಲಿ ಭೀಮ ಪಾಂಚಾಲಿಯನ್ನು ತನ್ನ ನಾದಿನಿಯಂತೆ ಕಾಣಲಿಲ್ಲ. ಹಾಗೆ ವರ್ಣಿಸಲು ಪಂಪನೂ ಹಿಂಜರಿದನು.

ವ್ಯಾಸರು ಅರ್ಜುನ ತೀರ್ಥಯಾತ್ರೆ ಮಾಡಿದ ಕಥೆಯನ್ನು ವರ್ಣಿಸಿದ್ದಾರೆ. ಆದರೆ ದ್ರೌಪದೀ ಧರ್ಮರಾಯರು ಒಟ್ಟಿಗಿದ್ದಾಗ ಅರ್ಜುನ ನೋಡಿದ್ದರಿಂದ ಅವನು ನಾರದರ ಹೇಳಿಕೆಯಂತೆ ತೀರ್ಥಯಾತ್ರೆ ಮಾಡಿದನೆಂದು ಹೇಳಲು ಪಂಪನಿಗೆ ಸಾಧ್ಯವಿರಲಿಲ್ಲ. ಆದ್ದರಿಂದ ಅವನು ಇಂದ್ರಪ್ರಸ್ಥಪುರದಲ್ಲಿ ನಿರುದ್ಯೋಗಿಯಾಗಿ ರಲು ಇಷ್ಟಪಡದೆ " ದಿಗಂಗನಾಮುಖಾವಲೋಕನಂ ಗೆಯ್ಯಲ್ವಗೆದು " ಭಾರತ ಸಂಚಾರ ವನ್ನು ಕೈಗೊಂಡನೆಂದು ಪಂಪ ಹೇಳಿದ್ದಾನೆ.

## " ಈ ಭಾರತಂ ಲೋಕಪೂಜ್ಯಂ "

ತನ್ನ ಭಾರತದ ಉಪಾಂತದಲ್ಲಿ ಪಂಪಕವಿ " ಈ ಭಾರತಂ ಲೋಕಪೂಜ್ಯಂ " ಎಂದು ಉದ್ಘೋಷಿಸಿದ್ದಾನೆ. " ವ್ಯಾಸಮುನೀಂದ್ರ ರುಂದ್ರ ವಚನಾಮೃತವಾರ್ಧಿ " ಲೋಕಪೂಜ್ಯವೆನಿಸಿದರೆ ಸೋಜಿಗವೇನೂ ಇಲ್ಲ. ಭಾರತ ವೇದದ ಸಾರವಾದುದ ರಿಂದಲೂ, ಜಗದ ಗುರುವೇ ಆದ ಶ್ರೀ ಕೃಷ್ಣಪರಮಾತ್ಮನು ಭೂಲೋಕದಲ್ಲಿ ಅವತಾರ ಮಾಡಿ ದುಷ್ಟಮರ್ದನ ಶಿಷ್ಟ ಪರಿಪಾಲನಗಳನ್ನು ಸಾಧಿಸಿದ ಪುಣ್ಯ ಕಥೆಯನ್ನೊಳಗೊಂಡಿರುವುದರಿಂದಲೂ ತತ್ವಚಿಂತಕರಿಗೂ ಧರ್ಮಜಿಜ್ಞಾಸು ಗಳಿಗೂ ಬತ್ತದ ಒರತೆಯೋಪಾದಿಯಲ್ಲಿರುವ ಭಗವದ್ಗೀತೆ ಭಾರತದ ಒಂದು ಭಾಗವೆನಿಸಿರುವುದರಿಂದಲೂ ಪುಣ್ಯಪ್ರದವಾದ ಈ ಗ್ರಂಥರತ್ನ ಲೋಕಪೂಜ್ಯವೆಂದು ಆಸ್ತಿಕರಾದ ಹಿಂದುಗಳು ನಂಬಿದ್ದಾರೆ. ಆದರೆ ನಮ್ಮ ಪಂಪಕವಿ ಈ ಭಾರತದ ಲೋಕಪೂಜ್ಯತೆಗೆ ನೀಡಿರುವ ಕಾರಣ ಬೇರೆಯದೇ ಆಗಿದೆ.

> ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ ಗಂಡಿನೊಳ್ ಭೀಮಸೇನಂ
> ಬಲದೊಳ್ ಮದ್ರೇಶನತ್ಯುನ್ನತಿಯೊಳ್ ಅಮರಸಿಂಧೂದ್ಭವಂ ಚಾಪವಿದ್ಯಾ
> ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ ಧರ್ಮದೊಳ್ ನಿ
> ರ್ಮಲಚಿತ್ತಂ ಧರ್ಮಪುತ್ರಂ ಮಿಗಿಲಿರ್ಪಗಳಿನೀ ಭಾರತಂ ಲೋಕಪೂಜ್ಯಂ.

ದುರ್ಯೋಧನ, ಕರ್ಣ, ಭೀಮ, ಶಲ್ಯ, ಭೀಷ್ಮ, ದ್ರೋಣ, ಫಲ್ಗುಣ, ಧರ್ಮಪುತ್ರರ ಗುಣಾತಿಶಯಗಳ ವರ್ಣನೆಯನ್ನೊಳಗೊಂಡಿವುದರಿಂದ ಈ ಕಾವ್ಯ ಲೋಕ ಪೂಜ್ಯವಾಯಿತು ! ಭಾರತಕ್ಕೆ ಲೋಕಪೂಜ್ಯತೆಯನ್ನು ಗಳಿಸಿದ ಮಹಾ ಪುರುಷರ ಪಟ್ಟಿಯಲ್ಲಿ ಶ್ರೀಕೃಷ್ಣನ ಹೆಸರೇ ಬಿಟ್ಟುಹೋಗಿದೆ! ಅದು ಅಗತ್ಯವಾಗಿ ಹೇಳಬೇಕಾಗಿದ್ದ ಹೆಸರಲ್ಲವೆ ? ಶ್ರೀಕೃಷ್ಣನ ಕಥೆಯಿಂದ ಬಾರದ ಲೋಕಪೂಜ್ಯತೆ ಭಾರತಕ್ಕೆ ಶಲ್ಯನಿಂದ ಬರುವುದು ಸಂಭವವೆ? ಮಹಾಭಾರತದಲ್ಲಿ ಶ್ರೀಕೃಷ್ಣನ ಪಾತ್ರದ ಪ್ರಾಧಾನ್ಯ ಲೋಕವಿದಿತವಾಗಿದ್ದು ಪಂಪನಿಗೆ ಮಾತ್ರ ಅದು ತಿಳಿಯದೆ ಹೋಯಿತೆ? ಶ್ರೀಕೃಷ್ಣನು ಕೇವಲ ಪಾರ್ಥಸಾರಥಿಯಷ್ಟೇ ಅಲ್ಲ. ಅವನು ಪಾಂಡವರ 'ವಜ್ರಪಂಜರ!' ಅವನು ಪಾಂಡವರ ಮಾರ್ಗದರ್ಶಿ. ಅವನ ಸಲಹೆ ಪಡೆಯದೆ ಧರ್ಮರಾಯ ಕೈಕೊಂಡ ಕಾರ್ಯ ದ್ಯೂತವೊಂದೇ! ಅದರಿಂದಾದ ಅನರ್ಥ ಪರಂ ಪರೆಗಳನ್ನು ಪರಿಹರಿಸಲು ಮತ್ತೆ ಶ್ರೀಕೃಷ್ಣನೇ ಬರಬೇಕಾಯಿತು. ಶ್ರೀಕೃಷ್ಣ ಭಾರತದ ಸೂತ್ರಧಾರಿಯೆಂದರೂ ಸಲ್ಲುತ್ತದೆ. ಅಂತಹ ಶ್ರೀಕೃಷ್ಣನ ಹೆಸರನ್ನು ಪಂಪ ನಿಶ್ಚಿಂತೆಯಾಗಿ ಕೈಬಿಟ್ಟಿದ್ದಾನೆ. ವಿಕ್ರಮಾರ್ಜುನನ ಹಿರಿಮೆಗೆ, ಹೆಚ್ಚಳಕ್ಕೆ ಕೊರತೆಯಾದೀತೆಂದು ಅಂಜಿ ಪಂಪ ಅವನ ಸಾರಥಿಯ ಹೆಸರನ್ನು ಈ ಪಟ್ಟಿಯಲ್ಲಿ ಸೇರಿಸದೆ ಬಿಟ್ಟಿರಬಹುದೆ? ಕರ್ಣನ ಸಾರಥಿಯಾದ ಶಲ್ಯನ ಹೆಸರನ್ನು ಹೇಳಬಹು ದಾದರೆ ಪಾರ್ಥಸಾರಥಿಯ ಹೆಸರೇಕೆ ಪೂಜ್ಯವೆನಿಸಲಿಲ್ಲವೋ ನಮ್ಮ ಪಂಪನಿಗೆ,

ಶ್ರೀಕೃಷ್ಣನು ದೇವಪುರುಷನಾದ್ದರಿಂದ ಅವನನ್ನು ಈ ಮಾನವ ಮಾತ್ರರ ಸಾಲಿನಲ್ಲಿ ಸೇರಿಸಿ ಹೇಳುವುದು ಪಂಪನಿಗೆ ಸರಿತೋರಲಿಲ್ಲವೆಂದೂ, ಆದ್ದರಿಂದಲೇ ಈ ಪದ್ಯದಲ್ಲಿ ಅವನ ಹೆಸರನ್ನು ಸೇರಿಸದೆ ಬಿಟ್ಟಿರಬಹುದೆಂದೂ ಒಂದು ಊಹೆಯಿದೆ.[1]

ಈ ವಾದ ಮೇಲುನೋಟಕ್ಕೆ ಸಯುಕ್ತಿಕವಾಗಿ ಕಂಡರೂ ಅಷ್ಟಾಗಿ ಸಮರ್ಥ ನೀಯವೆನಿಸದು. ಶ್ರೀಕೃಷ್ಣ ದೇವಪುರುಷನಾದರೆ ಅರ್ಜುನ ಅಲ್ಲವೆ ? ಅವನೇ ಹಿಂದೆ ಶ್ರೀರಾಮನೇ ಆಗಿದ್ದನೆಂದು ಪಂಪನೇ ಮುಂಚೆ ಹೇಳಿಲ್ಲವೆ? ಅಥವಾ ಪಂಪನ ಮನಸ್ಸಿಗೆ ಶ್ರೀಕೃಷ್ಣ ದೇವಪುರುಷನೆಂಬ ಭಾವನೆ ಬಂದಿದ್ದು, ಅವನ ದೆಸೆಯಿಂದ ಭಾರತಕ್ಕೆ ಲೋಕಪೂಜ್ಯತೆಯೊದಗಿತೆಂಬ ನಂಬಿಕೆ ಇದ್ದಿದ್ದರೆ ಶ್ರೀಕೃಷ್ಣನ ಮಹಿಮೆಯನ್ನು ನಿರೂಪಿಸಿ ಪ್ರತ್ಯೇಕವಾದ ಒಂದು ಪದ್ಯವನ್ನೇ ಹೇಳಬಹುದಾಗಿತ್ತು. "ಕವಿತಾ ಗುಣಾರ್ಣವ"ನಾದ ಈ ಸರಸ್ವತೀ ಮಣಿಹಾರನಿಗೆ ಒಂದು ಪದ್ಯ ಕಟ್ಟುವುದು ಕಷ್ಟವೆ ?

ಭಾರತ ಕಥೆಯನ್ನು ಹೇಳ ಹೊರಟವನು ಶ್ರೀಕೃಷ್ಣನ ಹಿರಿಮೆಯನ್ನು ಕೊಂಡಾಡದೆ ತಪ್ಪಿಸಿಕೊಳ್ಳಲು ಸಾಧ್ಯವಲ್ಲ. ಅವನು ಸಾಧಿಸಿದ ಹಲವು ಮಹಾಕಾರ್ಯಗಳನ್ನು ಹೇಳಲೇಬೇಕು. ಅವನು ಮೆರೆದ ಪವಾಡಗಳನ್ನು ವರ್ಣಿಸಲೇಬೇಕು. ಅಗ್ರಪೂಜೆಯ ಸಂದರ್ಭದಲ್ಲಿ ಭೀಷ್ಮಾದಿಗಳು ಕೃಷ್ಣನನ್ನು ಹೊಗಳಿದ ಸುದ್ದಿ ಹೇಳದಿದ್ದರೆ ಆದೀತೆ? ದುರ್ಯೋಧನನ ಸಭೆಯಲ್ಲಿ ವಿಶ್ವರೂಪವನ್ನು ತೋರಿ ಧೃತರಾಷ್ಟ್ರನಿಗೆ ದಿವ್ಯ ದೃಷ್ಟಿಯನ್ನು ನೀಡಿ ತನ್ನ ಮಹಿಮೆಯನ್ನು ಮೆರೆದ ಕೃಷ್ಣನ ಅದ್ಭುತ ಪವಾಡವನ್ನು ಕವಿ ಹೇಳಲೇಬೇಕು. ಇಂಥ ಹಲವು ಸಂದರ್ಭಗಳಲ್ಲಿ ಶ್ರೀಕೃಷ್ಣ ದೇವಮಾನವನೆಂಬುದನ್ನು ಪಂಪ ಸ್ಪಷ್ಟವಾಗಿ ಹೇಳಿದ್ದಾನೆ. ಪುರುಷೋತ್ತಮನು, ಮುಕುಂದ, ಮಧುಕೈಟಭಾರಾತಿ, ಮುರಾರಿ, ನಾರಾಯಣ ಮುಂತಾದ ಹೆಸರುಗಳನ್ನು ಪಂಪ ತನ್ನ ಕೃತಿಯಲ್ಲಿ ಧಾರಾಳವಾಗಿ ಬಳಸಿದ್ದಾನೆ. ಆದರೂ ಶ್ರೀಕೃಷ್ಣನ ಲೋಕಪೂಜ್ಯತೆಯನ್ನು ವಾಚ್ಯವಾಗಿ ಈ ಸಂದರ್ಭದಲ್ಲಿ ಹೇಳುವುದಕ್ಕೆ "ಜಿನ ಪದಾಂಭೋಜ ವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರವಚನ ರಚನ ಚತುರ"ನಾದ ಪಂಪನ ಮನಸ್ಸು ಅದೇಕೊ ಹಿಂಜರಿದಿದೆ. ಜಿನೇಂದ್ರ ಪುರಾಣಕರ್ತೃವಾಗಿ 'ಜಿನಸಮಯ ದೀಪಕ' ನೆನಿಸಿಕೊಂಡ ಈ ಜಿನಭಕ್ತ ಶ್ರೀಕೃಷ್ಣನ ದೈವತ್ವ ಪೂಜ್ಯತೆಗಳನ್ನು ಒಪ್ಪಿ ಸ್ಪಷ್ಟವಾಗಿ ಹೇಳಲು ಹಿಂತೆಗೆದುದರಲ್ಲಿ ಆಶ್ಚರ್ಯಪಡುವಂತಹುದೇನೂ ಇಲ್ಲ.

ನನ್ನಯಭಟ್ಟ ವೈದಿಕ ಬ್ರಾಹ್ಮಣನಾದ್ದರಿಂದ ಅವನಿಗೆ ಭಾರತ ಐದನೆಯ ವೇದವೇ ಎಂಬ ಭಾವನೆಯಿದ್ದು, ಅದನ್ನು ಅವನು ಬಹಳ ಭಕ್ತಿಯಿಂದ ತೆಲುಗಿಸಲು ತೊಡಗಿದನು.

---

1 ಸಮಾಲೋಕನ. ತೀ.ನಂ.ಶ್ರೀ.

'ಜಾತಿಯೊಳೆಲ್ಲಮುತ್ತಮದ ಜಾತಿಯ ವಿಪ್ರಕುಲಂಗೆ ನಂಬಲೇಮಾತೊ ಜಿನೇಂದ್ರ ಧರ್ಮಮೆ ವಲಂ ದೊರೆ ಧರ್ಮದೊಳೆಂದು' ನಂಬಿದ ಪಂಪನ ದೃಷ್ಟಿಯಲ್ಲಿ ಭಾರತ ಲೌಕಿಕವಾದ ಒಂದು ಇತಿಹಾಸ ಕಾವ್ಯ.

**ಭಾರತದ ಚರಿತ್ರೆ**

ಪಂಪ ಅರಿಕೇಸರಿಯ ವಂಶವರ್ಣನೆ ಮಾಡಿಯಾದ ಮೇಲೆ ಬೇರೆ ಯಾವ ಪ್ರಸ್ತಾಪವನ್ನೂ ಮಾಡದೆ ನೇರವಾಗಿ ಕುರುಜಾಂಗಣ ವಿಷಯದ ವರ್ಣನೆ ಮಾಡಿ ಹಸ್ತಿನಾಪುರದ ಹಿರಿಮೆಯನ್ನು ಹೇಳಿ ಭರತವಂಶದ ಕಥೆ ಆರಂಭಿಸಿ ಭೀಷ್ಮನ ಜನ್ಮವೃತ್ತಾಂತವನ್ನು ನಿರೂಪಿಸಿದ್ದಾನೆ. ಆದರೆ ನನ್ನಯಭಟ್ಟ ಹೀಗೆ ಮಾಡಿಲ್ಲ. ಆತನು ಮಂಗಳಾಚರಣೆಯಾಗುತ್ತಲೂ ತನ್ನ ಅರಸನಾದ ರಾಜರಾಜನು ಸಭೆಯಲ್ಲಿ ತನಗೆ ಭಾರತವನ್ನು ರಚಿಸುವ ಕೆಲಸವನ್ನೊಪ್ಪಿಸಿದ ವೃತ್ತಾಂತವನ್ನು ಹೇಳಿ ಭಾರತದ ಪ್ರಾಶಸ್ತ್ಯವನ್ನು ಸೂಕ್ಷ್ಮವಾಗಿ ಪ್ರಸ್ತಾಪಿಸಿ ಪರ್ವಾನುಕ್ರಮಣಿಕೆಯನ್ನೂ ಪರ್ವ ಸಂಗ್ರಹವನ್ನೂ ಹೇಳಿದ್ದಾನೆ. ಇಲ್ಲಿಗೆ ಆದಿಪರ್ವದ ಪ್ರಥಮಾಶ್ವಾಸದ ಅರವತ್ತಾರು ಪದ್ಯಗಳು ಮುಗಿದಿವೆ.

ಆಮೇಲೆ ನನ್ನಯ ಈ ಮಹಾ ಗ್ರಂಥರತ್ನವನ್ನು ಕೃಷ್ಣದ್ವೈಪಾಯನನು ನಿಖಿಲಲೋಕ ಹಿತಾರ್ಥವಾಗಿ ಸಂವತ್ಸರತ್ರಯದಲ್ಲಿ ನಿರ್ಮಿಸಿದನೆಂದು ತಿಳಿಸಿ ಅದನ್ನು ನಾರದ ದೇವಲ ಶುಕ ಸುಮಂತ ಮತ್ತು ವೈಶಂಪಾಯನರಿಗೆ ಉಪದೇಶಿಸಿ ಅವರನ್ನು ಕ್ರಮವಾಗಿ ದೇವಲೋಕ, ಗರುಡ ಗಂಧರ್ವ ಯಕ್ಷ ರಾಕ್ಷಸಲೋಕ, ನಾಗಲೋಕ ಮತ್ತು ಮನುಷ್ಯ ಲೋಕಗಳಲ್ಲಿ ಭಾರತವನ್ನು ಪ್ರಚಾರ ಮಾಡಲು ಕಳುಹಿಸಿದ ಸಂಗತಿಯನ್ನು ಹೇಳಿದ್ದಾನೆ. ನೈಮಿಶಾರಣ್ಯ ಕ್ಷೇತ್ರದಲ್ಲಿ ಶೌನಕಾದಿ ಮಹರ್ಷಿಗಳು ಲೋಕಹಿತಾರ್ಥವಾಗಿ ದ್ವಾದಶವಾರ್ಷಿಕ ಸತ್ರಯಾಗವನ್ನು ನಡೆಸುತ್ತಿದ್ದಾಗ ಅಲ್ಲಿಗೆ ಬಂದು ಸೂತಮುನಿಯು ಈ ವೃತ್ತಾಂತವನ್ನೆಲ್ಲ ತಿಳಿಸಿ ವೈಶಂಪಾಯನ ಜನಮೇಜಯನಿಗೆ ಭಾರತವನ್ನು ಹೇಳುತ್ತಿದ್ದಾಗ ತಾನು ಹತ್ತಿರದಲ್ಲಿಯೇ ಇದ್ದು ಕೇಳಿದೆನೆಂದು ಹೇಳಿಕೊಳ್ಳುತ್ತಾನೆ. ಆಗ ಆ ಮುನಿಗಳು ತಮಗೂ ಆ ಕಥೆಯನ್ನು ಹೇಳಬೇಕೆಂದು ಕೇಳಿಕೊಳ್ಳಲು ಭಾರತವನ್ನು ಆ ಸೂತಪುರಾಣಿಕ ಹೇಳಲು ಆರಂಭಿಸಿದನು. ಭಾರತದ ರಚನೆ, ಅದು ಪ್ರಚಾರವಾದ ಬಗೆ, ಭಾರತ ಕಾವ್ಯದ ಒಂದು ಭಾಗವೆಂದು ಭಾವಿಸದ ಪಂಪ ಸಹಜವಾಗಿಯೇ ಈ ಭಾಗವನ್ನು ಹೇಳದೆ ಬಿಟ್ಟಿದ್ದಾನೆ.

ನನ್ನಯ ಭೀಷ್ಮ ಜನನವೃತ್ತಾಂತವನ್ನು ಹೇಳುವ ಮುನ್ನ ಗರುತ್ಮಂತ ಚರಿತ್ರೆ, ಜರತ್ಕಾರನ ಚರಿತ್ರೆ, ಜನಮೇಜಯ ಕೈಗೊಂಡ ಸರ್ಪಯಾಗ, ಅದನ್ನು ಆಸ್ತೀಕನು ತಡೆದದ್ದು, ಇವೇ ಮೊದಲಾದ ಅನೇಕ ಕಥೆಗಳನ್ನು ಹೇಳಿದ್ದಾನೆ. ದುಷ್ಯಂತ ಭರತರ ಚರಿತ್ರೆಯನ್ನು ಹೇಳಿ ಭೀಷ್ಮವೃತಾಂತವನ್ನು ಆರಂಭಿಸುವ ವೇಳೆಗೆ ಮೂರು ಆಶ್ವಾಸಗಳೇ ಮುಗಿದು ಹೋಗಿವೆ. ನನ್ನಯಭಟ್ಟ ಮೂಲ ಭಾರತದಲ್ಲಿರುವ ಅನುಕ್ರಮವನ್ನೇ

ಅನುಸರಿಸಿಕೊಂಡು ಅದರಲ್ಲಿನ ಯಾವ ಮುಖ್ಯ ಅಂಶವನ್ನೂ ಬಿಡದೆ ಹೇಳುವ ಉದ್ದೇಶವುಳ್ಳವನು. ಅವನದು ಪುರಾಣಕಾವ್ಯ. ಪಂಪ ತನ್ನ ಕಾವ್ಯವನ್ನು ಕೇವಲ ಇತಿಹಾಸವೆಂದು ಹೇಳಿದ್ದಾನೆ. ಅದು ವಿಕ್ರಮಾರ್ಜುನನ ವಿಜಯ ಕಥೆ. ಆದ್ದರಿಂದ ನೈಮಿಶಾರಣ್ಯದ ವರ್ಣನೆಯಾಗಲಿ, ಅಲ್ಲಿ ಮಹರ್ಷಿಗಳೆಲ್ಲ ಸೇರಿ ಮಾಡತೊಡಗಿದ ದ್ವಾದಶ ವರ್ಷಗಳ ಸತ್ರಯಾಗದ ಕಥೆಯಾಗಲಿ ಪಂಪನಿಗೆ ಅಗತ್ಯವಾಗಲಿಲ್ಲ. ಕೌರವ ಪಾಂಡವರ ಕಥೆ, ಮುಖ್ಯವಾಗಿ ಅವರ ನಡುವೆ ಹುಟ್ಟಿ ಬೆಳೆದ ವೈರದ ವೃತ್ತಾಂತ, ಅದು ಕೊನೆಗೆ ಕುಲವಿನಾಶಕವಾದ ಘೋರ ಯುದ್ಧದಲ್ಲಿ ಪರ್ಯವಸಾನಗೊಂಡ ಬಗೆ, ಇವು ಪಂಪನ ದೃಷ್ಟಿಯಲ್ಲಿ ಭಾರತದ ಮುಖ್ಯ ಕಥಾವಿಷಯಗಳು. ಈ ಕಥೆಯನ್ನು ವಿಸ್ತಾರವಾಗಿ ಬರೆದ ವ್ಯಾಸರ ವೃತ್ತಾಂತ, ಅವನು ಅದನ್ನು ನಾನಾ ಲೋಕಗಳಲ್ಲಿ ಪ್ರಚಾರಮಾಡಲು ಬೇರೆ ಬೇರೆ ಋಷಿಗಳನ್ನು ತರಬಿಯತ್ತು ಮಾಡಿ ಕಳುಹಿಸಿಕೊಟ್ಟ ಸುದ್ದಿ, ಇವೆಲ್ಲ ಭಾರತ ಕಥೆಗೆ ಪೀಠಿಕೆಯಾಗಿ ಬರಬೇಕಿಲ್ಲ. ಪಾಂಡವರ ಅನಂತರ ಅವರ ವಂಶದ ಏಕೈಕ ಪ್ರತಿನಿಧಿಯಾಗಿ ಉಳಿದ ಪರೀಕ್ಷಿತರಾಜನ ಮಗ ಜನಮೇಜಯನ ಕಾಲದಲ್ಲಿ ನಡೆದ ಸರ್ಪಯಾಗದ ವೃತ್ತಾಂತ, ಅವನಿಗೆ ವೈಶಂಪಾಯನ ವ್ಯಾಸ ಪ್ರಣೀತವಾದ ಮಹಾಭಾರತವನ್ನು—ಜನಮೇಜಯನ ಪೂರ್ವಜರ ಕಥೆಯನ್ನು—ಹೇಳಿದನೆಂಬ ಕಥೆ ಭಾರತದ ಮೊದಲೇ ಹೇಳುವುದರ ಔಚಿತ್ಯದಲ್ಲಿ ಪಂಪನಿಗೆ ಸಂಶಯ ಬಂದಿರಬಹುದು. ಜನಮೇಜಯನಿಗೆ ವೈಶಂಪಾಯನ ಭಾರತ ಹೇಳಿದುದನ್ನು ಕೇಳಿದ ರೋಮಹರ್ಷಿಣಿಯೆಂಬ ಸೂತನು ಆಮೇಲೆ ನೈಮಿಶಾರಣ್ಯದಲ್ಲಿ ಆ ಕಥೆಯನ್ನೆಲ್ಲ ಋಷಿ ಸಮೂಹಕ್ಕೆ ಹೇಳಿದನಂತೆ! ಭಾರತ ಕಥೆಯನ್ನು ಬೇರೆಬೇರೆ ಸಮಯಗಳಲ್ಲಿ ಯಾರು ಯಾರಿಗೆ ಹೇಳಿದರೆಂಬ ಸುದ್ದಿ ಕಲಾತ್ಮಕವಾದ ಕಾವ್ಯ ಕಟ್ಟಲು ಹೊರಟಿದ್ದ 'ಹಿತಮಿತ ವಚನ' ನಾದ ಪಂಪಕವಿಗೆ ಅನಗತ್ಯವೆಂದು ತೋರಿ ಅದನ್ನೆಲ್ಲ ಸಂಪೂರ್ಣವಾಗಿ ಬಿಟ್ಟಿರುವುದು ಬಹಳ ಸಮಂಜಸವಾಗಿದೆ.

# ೩. ವಸ್ತುವಿನ್ಯಾಸ

ಮಹಾಭಾರತ ಅತ್ಯಂತ ವಿಸ್ತಾರವಾದ ಪುರಾಣಕಾವ್ಯ. ಅದರಲ್ಲಿ ಪ್ರಧಾನವಾದ ಕೌರವ ಪಾಂಡವರ ಕಥೆಯೇ ಅಲ್ಲದೆ ಇನ್ನೂ ಅನೇಕ ಉಪಕಥೆಗಳು ಸೇರಿವೆ. ವಿದುರ ನೀತಿ, ಸನತ್ಸುಜಾತರ ಉಪದೇಶ, ಭಗವದ್ಗೀತೆ ಮುಂತಾದ ಅನೇಕ ಧರ್ಮಜಿಜ್ಞಾಸೆಗಳ ವರ್ಣನೆ ಭಾರತದಲ್ಲಿ ಇದೆ. ಯಾದವಕುಲ ಶಿರೋಮಣಿಯೆನಿಸಿದ ಶ್ರೀಕೃಷ್ಣನ ಕಥೆ ಭಾರತದಲ್ಲಿ ಸೇರಿಕೊಂಡಿದೆ.[1] ಜರಾಸಂಧ, ಹಿಡಿಂಬ, ಶಿಶುಪಾಲಾದಿ ರಾಕ್ಷಸರ ಇತಿವೃತ್ತವೂ ಇದರಲ್ಲಿ ಸೇರಿಹೋಗಿದೆ. ಹೀಗೆ ಹಲವು ಹದಿನೆಂಟು ಕಥೆಗಳಿಂದ ಕೂಡಿ ಬಿಳಲುಬಿಟ್ಟ ದೊಡ್ಡ ಆಲದ ಮರದಂತೆ ಮಹಾಭಾರತ ಮಹಾ ಜಟಿಲವೂ ಸಂಕೀರ್ಣವೂ ಆಗಿದೆ. ಆದ್ದರಿಂದ ಇದನ್ನು ಅನ್ಯಭಾಷೆಗೆ ಅನುವಾದ ಮಾಡಲು ಹೊರಟ ಕವಿಗೆ ದೊಡ್ಡಸಮಸ್ಯೆಯೆಂದರೆ ಇದರ ವಸ್ತುವನ್ನು ಸಂಗ್ರಹಮಾಡಿ ತನ್ನ ಗುರಿಗೆ ಅನುಗುಣವಾಗಿ ಅಚ್ಚುಕಟ್ಟಾಗಿ ಜೋಡಿಸಿಕೊಳ್ಳುವುದೇ ಆಗಿದೆ.

ನನ್ನಯಭಟ್ಟ ಮಹಾಭಾರತದ ವಸ್ತುವಿನ್ಯಾಸದಲ್ಲಿ ಹೆಚ್ಚಿನ ವ್ಯತ್ಯಾಸವನ್ನೇನೂ ಮಾಡಲು ಪ್ರಯತ್ನಿಸಿಲ್ಲ. ವ್ಯಾಸರು ಮಾಡಿದ್ದ ಪರ್ವವಿಭಾಗವನ್ನೇ ಇಟ್ಟುಕೊಂಡು ಆಂಧ್ರ ಮಹಾಭಾರತವನ್ನು ರಚಿಸಲು ತೊಡಗಿದನು. ಅವಕ್ಕೆ ಆ ಋಷಿಕವಿ ಕೊಟ್ಟ ಹೆಸರುಗಳನ್ನೇ ಈತನೂ ಬಳಸಿದ್ದಾನೆ. ಆದರೆ ಪಂಪ ಮಾತ್ರ ಆ ಕ್ರಮವನ್ನು ಅನುಸರಿಸಿಲ್ಲ. ಅವನ ಕಾವ್ಯದಲ್ಲಿ ಪರ್ವವಿಭಾಗಗಳಿಲ್ಲ. ಅವನ ಭಾರತ ಹದಿನಾಲ್ಕು ಆಶ್ವಾಸಗಳ ಚಂಪೂಕಾವ್ಯ. ಮಹಾಭಾರತದ ಯುದ್ಧ ಮುಗಿದು ಪಾಂಡವರ ರಾಜ್ಯಲಾಭದವರೆಗಿನ ಕಥೆಯನ್ನೆಲ್ಲಾ ಈ ಹದಿನಾಲ್ಕು ಆಶ್ವಾಸಗಳಲ್ಲಿ ಪಂಪ ಅಳವಡಿಸಿದ್ದಾನೆ; ಅಲ್ಲದೆ ಈ ಭಾರತಕಥೆ ಅರ್ಜುನನ ವಿಜಯ ಪರಂಪರೆಯ ಇತಿವೃತ್ತವೆಂಬ ಭಾವನೆ ಬರುವಂತೆ ಕಥೆಯನ್ನು ಹೊಂದಿಸಿ ತನ್ನ ಕಾವ್ಯಕ್ಕೆ "ವಿಕ್ರಮಾರ್ಜುನ ವಿಜಯಂ" ಎಂದೇ ನಾಮಕರಣ ಮಾಡಿದ್ದಾನೆ.

ಮೊದಲನೆಯ ಆಶ್ವಾಸ ಅರ್ಜುನನ ಜನ್ಮಕಥೆಯೊಡನೆ ಮುಕ್ತಾಯವಾಗಿದೆ. ಎರಡನೆಯ ಆಶ್ವಾಸದಲ್ಲಿ ಅರ್ಜುನ ದ್ರುಪದನನ್ನು ಸೆರೆಹಿಡಿದು ತಂದ ವೃತ್ತಾಂತ ಮತ್ತು ಪ್ರದರ್ಶನರಂಗದಲ್ಲಿ ಅರ್ಜುನ ತೋರಿಸಿದ ಅಸ್ತ್ರಪಾಂಡಿತ್ಯ ಪ್ರಧಾನವಾಗಿ ಮೂಡಿವೆ. ಮೂರನೆಯ ಆಶ್ವಾಸದಲ್ಲಿ ದ್ರೌಪದೀ ಸ್ವಯಂವರ ವೃತ್ತಾಂತ ಬಂದಿದೆ. ಅರ್ಜುನ ಮತ್ಸ್ಯಯಂತ್ರವನ್ನು ಭೇದಿಸಿ ದ್ರೌಪದಿಯನ್ನು ಮದುವೆಯಾದ. ಆಗ

---

[1] ಶ್ರೀಕೃಷ್ಣನ ಕಥೆಗೆ ಮಹಾಭಾರತವೇ ಅತ್ಯಂತ ಪ್ರಾಚೀನವಾದ ಆಧಾರ ಗ್ರಂಥವೆಂದು ತಜ್ಞರ ಅಭಿಪ್ರಾಯ.

ಅವನಮೇಲೆ ಕಾಳಗ ಹೂಡಿದ ಕ್ಷತ್ರಿಯ ರಾಜರೆಲ್ಲ ವಿಕ್ರಮಾರ್ಜುನನಿಗೆ ಸೋತು ಕಾಳಗದಿಂದ ಹಿಮ್ಮೆಟ್ಟಿಪರು: ಅರ್ಜುನನಿಗೆ ದ್ರುಪದನ ಪಟ್ಟಣದಲ್ಲಿ ದೊರೆತ ವೈಭವದ ಸ್ವಾಗತದ ವರ್ಣನೆಯೊಡನೆ ಆಶ್ವಾಸ ಮುಗಿದಿದೆ.

ನಾಲ್ಕನೆಯ ಆಶ್ವಾಸದಲ್ಲಿ ಅರ್ಜುನನ ದಿಗ್ವಿಜಯಯಾತ್ರೆಯ ವರ್ಣನೆ ಬಂದಿದೆ. ಈ ಸಂದರ್ಭದಲ್ಲಿ ಪಂಪ ಆದಷ್ಟೂ ಅರ್ಜುನನ ಹಿರಿಮೆಯನ್ನು ಹೊಗಳಲು ನಾನಾ ಪ್ರಯತ್ನಗಳನ್ನು ಮಾಡಿದ್ದಾನೆ. ಅವನ 'ಅಕಳಂಕರಾಮ' 'ಅಭಿನವ ಜೀಮೂತ ವಾಹನ' ಮೊದಲಾದ ಬಿರುದುಗಳಿಗೆ ವಿಶೇಷ ಅರ್ಥ ಕಲ್ಪಿಸಲು ಹವಣಿಸಿದ್ದಾನೆ. ನಾನಾ ಪ್ರಾಂತಗಳ ರಾಜರನ್ನು ಗೆದ್ದು ವಿಕ್ರಮಾರ್ಜುನ ಗೋಕರ್ಣ, ಬನವಾಸಿಗಳಿಗೆಲ್ಲ ಹೋಗಿದ್ದನೆಂದು ಕಲ್ಪಿಸಿ ಅವನ ಶಿವಭಕ್ತಿಯನ್ನು ಬಣ್ಣಿಸಿ, ಕಡೆಗೆ ಅವನು ದ್ವಾರಾವತಿಯನ್ನು ಹೊಕ್ಕನೆಂದು ಕಲ್ಪಿಸಿದ್ದಾನೆ. ಅರ್ಜುನ ದ್ವಾರಾವತಿಯಲ್ಲಿ ಸುಭದ್ರೆಯನ್ನು ಒಲಿದು ಒಲಿಸಿಕೊಂಡು ಕೃಷ್ಣಸಹಾಯದಿಂದ ಅವಳನ್ನು ಮದುವೆಯಾದ ಕಥೆ ನಾಲ್ಕನೆಯ ಆಶ್ವಾಸದ ಉತ್ತರಾರ್ಧವನ್ನೂ, ಐದನೆಯಾಶ್ವಾಸದ ಪೂರ್ವಾರ್ಧವನ್ನೂ ಆಕ್ರಮಿಸಿಕೊಂಡಿದೆ. ಐದನೆಯ ಆಶ್ವಾಸದಲ್ಲಿ ಅಭಿಮನ್ಯುವಿನ ಜನನಕಥೆ, ಖಾಂಡವವನ ದಹನಕಥೆ, ಆ ಸಂಬಂಧದಲ್ಲಿ ಅರ್ಜುನ ಅನೇಕ ದೇವತೆಗಳನ್ನು ಸೋಲಿಸಿದ ವೃತ್ತಾಂತ, ಬಂದಿವೆ. ಇಲ್ಲಿಗೆ ಆದಿಪರ್ವದ ಕಥೆ ಮುಗಿದಂತಾಯಿತು.

ಆರನೆಯ ಆಶ್ವಾಸದಲ್ಲಿ ರಾಜಸೂಯ ಪ್ರಸ್ತಾಪ, ಅದರ ಸಿದ್ಧತೆಗಾಗಿ ಅರ್ಜುನ ಮಾಡಿದ ಸಾಹಸದ ವರ್ಣನೆ, ಶಿಶುಪಾಲವಧೆ, ದ್ಯೂತ ಪ್ರಾರಂಭದ ಕಥೆ ಬಂದಿದೆ. ಏಳನೆಯ ಆಶ್ವಾಸ ದ್ಯೂತದಲ್ಲಿ ಧರ್ಮರಾಯನ ಪರಾಜಯ, ದ್ರೌಪದಿಯ ಕೇಶಾಪಕೃಷ್ಟಿ, ಭೀಮಸೇನ ಪ್ರತಿಜ್ಞೆ, ಪಾಂಡವರ ವನಪ್ರವೇಶ, ಚಿತ್ರಾಂಗದನೆಂಬ ಗಂಧರ್ವನೊಡನೆ ಅರ್ಜುನ ಹೂಡಿ ಗೆದ್ದ ಯುದ್ಧ, ದುರ್ಯೋಧನಾಪಮಾನ, ವ್ಯಾಸರು ಬಂದು ಅರ್ಜುನನನ್ನು ಇಂದ್ರಕೀಲಕ್ಕೆ ತಪಸ್ಸಿಗೆ ಕಳುಹಿಸಿದುದು, ಅರ್ಜುನ ಇಂದ್ರಕೀಲದಲ್ಲಿ ತಪಸ್ಸು ಮಾಡಿದ್ದು ಈ ಕಥೆಗಳನ್ನು ಒಳಗೊಂಡಿದೆ. ಶಿವನು ಮೆಚ್ಚಿ ಬಂದು ತನ್ನೊಡನೆ ಕಾದಾಡಿದ ಅರ್ಜುನನಿಗೆ ದಿವ್ಯಾಸ್ತ್ರಗಳನ್ನು ಕೊಟ್ಟ ಕಥೆ ಎಂಟನೆಯ ಆಶ್ವಾಸದಲ್ಲಿದೆ. ಯಮ ಆನೆಯ ರೂಪದಲ್ಲಿ ಬಂದು ಧರ್ಮರಾಯನನ್ನೆಚ್ಚರಿಸಿದುದು, ತರುವಾಯ ಪಾಂಡವರು ವಿರಾಟಪುರವನ್ನು ಹೊಕ್ಕುದು, ಕೀಚಕವಧೆ, ಗೋಗ್ರಹಣಯುದ್ಧ, ಅದರಲ್ಲಿ ಅರ್ಜುನನ ಪರಾಕ್ರಮ, ಈ ಭಾಗಗಳ ನಿರೂಪಣೆ ಎಂಟನೆಯ ಆಶ್ವಾಸದಲ್ಲಿ ಮುಗಿದಿದೆ. ನವಮಾಶ್ವಾಸದಲ್ಲಿ ಉದ್ಯೋಗಪರ್ವದ ಕಥೆ ಮುಗಿದು ಭೀಷ್ಮಪರ್ವದ ಕಥೆ ಆರಂಭವಾಗಿ ದಶಮಾಶ್ವಾಸದಲ್ಲಿ ಮುಗಿದಿದೆ. ಏಕಾದಶಾಶ್ವಾಸದಲ್ಲಿ ಸೈಂಧವನನ್ನು ಕಾಳಗದಲ್ಲಿ ಅರ್ಜುನ ಕೊಂದ ಕಥೆ ಇದೆ. ಹನ್ನೆರಡನೆಯ ಆಶ್ವಾಸವನ್ನು ಪಂಪನು ಕರ್ಣನನ್ನು ಅರ್ಜುನ ಕೊಂದು ಕೆಡವಿದ ಕಥೆಯಿಂದ ಮುಕ್ತಾಯ ಮಾಡಿದ್ದಾನೆ. ಹದಿಮೂರನೆಯ ಆಶ್ವಾಸ ದುರ್ಯೋಧನನ ಊರುಭಂಗ ವೃತ್ತಾಂತವನ್ನು

ಹೇಳಿ ಮುಗಿದರೆ ಹದಿನಾಲ್ಕನೆಯದು ವಿಕ್ರಮಾರ್ಜುನನ ಪಟ್ಟಾಭಿಷೇಕದೊಡನೆ ಮುಗಿಯುತ್ತದೆ.

ಹೀಗೆ ಪ್ರತಿಯೊಂದು ಆಶ್ವಾಸದಲ್ಲಿಯೂ ಪಂಪ ಅರ್ಜುನನ ಯಾವುದಾದರೊಂದು ಸಾಹಸ ಕಾರ್ಯದ ವಿಸ್ತಾರವಾದ ವರ್ಣನೆ ಪ್ರಧಾನವಾಗಿ ಬರುವಂತೆ ಜೋಡಿಸಿದ್ದಾನೆ. ಪ್ರತಿ ಆಶ್ವಾಸದ ಆರಂಭದಲ್ಲಿಯೂ ಅಂತ್ಯದಲ್ಲಿಯೂ ಅರ್ಜುನನ ಸ್ತೋತ್ರಾತ್ಮಕವಾದ ಒಂದು ಪದ್ಯವನ್ನಾದರೂ ರಚಿಸಿದ್ದಾನೆ. "ಸಮಸ್ತ ಭಾರತ" ಕಥೆಯನ್ನು ಹೇಳಿದ್ದರೂ ಪಂಪ ಅದರಲ್ಲಿ ಅರ್ಜುನನ ಪಾತ್ರ ಪ್ರಮುಖವಾಗಿ ತೋರುವಂತೆ ಮಾಡಲು ಪ್ರಯತ್ನಿಸಿದ್ದಾನೆ.

## ೪. ಅನುವಾದ ವಿಧಾನ

**ವಂಶಾವತಾರಂ**

ಪಂಪ ಕವಿಯು ಹಸ್ತಿನಾಪುರದ ವೈಭವವನ್ನು ವರ್ಣಿಸತೊಡಗಿ ಅದು "ಮೂಱು ಲೋಕದ ಚೆಲ್ವೆಲ್ಲಮಂ ವಿಧಾತ್ರನೊಂದೆಡೆಗೆ ತೆರಳ್ಚಿದಂತೆ" ಶೋಭಿಸು ತ್ತಿತ್ತೆಂದೂ ಅದೇ ಭರತಕುಲತಿಲಕರ ಆವಾಸವೆಂದೂ ಹೇಳಿ ಅವರ ವಂಶಾವತಾರ ಕಥನಕ್ಕೆ ತೊಡಗಿದ್ದಾನೆ. ಜಲರುಹನಾಭನಿಂದ ಹಿರಣ್ಯಗರ್ಭ ಹುಟ್ಟಿದ. ಆತನ ಮನಸ್ಸಂಭವರಾದ ಆರ್ವರಲ್ಲಿ ಒಬ್ಬರಾದ ಮರೀಚಿಯ ಮಗ ಕಶ್ಯಪನು 'ಅನೇಕ ಭುವನೋತ್ಪತ್ತಿ ನಾಟಕಕ್ಕೆ ಸೂತ್ರಧಾರನಾದ'. ಆತನ ಮಗನೇ ಸೂರ್ಯ. "ಅವ ನಿಂದ ಸೂರ್ಯವಂಶಮೆಂಬುದಾಯ್ತು" ಎಂದು ಒಂದೇ ಮಾತಿನಲ್ಲಿ ಹೇಳಿ ಮುಗಿಸಿ ಬಿಟ್ಟು, ಕವಿ ಚಂದ್ರವಂಶದ ಕಥೆಯ ಕಡೆಗೆ ತಿರುಗಿದ್ದಾನೆ. ಆ ವಂಶದಲ್ಲಿ "ದೌಷ್ಯಂತಿ ಭರತನೆಂಬಂ ನೆಗಟ್ದಿಂ" ಎಂದು ನೇರವಾಗಿ ಭರತನ ಕಥೆಗೆ ಹಾರಿ ಅವನ ತರುವಾಯ ಹಲವರು ಅರಸರು ಆಗಿಹೋದಮೇಲೆ ಶಂತನುವೆಂಬ ರಾಜ ಹುಟ್ಟಿ ಗಂಗೆಯನ್ನು ಮದುವೆಯಾಗಿ ಭೀಷ್ಮನನ್ನು ಪಡೆದನೆಂದು ಹೇಳಿ ಆದಿವಂಶಾವತಾರದ ಕಥೆಯನ್ನೆಲ್ಲ ಒಟ್ಟು ಹತ್ತು ಕಂದಪದ್ಯಗಳಲ್ಲಿ ವರ್ಣಿಸಿ ಮುಗಿಸಿಬಿಟ್ಟಿದ್ದಾನೆ! ಮಹಾವಿಷ್ಣುವಿನಿಂದ ಆರಂಭವಾಗಿ ಶಂತನುವಿನವರೆಗೆ ಬರುವವೇಳೆಗೆ ವ್ಯಾಸರು ತೊಂಬತ್ತೊಂಬತ್ತು ಅಧ್ಯಾಯಗಳನ್ನೇ ಬರೆದು ಮುಗಿಸಿದ್ದಾರೆ. ನನ್ನಯಭಟ್ಟ ಭೀಷ್ಮನ ಜನ್ಮಕಥೆಯ ಬಳಿಗೆ ಬರುವ ವೇಳೆಗೆ ಮೂರು ಆಶ್ವಾಸಗಳು ಮುಗಿದು ನಾಲ್ಕನೆಯದರಲ್ಲಿ ನೂರ ಅರವತ್ತೆಂಟು ಪದ್ಯಗಳೇ ದಾಟಿಹೋಗಿವೆ! ಪಂಪ ಈ ಕಥೆಯನ್ನು ಎಷ್ಟು ಸಂಕ್ಷೇಪ ಗೊಳಿಸಿರುವನೆಂಬುದನ್ನು ಮನಗಾಣಬಹುದಾಗಿದೆ. ಇದನ್ನೆಲ್ಲ ವಿಸ್ತಾರವಾಗಿ ವಿವರಿಸಿ ಹೇಳುವ ವಿರಾಮವಾಗಲಿ ಆಸಕ್ತಿಯಾಗಲಿ ಪಂಪನಿಗಿಲ್ಲ. ತಾನು ಹೇಳಬಯಸಿದ 'ವಿಕ್ರಮಾರ್ಜುನವಿಜಯ'ಕ್ಕೆ ಈ ಕಥೆಗಳೆಲ್ಲ ಅಪ್ರಕೃತ. ಆದ್ದರಿಂದ ಈ ನಡುವೆ ಬಂದಿರುವ ಎಲ್ಲ ಕಥಾಭಾಗವನ್ನೂ ಅವನು ಪರಿಹರಿಸಿ ಮುಂದಿನ ಭಾರತ ಕಥೆಯಲ್ಲಿ ಪ್ರಧಾನಪಾತ್ರ ವಹಿಸಿದ ಗಂಗಾಪುತ್ರ ಭೀಷ್ಮನ ಬಳಿಗೆ ಧಾವಿಸಿದ್ದಾನೆ.

> ಶಂತನುಗಮಮಳ ಗಂಗಾ
> ಕಾಂತೆಗಮೆಂಟನೆಯ ವಸು ವಸಿಷ್ಠನ ಶಾಪ
> ಭ್ರಾಂತಿಯೊಳೆ ಬಂದು ನಿರ್ಜಿತ
> ಕಂತುವೆನಲ್ಕಂತು ಪುಟ್ಟಿದಂ ಗಾಂಗೇಯಂ

ಎಂದು ಹೇಳುವ ವೇಳೆಗೆ ಪಂಪಭಾರತದ ಪ್ರಥಮಾಶ್ವಾಸದ ಅರವತ್ತೇಳು ಪದ್ಯಗಳಾ ಗಿವೆ. ಶಾಪಗ್ರಸ್ತರಾಗಿ ಭೂಲೋಕದಲ್ಲಿ ಅವತರಿಸಬೇಕಾಗಿದ್ದ ಅಷ್ಟವಸುಗಳ

ಪ್ರಾರ್ಥನೆಗೆ ಓಗೊಟ್ಟು ಗಂಗೆ ಮಾನವರೂಪ ಧರಿಸಿಬಂದ ವೃತ್ತಾಂತವನ್ನಾಗಲಿ ಶಂತನುವಿನೊಡನೆ ಆಕೆ ಮಾಡಿಕೊಂಡ ನಿಬಂಧನೆಯ ಕಥೆಯನ್ನಾಗಲಿ ಪಂಪ ಹೇಳಲಿಲ್ಲ. ನನ್ನಯಭಟ್ಟ ಆ ವೃತ್ತಾಂತವನ್ನೆಲ್ಲ ಹೇಳಿರುವುದೇ ಅಲ್ಲದೆ ಶಂತನು ಕೊನೆಯ ಮಗನನ್ನಾದರೂ ಉಳಿಸಿಕೊಳ್ಳಬೇಕೆಂದು ಬಯಸಿದಾಗ ಗಂಗೆ ಈ ಶಾಪಾದಿ ವೃತ್ತಾಂತಗಳನ್ನೆಲ್ಲ ಅವನಿಗೆ ತಿಳಿಯಹೇಳಿ, ದೇವವ್ರತನೆಂಬ ಆ ಮಗುವನ್ನು ತನ್ನೊಡನೆ ಕರೆದುಕೊಂಡುಹೋಗಿ ಅವನು ಬೆಳೆದು ದೊಡ್ಡವನಾದ ಮೇಲೆ ಕರೆತಂದು ಶಂತನುವಿಗೆ ಒಪ್ಪಿಸಿದ ವೃತ್ತಾಂತವನ್ನೂ ಸ್ವಾರಸ್ಯವಾಗಿ ನಿರೂಪಿಸಿದ್ದಾನೆ. ದಿವ್ಯಭೂಷಣಾಲಂಕೃತನಾದ ಮಗನನ್ನು ಕರೆತಂದು ಗಂಗೆ ಶಂತನುವಿಗೆ ಒಪ್ಪಿಸುವಾಗ ಅವನ ಯೋಗ್ಯತೆಯನ್ನು ಕುರಿತು ಹೀಗೆ ಹೇಳಿದಳಂತೆ :—

> ಸಾಂಗಂಬು ಲಗುಚುಂಡ ಸಕಲ ವೇದಂಬುಲು ಚದಿವೆ ವಸಿಷ್ಠುತೋ ಸಕಲ ಧರ್ಮ
> ಶಾಸ್ತ್ರಾದಿ ಬಹುವಿಧ ಶಾಸ್ತ್ರಮುಲ್ ಶುಕ್ರ ಬೃಹಸ್ಪತುಲ್ ನೇರ್ಚಿನಯಟ್ಲ ನೇರ್ಚೆ
> ಬರಮಾಸ್ತ್ರವಿದ್ಯನಪ್ಪರಶುರಾಮುಡೆಂತ ದಕ್ಷುಡಂತಿಯ ಕಡು ದಕ್ಷುಡಯ್ಯೆ
> ನಾತ್ಮ ವಿಜ್ಞಾನಂಬುನಂದು ಸನತ್ಕುಮಾರಾದುಲಯಟ್ಟಿಡಯಿನಯನಘಮೂರ್ತಿ
>
> (ಆದಿ) IV 169

ಭೀಷ್ಮ ವಸಿಷ್ಠನ ಸನ್ನಿಧಿಯಲ್ಲಿ ಸಕಲ ವೇದಗಳನ್ನೂ ಸಾಂಗವಾಗಿ ಓದಿದ ವಿಷಯವನ್ನು ನನ್ನಯಭಟ್ಟ ಹೇಳದಿರಲು ಸಾಧ್ಯವೆ? ಅವನು ಧರ್ಮಶಾಸ್ತ್ರವೇ ಮೊದಲಾದ ಶಾಸ್ತ್ರಪಾಂಡಿತ್ಯದಲ್ಲಿ ಗುರು ಶುಕ್ರರಿಗೆ ಸಮಾನನೆಂದೂ ಅಸ್ತ್ರಪಾಂಡಿತ್ಯದಲ್ಲಿ ಪ್ರಸಿದ್ಧನಾದ ಆ ಪರಶುರಾಮನಿಗೇ ಸಮಾನನೆಂದೂ ಗಂಗೆ ಹೇಳಿದ್ದಾಳೆ. ಇದರಿಂದ ದೇವವ್ರತ ಶಂತನುವಿನ ಬಳಿಗೆ ಬರುವ ವೇಳೆಗಾಗಲೇ ಸಕಲ ವಿದ್ಯಾಪಾರಂಗತನಾಗಿದ್ದನೆಂದೂ ಶಸ್ತ್ರಾಸ್ತ್ರ ಪಾಂಡಿತ್ಯವನ್ನು ಗಳಿಸಿ ಪರಶುರಾಮನಿಗೆ ಸಮಬಲನಾಗಿದ್ದನೆಂದೂ ತಿಳಿಯುತ್ತದೆ. ದೇವವ್ರತ ಪರಶುರಾಮನ ಶಿಷ್ಯನಾಗಿ ಅವನ ಬಳಿ ಅಸ್ತ್ರವಿದ್ಯೆ ಕಲಿತನೆಂದು ಹೇಳಿಲ್ಲ. ಪಂಪ ಮಾತ್ರ "ಗಂಗಾತ್ಮಜನ್ಮಂ ಜಯಶ್ರೀಲೋಲಂ ಜಮದಗ್ನಿ ರಾಮ ಮುನಿಯೊಳ್ ಕಲ್ತಂ ಧನುರ್ವಿದ್ಯೆಯಂ" ಎಂದು ಹೇಳಿದ್ದಾನೆ. 'ಅಂತು ಕಲ್ತು ಮುನ್ನಮೆ ಚಾಪವಿದ್ಯೆಯೊಳಾರಿಂದಮೀತನೆ ಭಾರ್ಗವನೆನಿಸಿದ ಭಾರ್ಗವಂಗೆ ತಾನೆ ಭಾರ್ಗವ' ನಾದನೆಂದು ವರ್ಣಿಸಿ ಪಂಪ ಆ ಗುರು ಶಿಷ್ಯರು ಅಸ್ತ್ರವಿದ್ಯೆಯಲ್ಲಿ ಸರಿಸಮನಾದವರೆಂದು ನಿರೂಪಿಸಿದ್ದಾನೆ.

ಭೀಷ್ಮವೃತ್ತಾಂತವನ್ನಿಷ್ಟು ಮಾತ್ರ ಹೇಳಿ ಪಂಪ ವ್ಯಾಸರ ಅವತಾರ ಕಥೆಯನ್ನು ಸಂಗ್ರಹವಾಗಿ ಹೇಳ ಹೊರಟಿದ್ದಾನೆ. ನನ್ನಯ ಭಟ್ಟ ಈ ಕಥೆಯನ್ನು ಭೀಷ್ಮ ಜನನದ ಕಥೆಗಿಂತ ಮುಂಚೆಯೇ ಹೇಳಿ ಮುಗಿಸಿದ್ದಾನೆ. "ವೃದ್ಧಪರಾಶರನುತ್ತರಾ ಪಥಕ್ಕೆ ಪೋಗುತ್ತುಂ ಬಂದು ತೋಱೆಯ ತಡಿಯೊಳೋಡಮುಂ ನಡೆಯಿಸುವ ಮತ್ಸ್ಯಗಂಧಿಯಂ ಕಂಡೆಮ್ಮನೀ ತೋಱೆಯಂ ಪಾಯಿಸೆಂಬುದುಂ,

ಸಾಸಿರ್ವರೇಱದೊಡಲ್ಲದೀಯೋಡಂ ನಡೆಯದು" ಎಂದು ವ್ಯಾಸ ಜನ್ಮದ ಕಥೆಯನ್ನು ಪಂಪ ಆರಂಭಿಸಿದ್ದಾನೆ. ಇಲ್ಲಿ 'ಒಂದು ತೊಱೆ' ಎಂದು ಹೇಳಿದೆಯೇ ಹೊರತು ಯಮುನಾ ನದಿಯೆಂದು ಹೇಳಿಲ್ಲ. ಅದು ಉತ್ತರಾಪಥಕ್ಕೆ ಹೋಗುವ ದಾರಿಯಲ್ಲಿ ಅಡ್ಡ ಬರುವ ಒಂದು ನದಿ. ಮತ್ಸ್ಯಗಂಧಿಯನ್ನು ಕಂಡ ಕೂಡಲೆ ಪರಾಶರನು 'ಮದನಪರವಶ'ನಾಗಿ ತನ್ನ ದಿವ್ಯದೃಷ್ಟಿಯಿಂದ ಅವಳ ಜನ್ಮವೃತ್ತಾಂತವನ್ನೆಲ್ಲ ಗ್ರಹಿಸಿ ಅವಳ ದೋಣಿಯನ್ನೇರಿದನೆಂದು ನನ್ನಯ ವರ್ಣಿಸಿದ್ದಾನೆ. ಪಂಪನ ಕಥೆಯಲ್ಲಿ ಪ್ರಥಮ ದರ್ಶನದಲ್ಲಿಯೇ ಪರಾಶರನು ಮದನಪರವಶನಾದ ಸುದ್ದಿಯಿಲ್ಲ. ಅಲ್ಲದೆ, ಅವನು ಸುಲಭವಾಗಿ ಅವಳ ದೋಣಿಯನ್ನೇರಲೂ ಶಕ್ಯವಾಗಲಿಲ್ಲ ! 'ಸಾವಿರ ಜನ ಏರಿದ ಹೊರತು ಈ ದೋಣಿ ನಡೆಯದು' ಎಂದು ಆ ಕನ್ಯೆ ಮುನಿಗೆ ಹೇಳಿದಳಂತೆ! ಪರಾಶರರು ಆಗ 'ಅನಿಬರ ಬಿಣ್ಪು ಮಪ್ಪೆಮೇಱಿಸು' ಎಂದು ಹೇಳಿ ದೋಣಿಯೇರ ಬೇಕಾಯಿತು ! ದೋಣಿ ಕೊಂಚ ದೂರ ಸರಿದ ಮೇಲೆ ಮುನಿಯು "ದಿವ್ಯ ಕನ್ಯೆಯ ನಟ್ಟಿರ್ತು ನೋಡಿ" ಅವಳಲ್ಲಿ ಅಪೇಕ್ಷೆ ಹೊಂದಿದನಂತೆ !

> ಮನದೊಳ್ಸೋಲ್ತು ಮುನೀಂದ್ರನಾಕೆಯೊಡಲೀ ದುರ್ಗಂಧವೋಪಂತೆ ಯೋ
> ಜನಗಂಧಿತ್ವಮನಿತ್ತು ಕಾಂಡ ಪಟದುತಿರ್ಪನ್ನೆಗಂ ಮಾಡಿ ಮಂ
> ಜನಲಂಪಟ್ಕಿಱನೀಯೆ ಕೂಡುವೆಡೆಯೊಳ್ ಜ್ಞಾನಸ್ವರೂಪಂ ಮಹಾ
> ಮುನಿಪಂ ಪುಟ್ಟಿದನಂತು ದಿವ್ಯ ಮುನಿಗಳ್ಗೀಗೆಯ್ದೊಡಂ ತೀರದೇ

ಎಂದು ಒಂದು ಪದ್ಯದಲ್ಲಿ ಮತ್ಸ್ಯಗಂಧಿ ಪರಾಶರರ ಸಮಾಗಮ ವೃತ್ತಾಂತವನ್ನೆಲ್ಲ ಹೇಳಿ ಮುಗಿಸಿದ್ದಾನೆ. ನನ್ನಯ ಈ ಕಥೆಯನ್ನು ಇಷ್ಟು ಸೂಕ್ಷ್ಮವಾಗಿ ಹೇಳಿಲ್ಲ. ಪರಾಶರನಿಗೂ ಆ ದೋಣಿ ನಡೆಸುವ ಕನ್ಯೆಗೂ ನಡೆದ ಸಂಭಾಷಣೆಯನ್ನು ವಿವರವಾಗಿ ನಿರೂಪಿಸಿ ಅವಳ ಮೈಯ ದುರ್ಗಂಧ ಹೋಗಿ ಅವಳು 'ಯೋಜನಗಂಧಿ' ಯಾದುದನ್ನೂ ಅವಳಿಗೆ ಮುನಿಯ ಅನುಗ್ರಹದಿಂದ ಆಗಲೇ "ಅನೇಕ ದಿವ್ಯಾಂಬರಾಭರಣ"ಗಳು ದೊರೆತುದನ್ನೂ ಹೇಳಿದ್ದಾನೆ. ಆಮೇಲೆ ಅವಳು ತನ್ನ ದೋಣಿಯನ್ನು ಯುಮುನಾ ದ್ವೀಪಕ್ಕೆ ಸೇರಿಸಿ ಅಲ್ಲಿ ಪರಾಶರನೊಡನೆ ಕೂಡಿ ಮಗನನ್ನು ಪಡೆದಳೆಂದೂ ಆದ್ದರಿಂದಲೇ ಆಗ ಹುಟ್ಟಿದ ಮುನಿಗೆ ದ್ವೈಪಾಯನನೆಂಬ ಹೆಸರು ಬಂದಿತೆಂದೂ ಹೇಳಿದ್ದಾನೆ. ಇಷ್ಟಾದಮೇಲೆ "ಪರಾಶರುಡು ಸತ್ಯವತಿ ಗೋರಿನ ವರಂಬುಲಿಚ್ಚಿ ನಿಜೇಚ್ಛನರಿಗೆ" ಎಂದು ಹೇಳಿ ನನ್ನಯ ಈ ಕಥೆಯನ್ನು ಮುಗಿಸಿದ್ದಾನೆ! ಸಾವಿರ ಮಂದಿ ಏರಿದ ಹೊರತು ದೋಣಿ ನಡೆಯದೆಂದು ಮತ್ಸ್ಯಗಂಧಿ ಹೇಳಿದುದಾಗಲಿ ತಾನು ಅಷ್ಟು ಜನರ ಭಾರವೂ ಆಗುವೆನೆಂದು ಪರಾಶರನು ಹೇಳಿದ ಸಂಗತಿಯಾಗಲಿ ನನ್ನಯನಲ್ಲಿ ಇಲ್ಲ. ಈ ಅಂಶವನ್ನು ಪಂಪ ಯಾವ ಭಾರತದಿಂದ ಸಂಗ್ರಹಿಸಿದನೋ ತಿಳಿಯದು.

ವ್ಯಾಸರು ಜನ್ಮಿಸಿದ ಕಥೆಯನ್ನು ಹೇಳಿ ಪಂಪಕವಿ 'ಅಂತು ನೀಲಾಂಬುದ ಶ್ಯಾಮನುಂ ಕನಕ ಪಿಂಗಳ ಜಟಾಬಂಧ ಕಳಾಪನುಂ ದಂಡ ಕಪಾಳಹಸ್ತನುಂ ಕೃಷ

ಮೃಗತ್ವಕ್ಪರಿಧಾನನುಮಾಗಿ ವ್ಯಾಸಭಟ್ಟಾರಕಂ ಪುಟ್ಟುವುದುಂ ಆತನನ್ ಒಡ ಗೊಂಡು ಸತ್ಯವತಿಗೆ ಪುನಃ ಕನ್ಯಾಭಾವಮಂ ದಯೆಗೆಯ್ದು ಪರಾಶರಂ ಪೋದನ್' ಎಂದು ಹೇಳಿ ಪರಾಶರ ತನ್ನ ಮಗ ವ್ಯಾಸನನ್ನೂ ತನ್ನ ಜತೆಯಲ್ಲಿಯೇ ಕರೆದುಕೊಂಡು ಹೋದನೆಂಬ ಅರ್ಥ ಬರುವಂತೆ ಬರೆದಿದ್ದಾನೆ. ಆದರೆ ನನ್ನಯ ಹೀಗೆ ಹೇಳಿಲ್ಲ. ಪರಾ ಶರನು ಹೊರಟು ಹೋದಮೇಲೆ ವ್ಯಾಸನು "ಕೃಷ್ಣಾಜಿನ ಪರಿಧಾನ ಕಪಿಲ ಜಟಾ ಮಂಡಲ ದಂಡ ಕಮಂಡಲು ಮಂಡಿತುಡೈ ತಲ್ಲಿ ಮುಂದಟ ನಿಲಿಚಿ....ವಿೂಕುಂ ಬನಿಗಲ ಯಪ್ಪುಡ ನನ್ನುಂ ದಲಂಚುನದಿ ಯಾಕ್ಷಣಂಬು ವತ್ತುನನಿ ಸಕಲ ಲೋಕ ಪಾವನುಂ ಡಖಿಲಲೋಕ ಹಿತಾರ್ಥಂಬುನಾ ದಪೋವನಂಬುನುಕುಂ ಜನಿ ಯಂದು ಮಹಾ ಘೋರ ತಪಂಬು ಚೇಯುಚು" ಇದ್ದನೆಂದು ನನ್ನಯನ ವರ್ಣನೆ. ವ್ಯಾಸ ತನ್ನ ತಾಯಿಗೆ ಕೈಮುಗಿದು ಆಕೆ ನೆನಸಿಕೊಂಡಾಗ ಕೂಡಲೆ ಬರುವುದಾಗಿ ಭಾಷೆ ಕೊಟ್ಟು ವನಕ್ಕೆ ಹೋಗಿ ಘೋರ ತಪಸ್ಸನ್ನಾಚರಿಸುತ್ತಿದ್ದನಂತೆ! ಇಲ್ಲಿ ನಾವು ಇನ್ನೊಂದು ಸಂಗತಿ ಯನ್ನೂ ಗಮನಿಸಬೇಕಾಗಿದೆ. ವ್ಯಾಸ 'ಕೃಷ್ಣಾಜಿನ ಪರಿಧಾನ ಕಪಿಲ ಜಟಾ ಮಂಡಲ ದಂಡ ಕಮಂಡಲ ಮಂಡಿತ' ನಾಗಿದ್ದನೆಂದು ನನ್ನಯಭಟ್ಟ ಹೇಳಿದ್ದರೆ ಕನ್ನಡದ ಪಂಪ ಆ ಋಷಿಯನ್ನು 'ನೀಲಾಂಬುದಶ್ಯಾಮನುಂ ಕನಕ ಪಿಂಗಳ ಜಟಾ ಬಂಧ ಕಳಾಪನುಂ' ಎಂದು ವರ್ಣಿಸಿ ಅವನು "ದಂಡಕಪಾಳಹಸ್ತನುಂ ಕೃಷ್ಣ ಮೃಗತ್ವಕ್ಪರಿಧಾನನುಮಾಗಿ ವ್ಯಾಸ ಭಟ್ಟಾರಕಂ ಪುಟ್ಟುವುದುಂ" ಎಂದು ಹೇಳಿದ್ದಾನೆ. ಇಲ್ಲಿ ಜಟಾಕಳಾಪ ನೀಲವರ್ಣ, ಕೃಷ್ಣಾಜಿನ ಉಭಯಕವಿಗಳೂ ಹೇಳಿದ ವಿಷಯ. ಗಳಾದವು. ಪಂಪ ವ್ಯಾಸನು ಕೈಯಲ್ಲಿ 'ಕಪಾಲ' ವನ್ನು ಹಿಡಿದಿದ್ದನೆಂದು ಹೇಳಿ ದ್ದಾನೆ. ವೇದವ್ಯಾಸರು ಕಪಾಲಹಸ್ತರೆಂದು ವೈದಿಕರು ಹೇಳುವುದಿಲ್ಲ. ನನ್ನಯ ಕಮಂಡಲವನ್ನೇ ಹೇಳಿದ್ದಾನೆ. ಬಹುಶಃ ವ್ಯಾಸಮುನಿಯ ಬಣ್ಣನೆ ಮಾಡಹೊರ ಟಾಗ ಜಿನಭಕ್ತನಾದ ಕವಿಯ ಮನೋನೇತ್ರದ ಮುಂದೆ ಯಾವ ಜೈನಮುನೀಂದ್ರನ ಚಿತ್ರವೋ ಬಂದಿರಬಹುದು. ಕಪಾಲಶಬ್ದಕ್ಕೆ 'ಕಲಾಪ' ಎಂಬ ಒಂದು ಪಾಠಾಂತ ರವೂ ಇದೆ! ಕಲಾಪವೆಂದರೆ ನವಿಲುಗರಿಯ ದೊಂದೆ. ಅದು ಸ್ಪಷ್ಟವಾಗಿ ಜೈನ ಯತಿಯ ವರ್ಣನೆಯೇ ಆಗುತ್ತದೆ. ! "ವ್ಯಾಸ ಭಟ್ಟಾರಕಂ" ಎಂದು ಹೇಳಿರುವುದೂ ಈ ಊಹೆಯನ್ನು ಸಮರ್ಥಿಸುವಂತಿದೆ. ಅರಿಯದೆಯೇ ಕವಿ ಇಲ್ಲಿ ತನ್ನ ಸ್ವಧರ್ಮದ ಆಚಾರದಿಂದ ಪ್ರಭಾವಿತನಾಗಿರುವನೆಂದು ತಿಳಿಯಬೇಕಾಗಿದೆ.

ವ್ಯಾಸ ಜನ್ಮವೃತ್ತಾಂತವನ್ನಿಷ್ಟು ಹೇಳಿ ಪಂಪ ಶಂತನುವಿನ ಎರಡನೆಯ ಮದುವೆಯ ಸುದ್ದಿಯನ್ನು ಆರಂಭಿಸಿದ್ದಾನೆ. ಶಂತನು ಮಹಾರಾಜನು ಒಂದು ದಿನ ಬೇಟೆಗೆ ಹೋದಾಗ ಆ 'ಮೃಗಶಾಬಾಕ್ಷಿಯ ಕಂಪು ತಟ್ಟೆ ಮಧುಪಂಬೋಲ್ ಸೋಲ್ತು' ನೆಂದು ಪಂಪ ಮಹಾಸುಂದರವಾದ ಮತ್ತು ಅರ್ಥಭರಿತವಾದ ಉಪ ಮಾನವನ್ನು ಹೇಳಿದ್ದಾನೆ. ದುಂಬಿ ವಾಸನೆಗೆ ಸೋತು ಹೂವಿನ ಬಳಿಗೆ ನುಗ್ಗಿ ಹೋಗುವಂತೆ ಅರಸ ಆ ಹೆಣ್ಣಿನ ಆಕರ್ಷಕವಾದ ಮೈಕಂಪಿನಿಂದ ಸೋತು ಅವಳನ್ನು

ಹುಡುಕಿಕೊಂಡು ಹೋಗಿ ಕಂಡು .ಒಲಿದು ' ನಲ್ಮೆ ದಿಬ್ಯಂ ಬಿಡಿವಂತೆವೊಲ್ ಪಿಡಿದು ನೀಂ ಬಾ ಪೋಸಂ' ಎಂದು ಕರೆದನು! ಆದರೆ ಈ ವರನ ಆಸೆಯ ಕರೆಯನ್ನು ಆಕೆ ಒಮ್ಮೆಗೇ ಆದರಿಸಲಿಲ್ಲ. ' ತತ್ಕನ್ಯಕೆ ನಾಣ್ಚಿ ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ' ಎಂದು ಅವನು ಅನುಸರಿಸಬೇಕಾದ ಕ್ರಮವನ್ನು ಸೂಚಿಸಿದಳು. ಆಗ ರಾಜನಿಗೂ ಕೊಂಚ ವಿವೇಚನೆ ಹುಟ್ಟಿತು. ಚಕ್ರವರ್ತಿಯಾದವನು ದಾಶರಾಜನ ಬಳಿಗೆ ಹೋಗಿ ಸ್ವಂತವಾಗಿ ಮಾತನಾಡುವುದು ತನ್ನ ಅಂತಸ್ತಿಗೆ ಸಮನಲ್ಲವೆಂದು ಅವನು ಭಾವಿಸಿದನಾದೀತು. ಅವನು ನೇರವಾಗಿ ನಗರಕ್ಕೆ ಹಿಂತಿರುಗಿ ಹೆಗ್ಗಡೆಗಳನ್ನು ಈ ಕೆಲಸಕ್ಕೆ ನೇಮಿಸಿದನು. ಆದರೆ ದಾಶರಾಜ ದೇವವ್ರತನಂಥ ಮಗನಿರುವಾಗ ಅರಸನಿಗೆ ತಮ್ಮ ಹೆಣ್ಣು ಕೊಡಲಿಷ್ಟವಿಲ್ಲವೆಂದೂ ಆದರೆ ತಮ್ಮ ಮಗಳ ಮಗನಿಗೇ ರಾಜ್ಯ ಕೊಡುವುದಾದರೆ ಆಗಬಹುದೆಂದೂ ಒಂದು ನಿಬಂಧನೆಯ ಮೇಲೆ ಕನ್ಯೆಯನ್ನು ಕೊಡಲು ಒಪ್ಪಿದನು. ಇದನ್ನು ಕೇಳಿ ಶಂತನು ವ್ಯಥೆಗೀಡಾದನು. ಇಂಥ ಮದುವೆ ಮಾಡಿಕೊಂಡರೆ ತನ್ನ ಕೀರ್ತಿ ಮಾಸುವುದೆಂದು ಅವನು ಅಂಜಿದನು. ಆದರೆ ಮೋಹ ಹೋಗಲಿಲ್ಲ. ಅವನು ಇಕ್ಕಟ್ಟಿಗೆ ಸಿಕ್ಕಿಕೊಂಡನು. ಹೆಣ್ಣಿನಮೇಲೆ ಆಸೆ, ಗಾಂಗೇಯನಲ್ಲಿ ಪ್ರೀತಿ, ಯಾವುದನ್ನೂ ಬಿಡಲು ಶಕ್ತನಾಗದೆ ಶಂತನು " ಅತನು ಪರಿತಾಪಿತ ಶರೀರನುಮಾಗಿ ಕರಂಗೆರ್ದೆಗಿಡೆ ತದ್ವೃತ್ತಾಂತಮೆಲ್ಲಮಂ ಗಾಂಗೇಯ ನಱಿದು" ತಾನು ರಾಜ್ಯತ್ಯಾಗಕ್ಕೆ ನಿರ್ಣಯಿಸಿ ನೇರವಾಗಿ ದಾಶರಾಜನಲ್ಲಿಗೇ ಹೋಗಿ ಅವನ ಸಂಶಯಗಳನ್ನೆಲ್ಲ ಪರಿಹರಿಸಿ ತನ್ನ ತಂದೆಗೆ ಯೋಜನಗಂಧಿಯೆನಿಸಿದ ಸತ್ಯವತಿಯೊಡನೆ ವಿವಾಹ ಮಾಡಿಸಿದನು! ಅದಕ್ಕಾಗಿ ಗಾಂಗೇಯನು ' ಪೆಂಡಿರಂಬರೊಳ್ ಕೂಡುವೆನಲ್ಲನಿಂದು ಮೊದಲಾಗಿರೆ ನಿಕ್ಕುವಮ್' ಎಂದು ' ಭೀಷ್ಮ' ಪ್ರತಿಜ್ಞೆಯನ್ನು ಮಾಡಲು ಹಿಂಜರಿಯಲಿಲ್ಲ! ಅಂದಿನಿಂದ ಗಾಂಗೇಯನಿಗೆ ಭೀಷ್ಮನೆಂದು ಹೆಸರು ಬಂತು!

ನನ್ನಯನ ಭಾರತದಲ್ಲಿ ಈ ಕಥೆ ಕೊಂಚ ಭಿನ್ನವಾಗಿದೆ, ವಿಸ್ತಾರವೂ ಆಗಿದೆ. ಅಲ್ಲಿ ಶಂತನು ' ಅಪೂರ್ವ ಸುರಭಿ ಗಂಧಂಬಾಘ್ರಾಣಿಂಚಿ' ಯೇ ಆ ಕನ್ಯೆಯನ್ನು ಪತ್ತೆಮಾಡಿ ಅವಳ ರೂಪಾತಿಶಯವನ್ನೂ ಅವಳ ' ಶುಚಿಸ್ಮಿತ ವಕ್ತ್ರಕಾಂತಿ' ಯನ್ನೂ ನೋಡಿ ಅವಳನ್ನು ಬಹಳವಾಗಿ ಮೆಚ್ಚಿಕೊಂಡನಂತೆ. ಮೆಚ್ಚಿ, ಅವಳು ದೋಣಿ ನಡೆಸುವ ಕೆಲಸವನ್ನೇಕೆ ಮಾಡುತ್ತಿರುವಳೆಂಬುದನ್ನು ಕೇಳಿ ' ತಂಡ್ರಿ ನಿಯೋಗಂಬುನ ನಿಕ್ಕಾರ್ಯಂಬು ಧರ್ಮಾರ್ಥಂಬು ಸೇಯುಚುಂದುನು.' (ತಂದೆಯ ಅಪ್ಪಣೆಯಂತೆ ಈ ಕಾರ್ಯವನ್ನು ಧರ್ಮಾರ್ಥವಾಗಿ ಮಾಡುತ್ತಿದ್ದೇನೆ) ಎಂಬ ಉತ್ತರ ಪಡೆದು, ಅವಳ ಸಂಗಡ ಇನ್ನೇನೂ ಮಾತನಾಡದೆ ದಾಶರಾಜನಲ್ಲಿಗೇ ಹೋಗಿ ತನ್ನ ಆಸೆಯನ್ನು ಹೇಳಿದನಂತೆ; ಆ ದಾಶರಾಜ ಅವನನ್ನು ಆದರದಿಂದ ಸ್ವಾಗತಿಸಿ ಸತ್ಕಾರಮಾಡಿ ಉಪಚಾರೋಕ್ತಿಗಳನ್ನೆಲ್ಲ ಹೇಳಿ ಕಡೆಗೆ ತನ್ನ ನಿಬಂಧನೆಯನ್ನು ಹೇಳಿದನು. ಅದು ಅರಸನಿಗೆ ಸಮ್ಮತವಾಗಲಿಲ್ಲ. ಆದ್ದರಿಂದ ಅವನು ' ಇದು

ಅಸಾಧ್ಯ. ಇನ್ನೊಂದನ್ನು ಬೇಡು' ಎಂದನು. ಆದರೆ ದಾಶರಾಜ ಕಡು ಖಂಡಿತವಾಗಿ 'ನನಗೆ ಬೇರೇನೂ ಇಷ್ಟವಿಲ್ಲ' ಎಂದು ಕಡ್ಡಿ ತುಂಡುಮಾಡಿದ ಹಾಗೆ ಹೇಳಿಬಿಟ್ಟನು. ಅದನ್ನು ಕೇಳಿ ಶಂತನು 'ಪ್ರತಿಹತಮನೋರಥನಾಗಿ' ಮನೆಗೆ ಬಂದು ಚಿಂತಾಕ್ರಾಂತನಾಗಿ ಮೌನದಿಂದ ಯಾವ ಕಾರ್ಯದಲ್ಲಿಯೂ ಆಸಕ್ತಿಯಿಲ್ಲದವನಾಗಿದ್ದುಬಿಟ್ಟನು. ಇಲ್ಲಿ ಶಂತನು ದಾಶರಾಜನಲ್ಲಿಗೆ ಮಧ್ಯವರ್ತಿಗಳನ್ನು ಕಳುಹಿಸಲಿಲ್ಲ. ಅದೇ ರೀತಿಯಾಗಿ ನನ್ನಯನ ಭೀಷ್ಮ ತಂದೆಯ ವೃತ್ತಾಂತವನ್ನು ಬೇರೆಯವರಿಂದ ತಿಳಿದುಕೊಳ್ಳದೆ ನೇರವಾಗಿ ತನ್ನ ತಂದೆಯನ್ನೇ ಪ್ರಶ್ನೆಮಾಡಿ ತಿಳಿದುಕೊಂಡನು. ಅವರ ಸಂಭಾಷಣೆ ಸ್ವಾರಸ್ಯವಾಗಿದೆ.

ತಂದೆಯ ವ್ಯಥಿತ ಮನೋವೃತ್ತಿಯನ್ನು ಗಮನಿಸಿದ ದೇವವ್ರತನು ನೆಟ್ಟಗೆ ಅವನ ಬಳಿಗೇ ಹೋಗಿ "ನಿಮ್ಮ ರಕ್ಷಣೆಗೆ ಒಳಪಟ್ಟ ರಾಜ್ಯಕ್ಕೆ ಬಾಧೆಯುಂಟುಮಾಡಬಲ್ಲ ಶತ್ರು ಯಾರೂ ಇಲ್ಲ. ಪ್ರಜೆಗಳೆಲ್ಲ ಯಾವಾಗಲೂ ಸಂತಸದಿಂದಿದ್ದಾರೆ. ಸಾಮಂತ ರಾಜರೆಲ್ಲ ನಿನಗೆ ವಿಧೇಯರು. ಹೀಗಿರಲು ರಾಜೇಂದ್ರ, ಈ ಮನಃಪರಿತಾಪ ನಿನಗೇಕೆ ಉಂಟಾಯಿತು?" ಎಂದು ಪ್ರಶ್ನೆ ಮಾಡಿದನು. ಮಗನ ಈ ಪ್ರಶ್ನೆಗೆ ತಟ್ಟನೆ ಉತ್ತರ ಹೇಳಲು ಶಂತನುವಿಗೆ ಸಾಧ್ಯವಾಗಲಿಲ್ಲ. ಅವನು ಬಹಳ ಹೊತ್ತು ಯೋಚನೆಮಾಡಿ ಕಡೆಗೆ ಹೀಗೆ ಹೇಳಿದನಂತೆ 'ಕೇಳಯ್ಯ, ಏಕಪುತ್ರನೂ ಅನಪತ್ಯನೂ ಒಂದೇ ಬಗೆಯೆಂದು ಧರ್ಮಜ್ಞರು ಹೇಳಿದುದನ್ನು ಕೇಳಿದ್ದೇನೆ. ಉತ್ತಮ ವಂಶಜರಿಗೆ ಅಗ್ನಿಹೋತ್ರ, ಸಂತಾನ, ವೇದಗಳು, ಮಧ್ಯೆ ನಷ್ಟವಾಗಬಾರದೆಂದು ಮಹಾಧರ್ಮಜ್ಞರಾದ ಮುನೀಂದ್ರರು ಹೇಳಿದ್ದಾರೆ. ನೀನು ಅಸ್ತ್ರಶಸ್ತ್ರ ವಿದ್ಯಾನಿಪುಣ. ರಣಗಳಲ್ಲಿ ಮಹಾಕ್ರೂರನಾದ ಅರಿವಿದ್ರಾವಣನಾದ ಸಾಹಸಿ! ಆದ್ದರಿಂದ ನಾನು ನಿನ್ನ ಇರವನ್ನು ನಂಬಲಾರದವನಾಗಿದ್ದೇನೆ. ಬಹುಪುತ್ರಾರ್ಥವಾಗಿ ಯತ್ನ ಮಾಡಬೇಕು. ನಾನು ಮದುವೆಯಾಗುತ್ತೇನೆ!'

ತಂದೆಯ ಅಪೂರ್ವವಾದ ಹೇಳಿಕೆಯನ್ನು ಕೇಳಿ ಗಾಂಗೇಯನು ಆಗ 'ವೃದ್ಧಾಮಾತ್ಯ ಸುಹೃಜ್ಜನಂ'ಗಳೊಡನೆ ವಿಚಾರ ಮಾಡಿ ಯಥಾರ್ಥವನ್ನು ಅರಿತು ದಾಶರಾಜನಲ್ಲಿಗೆ ಬಂದು ಅವನ ಅಪೇಕ್ಷೆಯನ್ನು ತಿಳಿದು ಅವನ ಸಂಶಯಗಳನ್ನೆಲ್ಲ ದೂರ ಮಾಡಿ ತಾನು "ನಿಜರಾಜ್ಯ ಪರಿತ್ಯಾಗವನ್ನೂ ಬ್ರಹ್ಮಚರ್ಯ ಪರಿಗ್ರಹವನ್ನೂ ಮಾಡಿ"ತಂದೆಗೆ ಮದುವೆ ನಿಷ್ಕರ್ಷೆ ಮಾಡಿದನು. ಅವನ 'ಸತ್ಯವ್ರತವನ್ನೂ ಗುರುಕಾರ್ಯ ಧುರಂಧರತ್ವ'ವನ್ನೂ ಮೆಚ್ಚಿ ದೇವತೆಗಳು ಅವನ ಮೇಲೆ ಪುಷ್ಪವೃಷ್ಟಿಯನ್ನು ಮಾಡಿದರಂತೆ! ಆ ಕನ್ಯೆಯನ್ನು ಗಾಂಗೇಯ ಕಾಂಚನ ರಥದಲ್ಲಿ ಕೂಡಿಸಿ ಕರೆತಂದು ತನ್ನ ತಂದೆಗೆ ಕೊಟ್ಟು ವೈಭವದಿಂದ ಮದುವೆ ಮಾಡಿಸಿದನಂತೆ! ಆಗ ಶಂತನು ಬಹಳ ಸಂತಸಪಟ್ಟು ತನ್ನ ಮಗನಿಗೆ 'ಸ್ವಚ್ಛಂದ ಮರಣ'ವಾಗುವಂತೆ ವರ ಕೊಟ್ಟನೆಂದು ಹೇಳಲು ನನ್ನಯಭಟ್ಟ ಮರೆತಿಲ್ಲ. ಈ ಕಥೆ ಪಂಪನಲ್ಲಿ ಎಷ್ಟು ಹ್ರಸ್ವವಾಗಿದೆಯೋ ಅಷ್ಟೇ ರಮ್ಯವಾಗಿದೆ. ಆ ಹ್ರಸ್ವತೆಯೇ ಪಂಪನ ಕಥನಕ್ಕೆ

ಮೆರುಗು ತಂದಿದೆ. ಪ್ರಾಪ್ತವಯಸ್ಕನಾದ ಮಗನಿಗೆ ಮದುವೆಮಾಡುವ ಬದಲು ಮುದುಕ ತಾನೇ ಮದುವೆಯಾಗಬಯಸಿದ ಈ ಶಂತನುವಿನ ಚರಿತ್ರೆಯನ್ನು ಹೆಚ್ಚಿಗೆ ಬೆಳೆಸಲು ಪಂಪನಿಗೆ ಮನವೊಪ್ಪಲಿಲ್ಲ. ಭೀಷ್ಮನ ತ್ಯಾಗಕ್ಕೆ ಶಂತನು ಕೊಟ್ಟ ಮೆಚ್ಚಿಗೆಯ ಪಾರಿತೋಷಕ ' ಸ್ವಚ್ಛಂದ ಮರಣ 'ದ ವಿಚಾರದಲ್ಲಿ ಪಂಪನಿಗೆ ಸುತರಾಂ ಆಸಕ್ತಿ ಹುಟ್ಟಲಿಲ್ಲ. ಅವನು ಅದರ ಸುದ್ದಿಯನ್ನೇ ಎತ್ತಿಲ್ಲ ! ಗಾಂಗೇಯನಾದರೋ ತಂದೆಯೊಡನೆ ಚರ್ಚೆ ಮಾಡುವ ಗೋಜಿಗೇ ಹೋಗಲಿಲ್ಲ. " ಏಕಪುತ್ರನೂ ಅನ ಪತ್ಯನೂ ಒಂದೇ ಬಗೆ " ಎಂದು ಹೇಳಿದ ನನ್ನಯನ ಶಂತನು ತನ್ನ ಮನೋದಯ ವನ್ನು ಹೇಳಿಕೊಳ್ಳಲಾರದೆ ' ದ್ರಾವಿಡ ಪ್ರಾಣಾಯಾಮ 'ದ ರೀತಿಯಲ್ಲಿ ಅನಗತ್ಯ ವಾದ ಮಾತುಗಳಿಗೆ ತೊಡಗಿದ್ದಾನೆ. ಪಂಪ ಈ ಭಾಗವನ್ನೆಲ್ಲ ಬಿಟ್ಟು ಗಾಂಗೇಯ ತಂದೆಯ ಸ್ಥಿತಿಯನ್ನು ತಿಳಿದುಕೊಂಡ ಕೂಡಲೆ ನಿರ್ಣಯಕ್ಕೆ ಬಂದು ಕಾರ್ಯತತ್ಪರ ನಾದನೆಂದು ಹೇಳಿ ಅವನ ಉದಾತ್ತತೆಯನ್ನು ಬೆಳಗಿದ್ದಾನೆ.

ಶಂತನು ಸತ್ಯವತಿಯನ್ನು ಕೂಡಿ ಬಾಳಿದ ಕಥೆಯನ್ನು ಹೆಚ್ಚಿಗೆ ಬೆಳೆಸುವ ಅಗತ್ಯ ಪಂಪನಿಗೆ ತೋರಲಿಲ್ಲ. ' ಅವರ ಬೇಟದ ಕಂದಲ್ಗಳಂತೆ ಚಿತ್ರಾಂಗದ ವಿಚಿತ್ರ ವೀರ್ಯರೆಂಬ ಮಕ್ಕಳ್ ಪುಟ್ಟಿ ಮಹಾಪ್ರಚಂಡರುಂ ಪ್ರತಾಪಿಗಳು ಮಾಗಿ ಬಳೆಯುತ್ತಿ ರ್ಪನ್ನೆಗಂ ಶಂತನು ಪರಲೋಕಪ್ರಾಪ್ತನಾದ 'ನೆಂದು ಹೇಳಿ ಮುಗಿಸಿದ್ದಾನೆ. ಗಾಂಗೇಯನು ತನ್ನ ತಂದೆಗೆ ಉಚಿತ ಕ್ರಿಯೆಗಳನ್ನು ಮಾಡಿಯಾದಮೇಲೆ ' ತನ್ನ ನುಡಿದ ನುಡಿವಳಿಯೆಂಬ ಪ್ರಾಸಾದಕ್ಕಧಿಷ್ಠಾನಂಗಟ್ಟುವಂತೆ ಚಿತ್ರಾಂಗದಂಗೆ ಪಟ್ಟಮಂ ಕಟ್ಟಿ 'ದನೆಂದು ಪಂಪನ ಬಣ್ಣನೆ. ನನ್ನಯನಾದರೂ ಈ ಭಾಗವನ್ನು ಪಂಪನಂತೆಯೇ ಬಹಳ ಸಂಕ್ಷೇಪವಾಗಿ ಹೇಳಿದ್ದಾನೆ. ಮೂಲಭಾರತದಲ್ಲಿಯೂ ಈ ಭಾಗ ಬಹಳ ಹ್ರಸ್ವವಾಗಿಯೇ ಇದೆ.

ಸ್ವರ್ಗತೇಶಂತನೌ ಭೀಷ್ಮಶ್ಚಿತ್ರಾಂಗದಮರಿಂದಮಂ
ಸ್ಥಾಪಯಾಮಾಸ ವೈರಾಜ್ಯೇ ಸತ್ಯವತ್ಯಾಮತೇಸ್ಥಿತಃ '

ತನ್ನ ಹೆಸರಿನವನೇ ಆದ ಒಬ್ಬ ಗಂಧರ್ವನೊಡನೆ ಸಂಭವಿಸಿದ ಯುದ್ಧದಲ್ಲಿ ಚಿತ್ರಾಂಗದನು ಹತನಾದನು. ಆ ಕೂಡಲೆ ಭೀಷ್ಮ ಸ್ವಯಂವರ" ವಿಚಿತ್ರವೀರ್ಯನಂ ಗಾಂಗೇಯಂ ಧರಾಭಾರ ಧುರಂಧರನಂ " ಮಾಡಿದನು. ಅಲ್ಲದೆ ಆ ಸಮಯಕ್ಕೆ ಕಾಶೀರಾಜನ ಮಕ್ಕಳ ಸ್ವಯಂವರವೇರ್ಪಡಲು ಭೀಷ್ಮ ಸ್ವಯಂವರ ಮಂಟಪಕ್ಕೆ ನುಗ್ಗಿ ಹೋಗಿ ಶಸ್ತ್ರಕೌಶಲವನ್ನು ಮೆರೆದು ಅಂಬೆ ಅಂಬಿಕೆ ಅಂಬಾಲಿಕೆಯರೆಂಬ ಮೂವರು ಕನ್ಯೆಯರನ್ನೂ ಹೊತ್ತು ತಂದು ವಿಚಿತ್ರವೀರ್ಯನಿಗೆ ಕೊಟ್ಟು ಮದುವೆ ಮಾಡಲು ಯತ್ನಿಸಿದಾಗ ಎಲ್ಲರಿಗಿಂತ ಹಿರಿಯಳಾದ ಅಂಬೆ ಆ ಮದುವೆಯನ್ನೊಲ್ಲದೆ ಹೋದಳು. ಅವಳು ಭೀಷ್ಮನನ್ನೇ ವರಿಸಬಯಸಿದಳು. ಆದರೆ ಅವನು ಒಪ್ಪದಿರಲು ಅಂಬೆ ' ತನಗೆ ಕಿಱುಯಂದುಗುರವಿಟ್ಟ ಸಾಲ್ವಲನೆಂಬಲ್ಲಿಗೆ ಪೋಗಿ ' ಅವನನ್ನು ಮದುವೆ ಯಾಗುವಂತೆ ಕೇಳಿಕೊಂಡಳೆಂದೂ ಅವನು ತಾನು ಭೀಷ್ಮನ ಸಂಗಡ ಕಾದಿ ಸೋತದ್ದ

ರಿಂದ ತಾನೂ ಒಬ್ಬ ಹೆಂಗಸೇ ಆದನೆಂದೂ ಆದ್ದರಿಂದ ಅವಳನ್ನು ಮದುವೆಯಾಗಲು ಶಕ್ಯವಿಲ್ಲವೆಂದೂ ಹೇಳಿ ಕಳುಹಿಸಿಬಿಡಲು ಅನಂತರ ಅವಳು ಪರಶುರಾಮನಲ್ಲಿಗೆ ಹೋದಳೆಂದು ಪಂಪ ಹೇಳಿದ್ದಾನೆ. ಅವಳಿಗಾಗಿ ಪರಶುರಾಮ ಹಸ್ತಿನಾಪುರಕ್ಕೆ ಬಂದು ಭೀಷ್ಮನೊಡನೆ 'ಕಾದಿ ಬಸವಟ್ಟುದುಸಿರಲಪ್ಪೊಡವನಾಅದೆ ಮೂರ್ಛೆ ಪೋಗಿರ್ದನಂ ಕಂಡು ಅಂಬೆಯೆಂಬ ಪಂಡುರುಂಬೆ ನಿನಗೆ ವಧಾರ್ಥಮಾಗಿ ಪುಟ್ಟುವೆನಕ್ಕೆ' ಎಂದು ಹೇಳಿ ಅಗ್ನಿಪ್ರವೇಶ ಮಾಡಿದಳೆಂದು ಪಂಪನ ಬಣ್ಣನೆ. ಆದರೆ ಮೂಲದ ಈ ಸಂದರ್ಭದಲ್ಲಿ ಭೀಷ್ಮ ಪರಶುರಾಮರ ಕಾಳಗದ ಕಥೆಯಿಲ್ಲ. ನನ್ನಯಭಟ್ಟನೂ ಈ ಘಟ್ಟದಲ್ಲಿ ಪರಶುರಾಮನ ಸುದ್ದಿ ತಂದಿಲ್ಲ.

ಭೀಷ್ಮ ಕಾಶಿರಾಜನು ಏರ್ಪಡಿಸಿದ್ದ ಸ್ವಯಂವರದಿಂದ ಹಿಂತಿರುಗಿ ಬರುವಾಗಲೇ ಸಾಳ್ವನೊಡನೆ ಯುದ್ಧ ಮಾಡಿದನೆಂದೂ ಅದರಲ್ಲಿ ಸಾಳ್ವ ಸಂಪೂರ್ಣವಾಗಿ ಸೋತು ವಿಫಲಮನೋರಥನಾಗಿ ಪಟ್ಟಣಕ್ಕೆ ಹಿಂದಿರುಗಿದನೆಂದೂ ನನ್ನಯ ಹೇಳಿದ್ದಾನೆ. ಅಂಬೆ ಭೀಷ್ಮನನ್ನು ಕೋರಲಿಲ್ಲ. ಅವಳು ತಾನು ಸಾಳ್ವಪತಿಯನ್ನು ಒಲಿದವಳೆಂದೂ ತನ್ನ ತಂದೆ ಅವಳನ್ನು ಸಾಳ್ವನಿಗೆ ಕೊಟ್ಟನೆಂದೂ ಹೇಳಿಕೊಂಡಿದ್ದಾಳೆ.

ಪರಗ ನನ್ನು ಸಾಲ್ವಪತಿ ವರಿಯಿಂಚಿನ
ದಂಡ್ರಿ ಚೇತ ಬೂರ್ವದತ್ತನ್ನೈತಿ
ನಮ್ಮಹೀಶುನಕು ನಯಂಬುಗನನೆಯ್ಯದಿ
ಧರ್ಮಮೆಱಿಗಿ ದಾನಿ ದಲಪುಮಿಪ್ಪುಡು (ಆದಿ IV 213)

[ನನ್ನನ್ನು ಸಾಳ್ವಪತಿ ವರಿಸಲು ನನ್ನ ತಂದೆ ನನ್ನನ್ನು ಅವನಿಗೆ ಕೊಡುವುದಾಗಿ ವಾಗ್ದಾನ ಮಾಡಿದ್ದಾನೆ. ನೀನು ಧರ್ಮಜ್ಞ. ಆದ್ದರಿಂದ ಈಗ ಹೇಗೆ ನ್ಯಾಯವೋ ಹಾಗೆ ನಡೆದುಕೋ]. ಅಂಬೆಯ ಈ ಮಾತು ಕೇಳಿ ಭೀಷ್ಮನು ಧರ್ಮವಿದರಾದ ಬ್ರಾಹ್ಮಣರ ಅನುಮತವಂತೆ ಅವಳನ್ನು ಸಾಳ್ವರಾಜನಲ್ಲಿಗೆ ಸಗೌರವವಾಗಿ ಕಳುಹಿಸಿಕೊಟ್ಟು ಉಳಿದ ಇಬ್ಬರು ಕುಮಾರಿಯರನ್ನೂ ವಿಚಿತ್ರವೀರ್ಯನಿಗೆ ಮದುವೆ ಮಾಡಿಸಿದನು. ಆಮೇಲೆ ನನ್ನಯ ಅಂಬೆಯ ಸುದ್ದಿಯನ್ನೇ ನೆನೆಸಿಕೊಂಡಿಲ್ಲ. ಆದರೆ ಉದ್ಯೋಗಪರ್ವದ ಅಂಬೋಪಾಖ್ಯಾನವನ್ನು ಆಧಾರವಾಗಿಟ್ಟುಕೊಂಡು ಪಂಪ ಅಂಬೆಯ ಕಥೆಯನ್ನು ಇಲ್ಲಿ ಹೇಳಿರಬೇಕೆಂದು ತೋರುತ್ತದೆ.

ವಿಚಿತ್ರವೀರ್ಯನು 'ಕೆಲವು ಕಾಲಂ ರಾಜ್ಯಲಕ್ಷ್ಮಿಯಂ ತಾಳ್ದಿ ರಾಜ್ಯಲಕ್ಷ್ಮೀತಪ್ತ ಶರೀರನ್ ವಿಗತಜೀವಿಯಾಗಿ ಪರಲೋಕ ಪ್ರಾಪ್ತನಾದ'ನೆಂದು ಪಂಪನ ಹೇಳಿಕೆ. ಮೂಲಭಾರತದಲ್ಲಿ 'ವಿಚಿತ್ರವೀರ್ಯಸ್ತರುಣೋ ಯಕ್ಷ್ಮಣಾಸಮುಗೃಹ್ಯತ' ಎಂದಿದೆ. ಬಹುಶಃ ರಾಜಯಕ್ಷ್ಮತಪ್ತನಾಗಿ ಯುವರಾಜನು ಮಡಿದನೆಂದು ಪಂಪನ ಅಭಿಪ್ರಾಯವಿರಬಹುದು. ನನ್ನಯಭಟ್ಟ ವಿಚಿತ್ರವೀರ್ಯ 'ರಾಜ್ಯಲಕ್ಷ್ಮೀತಪ್ತಶರೀರ'ನೆಂದೂ ಹೇಳಲಿಲ್ಲ. ಅವನು ರಾಜಯಕ್ಷ್ಮವೆಂಬ ಮಾತನ್ನೂ ಹೇಳಿಲ್ಲ. ಅವನು

‘ ಕಾಮರಾಗಾಧಿಕಾಸಕ್ತಿ ಜೇಸಿ ಶೋಷಿಂಚಿ ವಿಚಿತ್ರವೀರ್ಯುಡಮರಪುರಿಕಿ ಜನಿನ ’ ಎಂದು ನುಡಿದು ವಿಶೇಷವಾದ ಕಾಮಾಸಕ್ತಿಯಿಂದ ಅವನು ಶೋಷಿಸಿ ಸತ್ತುಹೋದ ನೆಂದು ಹೇಳಿದ್ದಾನೆ.

## ಧೃತರಾಷ್ಟ್ರ ಪಾಂಡು ವಿದುರರ ಜನನ ಕಥೆ

ಸತ್ಯವತಿಯ ಮಕ್ಕಳಿಬ್ಬರೂ ಸತ್ತುಹೋದುದರಿಂದ ರಾಜ್ಯಕ್ಕೆ ಅಧಿಕಾರಿಗಳಾರೂ ಇಲ್ಲದಂತಾಯಿತು. ಭೀಷ್ಮನೇ ವಿಚಿತ್ರವೀರ್ಯನಿಗೆ ಉತ್ತರಕ್ರಿಯೆಗಳನ್ನೆಲ್ಲ ಮಾಡಿ ದೇಶ ಅರಾಜಕನಾಗದಂತೆ ದಕ್ಷತೆಯಿಂದ ಆಳ್ವಿಕೆ ನಡೆಸುತ್ತಿದ್ದನು. ಸತ್ಯವತಿ ವಿಶೇಷವಾಗಿ ಮರುಗಿ ಭೀಷ್ಮನನ್ನು ಕರೆದು ರಾಜ್ಯವನ್ನು ವಹಿಸಿಕೊಳ್ಳಬೇಕೆಂದು ಕೇಳಿಕೊಂಡಳು. ಆದರೆ ಅವಳ ಬೇಡಿಕೆ ಫಲಿಸಲಿಲ್ಲ. ಕಡೆಗೆ ಆಕೆ ಭೀಷ್ಮನೊಡನೆ ಆಲೋಚಿಸಿ ವ್ಯಾಸನನ್ನು ಆಮಂತ್ರಿಸಿ ಅವನಿಂದ ಅಂಬಿಕೆ ಅಂಬಾಲಿಕೆಯರಲ್ಲಿ ಸಂತಾನ ಪಡೆಯಬೇಕೆಂದು ನಿರ್ಣಯಿಸಿದಳು. ವ್ಯಾಸ ಪ್ರತ್ಯಕ್ಷನಾಗಲು ಸತ್ಯವತಿ ‘ ಹಿರಣ್ಯಗರ್ಭ ಬ್ರಹ್ಮರಿಂ ತಗುಳ್ದವ್ಯವಚ್ಛಿನ್ನಮಾಗಿ ಬಂದ ಸೋಮವಂಶ ಮಾಗಳೆಮ್ಮ ಕುಲಸಂತತಿಗಾರುಮಿಲ್ಲದೆ ಎಡೆವರಿದು ಕಿಡುವಂತಾಗಿರ್ದುದು ಅದು ಕಾರಣದಿಂ ನಿಮ್ಮ ತಮ್ಮಂ ವಿಚಿತ್ರವೀರ್ಯನ ಕ್ಷೇತ್ರದೊಳಂಬಿಕೆಗಮಂಬಾಲೆಗಂ ಪುತ್ರರಪ್ಪಂತು ವರಪ್ರಸಾದಮಂ ದಯೆಗೆಯ್ವುದು ’ ಎಂದು ಬೇಡಿಕೊಂಡಳು. ವ್ಯಾಸ ಹಾಗೆಯೇ ಆಗಲೆಂದು ತನ್ನಿದಿರಲ್ಲಿ ನಿಂತಿದ್ದ ಆ ಸ್ತ್ರೀಯರನ್ನು ‘ ನಯನದೆ ನೋಡೆ ಮುನೀಂದ್ರನ ದಿವ್ಯದೃಷ್ಟಿಮಂತ್ರದೊಳೆ ಪೊದಟ್ದುದಾ ಸತಿಯರಿರ್ವರೊಳಂ ನವ ಗರ್ಭವಿಭ್ರಮಂ ಅಂತು ದಿವ್ಯಸಂಯೋಗದೊಳಿರ್ವರುಂ ಗರ್ಭಮಂ ತಾಳ್ದರ್. ’ ಆದರೆ ಸತ್ಯವತಿಗೆ ತೃಪ್ತಿಯಾಗಲಿಲ್ಲ. ಅವಳು ಮತ್ತೊಬ್ಬ ಮಗನನ್ನು ಬೇಡಬೇಕೆಂದು ಅಂಬಿಕೆಗೆ ಹೇಳಿದಳು. ಆ ಸೊಸೆ ‘ ವ್ಯಾಸಭಟ್ಟಾರಕನಲ್ಲಿಗೆ ಪೋಗಲಲಸಿ ’ ತನ್ನ ದಾಸಿಗೆ ತನ್ನ ಹಾಗೆಯೇ ಅಲಂಕಾರ ಮಾಡಿ ಕಳುಹಿಸಿದಳು. ವ್ಯಾಸ ಅವಳಿಗೇ ‘ ವರದ ’ನಾದನು !

ಅಂಬಿಕೆಯ ಮಗನೇ ಧೃತರಾಷ್ಟ್ರ, ಅಂಬಾಲಿಕೆಯ ಮಗನೇ ಪಾಂಡು. ದಾಸಿಯ ಮಗನೇ ವಿದುರ. ಧೃತರಾಷ್ಟ್ರ ಕುರುಡನಾದ. ಪಾಂಡು ಪಾಂಡುರೋಗ ಗ್ರಸ್ತನಾದ. ವಿದುರ ಮಾತ್ರ ‘ ಅನಂಗಾಕಾರನುಮಾಚಾರವಂತನುಂ ಬುದ್ಧಿವಂತನುಮಕ್ಕುಂ ’ ಎಂದು ವ್ಯಾಸರೇ ಹೇಳಿದಂತೆ ಮಹಾ ಧರ್ಮಜ್ಞನಾದನು.

> ಆ ವಿವಿಧ ಲಕ್ಷಣಂಗಳೊ
> ಳಾವರಿಸಿದ ಕುಲದ ಬಲದ ಚಲದಳವಿಗಳೊಳ್
> ಮೂವರು ಮನಾದಿಪುರುಷರ್
> ಮೂವರು ಮನಲ್ಲದತ್ತ ಮತ್ತೇನೆಂಬರ್

ಎಂದು ನುಡಿದು ವಿಚಿತ್ರವೀರ್ಯನ ಕ್ಷೇತ್ರದಲ್ಲಿ ವ್ಯಾಸರ ವರಪ್ರಸಾದದಿಂದ ಉದ್ಭವಿಸಿದ

ಈ ಮೂವರು ಮಕ್ಕಳು ಕೌರವ ಪಾಂಡವ ವಂಶದ ಆದಿಪುರುಷರೆನಿಸಿದರೆಂದು ಹೇಳಿ ಈ ಕಥೆಯನ್ನು ಪಂಪ ಮುಗಿಸಿದ್ದಾನೆ.

ಆದರೆ ನನ್ನಯಭಟ್ಟ ಮೂಲಕೃತಿಯನ್ನೇ ಬಹಳ ಮಟ್ಟಿಗೆ ಅನುಸರಿಸಿ ಸತ್ಯವತೀ ಭೀಷ್ಮರ ಸಂವಾದವನ್ನು ದೀರ್ಘವಾಗಿ ಬೆಳೆಸಿ ಅದರಲ್ಲಿ ದೀರ್ಘತಮನ ಉಪಾಖ್ಯಾನವನ್ನೂ ನಿದುರ ಯಮುನ ಅವತಾರವೆಂಬುದನ್ನೂ ಹೇಳಿ ಮಾಂಡವ್ಯ ಮುನಿಯಿಂದ ಯಮನಿಗೆ ಶಾಪ ಬಂದ ಕಥೆಯನ್ನೂ ಹೇಳಿದ್ದಾನೆ. ವ್ಯಾಸರ ಆಗಮನ, ಅವರನ್ನು ನಿಯೋಗಕ್ಕೆ ಒಪ್ಪಿಸಿದ್ದು, ಅವರು ಅಂಬಿಕೆ ಅಂಬಾಲಿಕೆ ದಾಸಿಯರಲ್ಲಿ ಕೂಡಿ ಅವರಲ್ಲಿ ಸಂತಾನೋತ್ಪಾದನೆ ಮಾಡಿದ್ದು, ಮುಂತಾದುವನ್ನೆಲ್ಲ ಸಾಕಷ್ಟು ದೀರ್ಘವಾಗಿ ಹೇಳಿದ್ದಾನೆ. ಪಂಪನಿಗೆ ಈ ವಿವರಗಳಿಗೆಲ್ಲ ವಿರಾಮವಿಲ್ಲ. ಅವನ ಗಮನವೆಲ್ಲ ಮುಂದೆ ಹೇಳಬೇಕಾದ ವಿಕ್ರಮಾರ್ಜುನನ ಕಥೆಯ ಮೇಲಿತ್ತು. ಅದಕ್ಕೆ ಪೀಠಿಕೆಯಾಗಿ ಎಷ್ಟು ಹೇಳಬೇಕೋ, ಎಷ್ಟು ಅನಿವಾರ್ಯವೋ ಅಷ್ಟನ್ನು ಮಾತ್ರ ಹೇಳಿ ಪಂಪ ಬೇಗ ಬೇಗ ಮುಂದುವರಿಸಿದ್ದಾನೆ.

ನನ್ನಯಭಟ್ಟ ಧೃತರಾಷ್ಟ್ರ ಪಾಂಡು ಕುಮಾರರ ಉಪನಯನ ವೃತ್ತಾಂತ, ತದನಂತರ ಅವರು ನಡೆಸಿದ ಅಧ್ಯಯನ ಕಥೆ ಇವನ್ನು ಹೇಳಲು ಮರೆತಿಲ್ಲ. ಆ ಇಬ್ಬರು ರಾಜಕುಮಾರರೂ ರಾಜವಿದ್ಯೆಗಳಲ್ಲಿಯೂ ಪರಿಶ್ರಮವುಳ್ಳವರಾದರಂತೆ. ಈ ಮಧ್ಯಕಾಲದಲ್ಲಿ ಕುರುರಾಜ್ಯದ ಆಡಳಿತದ ಹೊಣೆ ಅನಿವಾರ್ಯವಾಗಿ ಭೀಷ್ಮನ ಮೇಲೆಯೇ ಬಿತ್ತು. ಅವನು ಅದನ್ನು ತಪ್ಪಿಸಿಕೊಳ್ಳುವಂತಿರಲಿಲ್ಲ. ಅವನ ಅನುಶಾಸನದಲ್ಲಿ ಕೌರವ ರಾಜ್ಯವು ವಿಶೇಷವಾದ ವೈಭವವನ್ನು ಹೊಂದಿತು. ಭೂಮಿ ಸಸ್ಯಸಮೃದ್ಧಿಯಿಂದ ಪ್ರಶಸ್ತವೆನಿಸಿತು. ಜನರು ಧರ್ಮನಿರತರಾಗಿ ಅನ್ಯೋನ್ಯ ಹಿತಾಚರಣೆಯಲ್ಲಿ ತೊಡಗಿ ಸುಖವಾಗಿದ್ದರು. ಭೀಷ್ಮನ ಆಡಳಿತ ವಿಚಕ್ಷಣೆಯನ್ನು ಪ್ರಶಂಸೆ ಮಾಡತೊಡಗಿ ಅವನ ಕಾಲದಲ್ಲಿ ವೇದಾಧ್ಯಯನವೂ ಯಜ್ಞಯಾಗಾದಿ ಕರ್ಮಗಳೂ ನಿರ್ವಿಘ್ನವಾಗಿ ನಡೆಯುತ್ತಿದ್ದುವೆಂದೂ ವರ್ಣಿಸುವುದನ್ನು ಅವಿರಳ ಜಪ ಹೋಮತತ್ಪರನಾದ ನನ್ನಯ ಮರೆತಿಲ್ಲ. ಅದು ಅವನಿಗೆ ಪ್ರಧಾನವಾದ ವಿಷಯ.

ಧೃತರಾಷ್ಟ್ರನು ವಯಸ್ಕನಾಗುವ ತನಕ ಭೀಷ್ಮನು ರಾಜ್ಯಾಡಳಿತ ನಡೆಸುತ್ತಿದ್ದು ಆ ತರುವಾಯ ಅವನಿಗೆ ಪಟ್ಟಾಭಿಷೇಕ ಮಾಡಿ ಸಿಂಹಾಸನದ ಮೇಲೆ ಕೂಡಿಸಿದನು.[1] ಧೃತರಾಷ್ಟ್ರ ಆಯುತ ಶಕ್ತಿಶಾಲಿಯಾಗಿದ್ದರೂ ಹುಟ್ಟು ಕುರುಡ! ಅವನ ರಾಜತ್ವವು ನಿರ್ವಿಘ್ನವಾಗಿ ನಡೆಯಲು ಅನ್ಯರ ಸಹಾಯ ಅಗತ್ಯವಾಗಿತ್ತು. 'ಭೀಷ್ಮುಂಡು ದನಕು ವಿಲ್ಲುನು ವಿದುರುಂಡು ಬುದ್ಧಿಯುನು ಸಹಾಯಂಬುಲುಗಾ ರಾಜ್ಯಂಬು ರಕ್ಷಿಂಚುಚುನ್' ಎಂದು ನನ್ನಯ ಒಂದೇ ಮಾತಿನಲ್ಲಿ ಧೃತರಾಷ್ಟ್ರ ಪ್ರಭುತ್ವವನ್ನು ಚಿತ್ರಿಸಿದ್ದಾನೆ. 'ಭೀಷ್ಮನೇ ಅವನಿಗೆ ಬಿಲ್ಲು. ವಿದುರನೇ ಬುದ್ಧಿ. ಅವರಿಬ್ಬರೂ ಸಹಾಯಕರಾಗಿರಲು

[1] ಪಂಪ ಈ ಸಂಗತಿಯನ್ನು ಹೇಳಿಲ್ಲ.

ಅವನು ರಾಜ್ಯವನ್ನು ರಕ್ಷಿಸಿದನು ! ನನ್ನಯ ಧೃತರಾಷ್ಟ್ರನ ಆಡಳಿತ ವೈಭವವನ್ನು ಒಂದು ಪದ್ಯದಲ್ಲಿ ಹೊಗಳಿ ಆಮೇಲೆ ಅವನಿಗೆ ಭೀಷ್ಮ ಗಾಂಧಾರಿಯನ್ನು ತಂದು ಮದುವೆ ಮಾಡಿದ ವೃತ್ತಾಂತವನ್ನು ಚಿತ್ರಿಸಿದ್ದಾನೆ. ಗಾಂಧಾರಿಯ ಜತೆಯಲ್ಲಿ ಹುಟ್ಟಿದ ಹತ್ತು ಮಂದಿ ತಂಗಿಯರನ್ನೂ ಧೃತರಾಷ್ಟ್ರ ಸ್ವೀಕರಿಸಿದನು ! ಭೀಷ್ಮನು ಅಷ್ಟರಿಂದ ತೃಪ್ತನಾಗದೆ ಕುಲಶೀಲರೂಪಗಳುಳ್ಳ ಕನ್ಯೆಯರನ್ನು ತಂದುಕೊಡಲು ಕುಲತಿಲಕನಾದ ಧೃತರಾಷ್ಟ್ರನು ನೂರು ಮಂದಿ ದೇವಿಯರನ್ನು ಮದುವೆಯಾದನು.! ಧೃತರಾಷ್ಟ್ರನ ಈ ವಿವಾಹ ವೃತ್ತಾಂತವನ್ನು ನನ್ನಯ ಹತ್ತು ಪದ್ಯಗಳಲ್ಲಿ ಬೆಳೆಸಿದ್ದಾನೆ. ಪಂಪಕವಿಗೆ ಈ ವಿಷಯವನ್ನು ಅಷ್ಟು ವಿಸ್ತಾರವಾಗಿ ಹೇಳುವ ಅಗತ್ಯ ತೋರಲಿಲ್ಲ. ಅವನು ಧೃತರಾಷ್ಟ್ರ ಪಾಂಡುವಿದುರರ ಜನನ ವೃತ್ತಾಂತವನ್ನು ಹೇಳಿದ ಒಡನೆಯೇ ಪಂಪನು ' ಅಂತವರ್ಗೆ ಜಾತಕರ್ಮ ನಾಮಕರಣಾನ್ನಪ್ರಾಶನ ಚೌಲೋಪನಯನಾದಿ ಷೋಡಶ ಕ್ರಿಯೆಗಳಂ ಗಾಂಗೇಯಂ ತಾಂ ಮುಂತಿಟ್ಟು ಮಾಡಿ ಶಸ್ತ್ರ ಶಾಸ್ತ್ರಂಗಳೊಳತಿ ಪರಿಣತರಂ ಮಾಡಿ ಮದುವೆಯಂ ಮಾಡಲೆಂದು ಧೃತರಾಷ್ಟ್ರಂಗೆ ಗಾಂಧಾರರಾಜ ಸೌಬಲನ ಮಗಳಪ್ಪ ಗಾಂಧಾರಿಯಂ ಶಕುನಿಯೊಡವುಟ್ಟಿದಳಂ ತಂದು ಕೊಟ್ಟು ' ಎಂದು ಒಂದು ಸಣ್ಣ ವಚನದಲ್ಲಿ ಹೇಳಿ ' ಮುಗಿಸಿ 'ಬಿಟ್ಟಿದ್ದಾನೆ. ಈ ಘಟ್ಟದಲ್ಲಿ ಧೃತರಾಷ್ಟ್ರನ ಪಟ್ಟಾಭಿಷೇಕದ ಪ್ರಸ್ತಾಪವೂ ಇಲ್ಲ, ನೂರ್ವರು ಕನ್ಯೆಯರ ಪಾಣಿಗ್ರಹಣದ ಸುದ್ದಿಯೂ ಇಲ್ಲ !

## ಕರ್ಣ ವೃತ್ತಾಂತ

ಗಾಂಧಾರೀ ಧೃತರಾಷ್ಟ್ರರ ವಿವಾಹವೃತ್ತಾಂತವನ್ನು ಹೇಳಿಯಾದಮೇಲೆ ಪಂಪ ಪಾಂಡುವಿನ ವಿವಾಹ ಕಥೆ ಹೇಳಬಯಸಿದನಾದರೂ ಅದಕ್ಕೆ ಮೊದಲು ಕುಂತಿ ಪಡೆದ ಸೂರ್ಯಪುತ್ರನ ಜನ್ಮಕಥೆ ಹೇಳಬೇಕಾದುದು ಅಗತ್ಯವೆನಿಸಿ ಕುಂತಿಭೋಜನ ಮನೆಯಲ್ಲಿ ಪೃಥೆ ದುರ್ವಾಸಮಹಾಮುನಿಯ ಸೇವೆಮಾಡಿ ಆತನ ಪರಮಾನುಗ್ರಹಕ್ಕೆ ಪಾತ್ರಳಾಗಿ ಐದು ದಿವ್ಯಮಂತ್ರಗಳ ಉಪದೇಶ ಹೊಂದಿದ ವೃತ್ತಾಂತದಿಂದ ಆರಂಭಿಸಿದ್ದಾನೆ. ಆ ಮಂತ್ರಗಳ ಮಹಿಮೆಯನ್ನು ಪರೀಕ್ಷಿಸುವ ಚಾಪಲ್ಯ ಕನ್ಯೆಯಾದ ಕುಂತಿಗೆ. ದುರ್ವಾಸಮುನಿಯ ಮನೋಧರ್ಮವೇ ವಿಚಿತ್ರ. ಹೆಂಗಸರಿಗೆ ಮಂತ್ರೋಪದೇಶವೇ ಸಲ್ಲದೆಂದು ಎಲ್ಲರೂ ಹೇಳುತ್ತಿರಬೇಕಾದರೆ ಆ ದಿವ್ಯಜ್ಞಾನಿ ಆ ಚಿಕ್ಕ ಬಾಲಿಕೆಗೆ ಒಟ್ಟಿಗೆ ಐದು ಮಂತ್ರಗಳನ್ನು ಅದೇಕೆ ಉಪದೇಶಿಸಿದನೊ !

---

[1] ಕುಲಮುನು ರೂಪಮು ಶೀಲಮು
ಗಲ ಕನ್ಯಲು ಮೆಚ್ಚಿ ತೆಚ್ಚಿ ಗಾಂಗೇಯುಂಡೀ
ನಲಘುಡು ಧೃತರಾಷ್ಟ್ರುಡು ಕುಲ
ತಿಲಕುಡು ವಿವಾಹಮಯ್ಯೆ ದೇವೀಶತಮುನ್ 1–5–13

ಕುಂತಿ ಬಾಲ್ಯಸಹಜವಾದ ಚಾಪಲ್ಯದಿಂದ ಮೊದಲನೆಯದಾದ ಸೂರ್ಯ ಮಂತ್ರವನ್ನೇ ಪರೀಕ್ಷೆಗೆ ಗುರಿಮಾಡಿದಳು. ಆಕೆ ಸೂರ್ಯಧ್ಯಾನಮಾಡಿದೊಡನೆಯೆ ಆದಿತ್ಯ ಸನ್ನಿಹಿತನಾಗಿ ಕುಂತಿಗೆ ಪುತ್ರವರವನ್ನು ಕರುಣಿಸಿಯೇಬಿಟ್ಟನು! ಕುಂತಿಯ ಭಯ ಲಜ್ಜೆ ಸಂಕೋಚ ಯಾವುದನ್ನೂ ಆ ಲೋಕಸಾಕ್ಷಿಯು ಲೆಕ್ಕಿಸಲಿಲ್ಲ. 'ಸದ್ಯೋಗರ್ಭ'ವುಂಟಾಗಿ ಅವಳು ಮಹಾತೇಜೋವಂತನಾದ ದಿವ್ಯಶಿಶುವನ್ನೇ ಹೆತ್ತಳು. ಮಂತ್ರವನ್ನು ಪರೀಕ್ಷಿಸಲು ಹೋಗಿ ತಾನೇ ಕಡು ಕ್ರೂರವಾದ ಪರೀಕ್ಷೆಗೆ ಒಳಗಾದಳು. ಅನಪೇಕ್ಷಿತವಾದ ಆ ಶಿಶುವನ್ನು ಅವಳು ಮನೆಗೆ ತೆಗೆದುಕೊಂಡು ಹೋಗಲಾರಳು. ಪರಿತ್ಯಜಿಸುವುದಕ್ಕೂ ಮನಸ್ಸು ಒಪ್ಪದು. ಸಹಜಕವಚ ಕರ್ಣಕುಂಡಲಗಳಿಂದ ಕೂಡಿದ ಆ ದಿವ್ಯಶಿಶುವನ್ನು ನೋಡಿ ಅವಳಿಗೆ ಮೋಹವೇ ಉಂಟಾಯಿತು. ಆದರೆ ಅವಳು ಹಿರಿಯರ ಕೋಪಕ್ಕೆ ಅಂಜಿ ಆ ಮಗುವನ್ನು ಗಂಗಾತೀರದಲ್ಲಿಯೇ ಪರಿತ್ಯಜಿಸಲು ನಿರ್ಧರಿಸಿದಳು. ಮೂಲಭಾರತಕರ್ತ 'ಉತ್ಸಸರ್ಜ ಕುಮಾರಂ ತಂ ಜಲೇ ಕುಂತೀ ಮಹಾಬಲಂ' ಎಂದು ಬಹಳ ಸರಳವಾಗಿ ಹೇಳಿ ಈ ಘಟ್ಟಕ್ಕೆ ಮುಕ್ತಾಯ ಹಾಡಿದ್ದಾನೆ. ಪಂಪ ಕುಂತಿಯ ಮನೋವೇದನೆಯನ್ನು ಸೂಚ್ಯವಾಗಿ ಹೇಳಿ ಕಡೆಗೆ 'ನಡನಡ ನಡುಗಿ ಜಲದೇವತೆಗಳಪ್ಪೊಡಂ ಮನಂ ಗಾಣ್ಬರೆಂದು ನಿಧಾನಮ ನೀಡಾಡುವಂತೆ ಕೂಸಂ ಗಂಗೆಯೊಳೀಡಾಡಿ ಬಂದಳ್' ಎಂದಿದ್ದಾನೆ. ಅವಳ ಪಾಲಿಗೆ ಅದು ಕೈಗೆ ಸಿಕ್ಕಿದ ನಿಧಾನವನ್ನು ಈಡಾಡಿದಹಾಗೇ ಆಗಿತ್ತು. ಅವಳು ಎಸೆದುಬಿಟ್ಟ ನಿಧಾನ ಸೂತನ ಭಾಗ್ಯವಾಯಿತು. ಗಂಗೆಯಲ್ಲಿ ತೇಲಿಬರುತ್ತಿದ್ದ ಆ ದಿವ್ಯ ಸುಂದರ ಶಿಶುವನ್ನು ಕಂಡು ಸೂತನು 'ನಿಗ್ಗಂಡನಂತೆವೋಲ್' ಸಂತೋಷಪಟ್ಟು ಅವನ್ನು ಕೊಂಡೊಯ್ದು ತನ್ನ ಹೆಂಡತಿ ರಾಧೆಗೆ ಕೊಟ್ಟನು. ಕುಂತಿಯ ಹೊಟ್ಟೆಯಲ್ಲಿ ಹುಟ್ಟಿದರೂ ಅವನು ಕೌಂತೇಯನೆಂದೆನ್ನಿಸಿಕೊಳ್ಳದೆ ರಾಧೇಯನಾದನು; ಸೂರ್ಯ ಪುತ್ರನೇ ಆಗಿದ್ದರೂ ಲೋಕದ ದೃಷ್ಟಿಯಲ್ಲಿ ಸೂತಪುತ್ರನಾದನು! ಕುಂತಿ ತನಗೆ ಲಭಿಸಿದ ಆ ಸುಪುತ್ರನನ್ನು ಉಳಿಸಿಕೊಳ್ಳುವ ಭಾಗ್ಯ ಪಡೆದಿರಲಿಲ್ಲ. ಅವಳ ಮನಸ್ಸಿನ ದುಃಖವನ್ನು ಗಂಗೆ ಮನಗಂಡಳೆಂದೀತು. ಆದ್ದರಿಂದಲೇ ಗಂಗಾದೇವಿಯು 'ಆ ಕೂಸಂ ಮುಳುಗಲೀಯದೆ ತನ್ನ ತೆರೆಗಳೆಂಬ ನಳಿತೋಳ್ಗಳಿನೊಯ್ಯನೊಯ್ಯನೆ ತಳಿಕ್ಕೈಸಿತಂದಳ್' ನನ್ನಯಭಟ್ಟ ಆ ಕೂಸಿಗಾಗಿ ಒಂದು ರತ್ನಮಂಜೂಷವನ್ನು ಕಲ್ಪಿಸಿದ್ದಾನೆ. 'ಆದಿತ್ಯಪ್ರೇರಿತವಾಗಿ ಅನರ್ಘರತ್ನವಸುಭರಿತವಾದ ಒಂದು ಮಂಜೂಷವು ನದೀಪ್ರವಾಹ ವೇಗದಲ್ಲಿ ತನ್ನೆಡೆಗೆ ತೇಲಿಬರಲು ಕುಂತಿ ಚಚ್ಚರದಿಂದ ತನ್ನ ಆ ಮಗುವನ್ನು ಅದರಲ್ಲಿ ಇಟ್ಟು ನಿಜಗೃಹಕ್ಕೆ ಹೋದಳು;' ಎಂಬುದು ನನ್ನಯನ ಹೇಳಿಕೆ. ಪಂಪನಿಗೆ ಯಾವ ಮಂಜೂಷವೂ ಬೇಕಾಗಲಿಲ್ಲ. ಗಂಗಾದೇವಿಯ ನಳಿತೋಳುಗಳರಕ್ಷೆ ಸಾಕಾಯಿತು ಪಂಪನ ಕರ್ಣನಿಗೆ.

ತನಗೆ ಲಭಿಸಿದ ಶಿಶುವಿನೊಡನೆ ವಿಶೇಷವಾದ ವಸು ದೊರೆತುದರಿಂದ ಆ ಮಗುವಿನ ಮೈಮೇಲೆಯೇ ಅನರ್ಘ್ಯನಾದ ಆಭರಣಗಳಿಂದ್ದುದರಿಂದ ಆ ಸೂತನು

ಅವನಿಗೆ ವಸುಷೇಣನೆಂದೇ ಹೆಸರಿಟ್ಟನಂತೆ, ಆ ವಸುಷೇಣ ಮಹಾಪರಾಕ್ರಮಿಯಾಗಿ ಬೆಳೆದು ಅವನ ಕೀರ್ತಿ 'ಜನಗಳ ಕರ್ಣೋಪಾಂತದೊಳೆಸೆಯೆ ಕರ್ಣನೆಂಬನುಮಾದಂ' ಎಂದು ಪಂಪ ಅವನಿಗೆ ಬಂದ ಈ ಅಡ್ಡಹೆಸರಿನ ಮೂಲವನ್ನು ಸ್ವಾರಸ್ಯವಾಗಿ ವಿವರಿಸಿದ್ದಾನೆ.

ಕರ್ಣನ ಜನನ ವೃತ್ತಾಂತ ಪಂಪ ನನ್ನಯರಿಬ್ಬರಲ್ಲೂ ಏಕರೀತಿಯಾಗಿಯೇ ಇದೆ. ದುರ್ವಾಸಮುನಿ ಉಪದೇಶಮಾಡಿದ ದಿವ್ಯಮಂತ್ರಗಳ ಮಹತ್ವವನ್ನು ಪರೀಕ್ಷಿಸುವ ಕುಂತಿಯ ಚಪಲತೆಯ ದೆಸೆಯಿಂದ ಹುಟ್ಟಿದ ಸೂರ್ಯಪುತ್ರ 'ಕಾನೀನ' ನೆನಿಸಿಕೊಂಡು ತಾಯಿಯಿಂದ ಪರಿತ್ಯಕ್ತನಾಗಿ ಗಂಗೆಯಲ್ಲಿ ತೇಲಿ ಸೂತನೊಬ್ಬನ ಕೈಗೆ ಸಿಕ್ಕಿ ಅವನ ಹೆಂಡತಿ ರಾಧೆಯ ಪೋಷಣೆಯಲ್ಲಿ ಬೆಳೆದು ಕಾನೀನ, ಸೂತಪುತ್ರ, ವಸುಷೇಣ ರಾಧೇಯ ಎಂಬ ಹಲವು ಹೆಸರುಗಳಿಗೆ ಪಾತ್ರನಾದನು. ನನ್ನಯಭಟ್ಟ ಈ ವೃತ್ತಾಂತವನ್ನಿಷ್ಟು ಹೇಳಿ ಕರ್ಣನು ಸೂತಗೃಹದಲ್ಲಿ ಬೆಳೆಯುತ್ತಿದ್ದನೆಂದು ಸುಡಿದು ಮುಕ್ತಾಯಹಾಡಿ ಪಾಂಡುವಿಗೂ ಕುಂತಿಗೂ ಮದುವೆಯಾದ ಕಥೆಗೆ ತೊಡಗಿದ್ದಾನೆ. ಅಲ್ಲಿ ಇಂದ್ರ ಬಂದು ಕರ್ಣನ ಸಹಜ ಕವಚ ಕರ್ಣಕುಂಡಲಗಳನ್ನು ಬೇಡಿ ಪಡೆದ ವೃತ್ತಾಂತವಾಗಲಿ ಕರ್ಣನು ಶಸ್ತ್ರವಿದ್ಯಾಭ್ಯಾಸಕ್ಕೋಸ್ಕರ ಪರಶುರಾಮನಲ್ಲಿಗೆ ಹೋಗಿ ತಾನು ಒಬ್ಬ ಬ್ರಾಹ್ಮಣನೆಂದು ಹೇಳಿಕೊಂಡು ಶಿಷ್ಯನಾಗಿ ನಿಂತು ಅವನ ಕೃಪೆಯಿಂದ ಧನುರ್ವಿದ್ಯೆಯನ್ನು ಗಳಿಸಿ ಕಡೆಯಲ್ಲಿ ಇಂದ್ರನ ಕುತಂತ್ರದಿಂದ ಗುಟ್ಟುರಟ್ಟಾಗಿ ಆ ರೇಣುಕಾನಂದನನ ಶಾಪಕ್ಕೆ ಗುರಿಯಾದ ಸುದ್ದಿಯಾಗಲಿ ಇಲ್ಲ.

ಪಂಪನು ಮಾತ್ರ ಈ ಎರಡು ವೃತ್ತಾಂತಗಳನ್ನೂ ಈಗಲೇ ಹೇಳಿ ಮುಗಿಸಿದ್ದಾನೆ. ವ್ಯಾಸರ ಭಾರತದಲ್ಲಿಯೂ ಈ ಸಂದರ್ಭದಲ್ಲಿ ಪರಶುರಾಮ ಪ್ರಸ್ತಾಪವಿಲ್ಲ. ಆದರೆ ಇಂದ್ರ ಬ್ರಾಹ್ಮಣವೇಷದಲ್ಲಿ ಬಂದು ಕರ್ಣನ ಸಹಜ ಕವಚವನ್ನೂ ಕರ್ಣಕುಂಡಲಗಳನ್ನೂ ಬೇಡಿ ಪಡೆದು ಅವಕ್ಕೆ ಪ್ರತಿಯಾಗಿ ಒಂದು ಶಕ್ತ್ಯಾಯುಧವನ್ನು ಅನುಗ್ರಹಿಸಿದ ಕಥೆ ಮಾತ್ರ ವಿಸ್ತಾರವಾಗಿ ಬಂದಿದೆ.[1] ಸೂರ್ಯ ಇಂದ್ರನ ದುರುದ್ದೇಶವನ್ನು ಊಹಿಸಿ ಕರ್ಣನಿಗೆ ಮುನ್ನೆಚ್ಚರಿಕೆ ಕೊಡುವ ಸಲುವಾಗಿ ಬ್ರಾಹ್ಮಣನ ರೂಪದಲ್ಲಿ ಬಂದು ಕರ್ಣನಿಗೆ ಕನಸಿನಲ್ಲಿ ಕಾಣಿಸಿಕೊಂಡು ಮರುದಿನ ಬ್ರಾಹ್ಮಣವೇಷದಲ್ಲಿ ಇಂದ್ರನೇ ಬಂದು ಕವಚವನ್ನು ಬೇಡುವನೆಂದೂ ಅವನಿಗೆ ಅದನ್ನು ಕೊಡದೆ ನಿರಾಕರಿಸಬೇಕೆಂದೂ ಬುದ್ಧಿಹೇಳಿದನು. ಆದರೆ ತ್ಯಾಗಜೀವಿಯಾದ ಕರ್ಣ ಅದಕ್ಕೆ ಒಪ್ಪದೆ 'ಬ್ರಾಹ್ಮಣ ಬಂದು ಬೇಡಿದರೆ ಇಲ್ಲವೆಂದು ಹೇಗೆ ಹೇಳಲಿ ?' ಎಂದು ಮರುಪ್ರಶ್ನೆಹಾಕಿ ಸೂರ್ಯನ ಸಲಹೆಯನ್ನು ತಿರಸ್ಕರಿಸಿದನು. ಆಗ ಆ ಬ್ರಾಹ್ಮಣವೇಷದ

---

[1] ಆದರೆ ಮತ್ತೆ ದ್ರೋಣರು ಏರ್ಪಡಿಸಿದ ಶಸ್ತ್ರಪ್ರದರ್ಶನಕ್ಕೆ ಬಂದಾಗ ಕರ್ಣ ಸಹಜ ಕವಚ ಮತ್ತು ಕುಂಡಲಗಳನ್ನು ಧರಿಸಿದನೆಂದು ಹೇಳಿದೆ : ಸಹಜಂ ಕವಚಂ ಬಿಭ್ರತ್ ಕುಂಡಲೋದ್ಯೋತಿತಾನನಃ ' I, 135, 2

ಸೂರ್ಯನು ಇಂದ್ರನಿಂದ ' ಸರ್ವಶಸ್ತ್ರನಿಬಾಧಿನಿಯಾದ ' ಒಂದು ಶಕ್ತಿಯನ್ನು ಬೇಡಿ ಪಡೆದುಕೊಳ್ಳಬೇಕೆಂದು ಹೇಳಿ ಅಂತರ್ಧಾನನಾದನು. ಅದರಂತೆ ಮರುದಿನ ಪ್ರಾತಃಕಾಲ ಬ್ರಾಹ್ಮಣನೊಬ್ಬನು ಬಂದು ಅವನ ಕವಚವನ್ನೂ ಕುಂಡಲಗಳನ್ನೂ ಕೇಳಲು ಸ್ವಲ್ಪವೂ ತಡಮಾಡದೆ ತಟ್ಟನೆ ಕೊಯ್ದುಕೊಟ್ಟು ಅನ್ಯಾದೃಶವಾದ ತ್ಯಾಗ ಬುದ್ಧಿಯನ್ನು ಮೆರೆದನು. ಇಂದ್ರನಿಗೂ ಇದನ್ನು ಕಂಡು ಮನಸ್ಸು ಕರಗಿ ' ಬೇಕಾದ ವರ ಬೇಡು ' ಎನ್ನಲು ಕರ್ಣನು ' ಇಚ್ಛಾಮಿ ಭಗವದ್ದತ್ತಾಂ ಶಕ್ತಿಂ ಶತ್ರು ನಿಬರ್ಹಿಣೀಮ್ ' ಎಂದು ಕೇಳಿ ಪಡೆದನೆಂದು ವ್ಯಾಸರ ಭಾರತ ಹೇಳುತ್ತಿದೆ.

ಪಂಪನ ಕರ್ಣ ತಾನು ಕೊಟ್ಟುದಕ್ಕೆ ಪ್ರತಿಯಾಗಿ ಏನೂ ಬೇಡುವವನಲ್ಲ. ಅವನದು ಫಲಾಪೇಕ್ಷೆಯಿಲ್ಲದ ತ್ಯಾಗ. ಇಂದ್ರನೇ ತಾನಾಗಿ ಅವನಿಗೆ ಬಂದು ಶಕ್ತ್ಯಾಯುಧವನ್ನು ಕೊಟ್ಟನು. ಸೂರ್ಯ ಕಾಣಿಸಿಕೊಂಡು ಕರ್ಣನಿಗೆ ಉಪದೇಶ ಮಾಡಿದ ಸುದ್ದಿಯನ್ನು ಪಂಪ ಕೈ ಬಿಟ್ಟಿದ್ದಾನೆ. ಅದು ಅವನಿಗೆ ಅವಶ್ಯವೆಂದೆನಿಸಲಿಲ್ಲ. ಮಹಾಭಾರತದಲ್ಲಿ ವನಪರ್ವದಲ್ಲಿಯೂ ಕರ್ಣಪರ್ವದಲ್ಲಿಯೂ ಹೇಳಿರುವ ಕೆಲವು ಅಂಶಗಳನ್ನು ಪಂಪ ಇಲ್ಲಿಯೇ ಸಂಗ್ರಹಿಸಿ ಹೇಳಿ ಮುಗಿಸಿದ್ದಾನೆ. ಕರ್ಣಚರಿತ್ರೆಯಲ್ಲಿ ಪ್ರಧಾನನಾದ ಈ ಘಟನೆಗಳನ್ನು ಆರಂಭದಲ್ಲಿಯೇ ವರ್ಣಿಸಿ ಅವನಿಗೆ ತಾಯಿ, ಗುರು, ಇಂದ್ರ ಮೂವರಿಂದಲೂ ಆದ ಅನ್ಯಾಯ ಪರಂಪರೆಯನ್ನು ಒಟ್ಟಿಗೆ ನಿರೂಪಿಸಿ ಅವನು ದೈವಬಲವಂಚಿತನಾದನೆಂಬುದನ್ನು ಸ್ಪಷ್ಟಪಡಿಸಿದ್ದಾನೆ. ' ಉಗ್ರಪರಶುಪಾಟಿತ ರಿಪುವಂಶರಾಮ 'ನಾದ ಪರಶುರಾಮನಿಂದ ಬಾಣವಿದ್ಯೆಯನ್ನು ಕಲಿತು, 'ಇಷುವಿದ್ಯಾ ಪಾರಗ 'ನೆನಿಸಿಕೊಂಡರೂ ಪ್ರಯೋಜನವಿಲ್ಲದಂತಾಯಿತು. ಪರಶುರಾಮನ ಶಾಪಕ್ಕೆ ಸಿಕ್ಕಿ ನೊಂದು ಹಿಂತಿರುಗಿ ಬಂದು ಮೊದಲಿನಂತೆ ಸೂತನ ಮನೆಯಲ್ಲಿ ನೆಲಸಿದ್ದಾಗ ಕರ್ಣನಿಗೆ ದ್ರೋಣಾಚಾರ್ಯನ ಶಿಷ್ಯನಾಗುವ ಅವಕಾಶ ಲಭಿಸಿತೆಂದು ಪಂಪ ಹೇಳಿದ್ದಾನೆ.

ನನ್ನಯಭಟ್ಟನು ವ್ಯಾಸಪ್ರಣೀತವಾದ ಮಹಾಭಾರತ ಕಥೆಯನ್ನು ಆದ ಮಟ್ಟಿಗೂ ಯಥಾತಥವಾಗಿ ತೆಲುಗಿಸಲು ಪ್ರಯತ್ನಿಸಿದವನು. ಆದರೂ ಅವನು ಮೂಲದಲ್ಲಿರುವ ಇಂದ್ರವೃತ್ತಾಂತವನ್ನು ಈ ಸಂದರ್ಭದಲ್ಲಿ ಅದೇಕೋ ಕೈಬಿಟ್ಟಿದ್ದಾನೆ. ಪರುಶುರಾಮನ ಸುದ್ದಿ ಮೂಲಭಾರತದಲ್ಲಿಯೂ ಬಂದಿಲ್ಲವಾದ್ದರಿಂದ ನನ್ನಯನು ಅದನ್ನು ಪ್ರಸ್ತಾಪಿಸದಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಇಂದ್ರ ಬಂದು ಕರ್ಣನಲ್ಲಿ ಕವಚ ಕುಂಡಲಗಳನ್ನು ಬೇಡಿ ಪಡೆದು ಅದಕ್ಕೆ ಪ್ರತಿಯಾಗಿ ಒಂದು ಶಕ್ತ್ಯಾಯುಧವನ್ನು ನೀಡಿದ ವೃತ್ತಾಂತವನ್ನು ಪಂಪ ವರ್ಣಿಸಿರುವುದನ್ನು ನನ್ನಯ ಹೇಳದೆ ಬಿಡಲು ಕಾರಣ ತಿಳಿಯುವುದಿಲ್ಲ.

## ಪಾಂಡುರಾಜನ ವೃತ್ತಾಂತ

ಕುಂತಿಭೋಜನು ಏರ್ಪಡಿಸಿದ್ದ ಸ್ವಯಂವರದಲ್ಲಿ ಕುಂತಿ ' ಚಲ್ವಿಡಿದಿರ್ದ ರೂಪು ದೃಷ್ಟಿಗೆ ವರೆ ಪಾಂಡುರಾಜನನೆ ಕುಂತಿ ಮನಂಬುಗೆ ಮಾಲೆ ಸೂಡಿದಳ್ ' ಅ

ಸಮಯದಲ್ಲಿಯೇ ಭೀಷ್ಮನು ಮದ್ರರಾಜನ ಮಗಳು ಶಲ್ಯನ ಸಹೋದರಿ ಮಾದ್ರಿಯನ್ನೂ ತಂದು 'ಒಂದೆ ಪಸೆಯೊಳಿರಿಸಿ' ಪಾಂಡುವಿಗೆ ಮದುವೆ ಮಾಡಿದನು. 'ಆಕೆಗಳಿರ್ವರುಂ ಎರಡುಂ ಕೆಲದೊಳಿರೆ ಕಲ್ಪಲತೆಗಳಿಜಿಡರ ನಡುವಣ ಕಲ್ಪವೃಕ್ಷಮಿರ್ಪಂತಿರ್ದ ಪಾಂಡುರಾಜಂಗೆ ಧೃತರಾಷ್ಟ್ರಸಂಗಹೀನನೆಂದು ವಿವಾಹದೊಸಗೆಯೊಡನೆ ಪಟ್ಟಬಂಧದೊಸಗೆಯುಂ ಮಾಡಿ ನೆಲನನಾಳಿಸಿದ'ನೆಂದು ಪಂಪ ಬಣ್ಣಿಸಿದ್ದಾನೆ.[1]

ನನ್ನಯಭಟ್ಟನೂ ಪಂಪನಂತೆಯೇ ಪಾಂಡುವಿನ ವಿವಾಹ ವೃತ್ತಾಂತವನ್ನೂ ಅವನ ದಿಗ್ವಿಜಯದ ಕಥೆಯನ್ನೂ ಹೇಳಿರುವನಾದರೂ ಅವನಿಗೆ ಪಟ್ಟಾಭಿಷೇಕವಾಯಿತೆಂದು ಹೇಳಿಲ್ಲ; ಪಾಂಡುರಾಯನು ಧೃತರಾಷ್ಟ್ರನಿಗೆ ವಿಧೇಯನಾಗಿ ಅವನಿಗೆ ಅಭಿಮತವಾದ ಕಾರ್ಯಗಳನ್ನು ಮಾಡುತ್ತಿದ್ದನೆಂದು ನನ್ನಯನ ಹೇಳಿಕೆ.[2]

ಒಮ್ಮೆ ಪಾಂಡು ಮೃಗಯಾವಿಹಾರದಲ್ಲಿದ್ದಾಗ ಒಂದು ಗಂಡು ಜಿಂಕೆಯ ಮೇಲೆ ಬಾಣಬಿಡಲು ಅದು ಸಾಯುವಾಗ ಮಾನುಷ ಭಾಷೆಯಲ್ಲಿ ಮಾತನಾಡಿ ತನ್ನ ಪ್ರೇಯಸಿಯಲ್ಲಿ ರತಿಯಲ್ಲಿ ಆಸಕ್ತನಾಗಿದ್ದ ಸಮಯದಲ್ಲಿ ತನ್ನನ್ನು ಕೊಂದ ತಪ್ಪಿಗಾಗಿ ಪಾಂಡುವೂ ಪ್ರೇಯಸಿಯಲ್ಲಿ ಸೇರಿದಾಗ ಮರಣವುಂಟಾಗಲೆಂದು ಶಪಿಸಿ ಪ್ರಾಣಬಿಟ್ಟಿತು. ಅದು ಸಾಧಾರಣವಾದ ಜಿಂಕೆಯಲ್ಲ. ಯಾರೋ ಮುನಿ ಜಿಂಕೆಗಳ ಸ್ವೇಚ್ಛಾವಿಹಾರವನ್ನು ನೋಡಿ ಮೆಚ್ಚಿಕೊಂಡು ತಾನೂ ಹಾಗೆ ವಿಹರಿಸಬೇಕೆಂದು ಆಸೆಪಟ್ಟು ತನ್ನ ಇನಿಯಳನ್ನು ಹೆಣ್ಣು ಜಿಂಕೆಯಾಗಿ ಪರಿವರ್ತಿಸಿ ತಾನೂ ಜಿಂಕೆಯಾಗಿ ರಮಿಸುತ್ತಿದ್ದಾಗ ಪಾಂಡುವಿನ ದೆಸೆಯಿಂದ ವಿಪತ್ತು ಒದಗಿತು. ವಿಹಾರಕ್ಕೆಂದು ಹೋಗಿ ಪಾಂಡುರಾಜನು 'ತನಗೆ ಮಾಣದೆ ತಂದನದೊಂದು ಮಾರಿಯಂ!' ಪಾಂಡು ಶಾಪಗ್ರಸ್ತನಾಗಿ ಬಹಳ ವ್ಯಥೆಪಟ್ಟನು. ಒಂದು ಜಿಂಕೆಯ ಬೇಟೆ ಇಷ್ಟು ಅನರ್ಥಕಾರಿಯಾದೀತೆಂದು ಅವನು ಬಗೆದಿರಲಿಲ್ಲ. ಅವನು ಕಂಗೆಟ್ಟು ಪರಿತಪಿಸಿದನು.

ಎತ್ತ ವನಮೆತ್ತ ಮೃಗಯಾ
ವೃತ್ತಕಮಾ ತಪಸಿಯೆತ್ತ ಮಿಗಮೆಂದೆಂತಾ
ನೆತ್ತೆಚ್ಚೆನಾತ್ಮ ಕರ್ಮಾ
ಯತ್ತಂ ಪೆಜತಲ್ಲಿದೆಲ್ಲಮು ಘಟಿತ ಘಟಿತಂ.

ಎಂದು ಪಾಂಡು ಹತೋತ್ಸಾಹನಾಗಿ ನಗರಕ್ಕೆ ಹಿಂದಿರುಗಿ ಗಾಂಗೇಯಾದಿ

---

[1] ವ್ಯಾಸಭಾರತದಲ್ಲಿಯೂ ಪಾಂಡುವಿಗೆ ರಾಜಪದವಿ ಬಂದ ಕಥೆ ಇದೆ. ಧೃತರಾಷ್ಟ್ರಸ್ತ್ವಚಕ್ಷುಷ್ಟ್ವಾದ್ರಾಜ್ಯಂ ನ ಪ್ರತ್ಯಪದ್ಯತ ಪಾರಶವತ್ವಾದ್ವಿದುರೋ ರಾಜಾ ಪಾಂಡುರ್ಬಭೂವಹ

I—108—25

[2] ಅಪ್ಪಾಂಡುರಾಜು ವಿನಯ ವಿಧೇಯತ್ವಂಬುನ ಧೃತರಾಷ್ಟ್ರುನಕಭಿಮತಕಾರ್ಯಕರಣಮುನ ಸಂತೋಷಂಬು ಸೇಯುಚು'

I—5—413

ಗಳಿಗೆ ಈ ವೃತ್ತಾಂತವನ್ನೆಲ್ಲ ತಿಳಿಸಿ ಸನ್ಯಾಸ ದೀಕ್ಷೆಯಲ್ಲಿ ಮನವುಳ್ಳವನಾಗಿ ಶತಶೃಂಗ ಪರ್ವತಕ್ಕೆ ಹೊರಟನು. ಕುಂತಿಮಾದ್ರಿಯರೂ ಅವನನ್ನು ಬಿಟ್ಟಿರಲಾರದೆ ಹಿಂಬಾಲಿಸಿದರು.

ಇದಿಷ್ಟು ಮುಖ್ಯವಾದ ಕಥಾಸೂತ್ರ. ಇದಿಷ್ಟನ್ನೂ ಪಂಪ ಸಂಗ್ರಹವಾಗಿ ಹೇಳಿದ್ದಾನೆ. ನನ್ನಯಭಟ್ಟನಾದರೂ ಈ ಶಾಪವೃತ್ತಾಂತವನ್ನೇ ಹೇಳಿರುವನಾದರೂ ಆ ಮೃಗರೂಪಿಯಾದ ಮುನಿಯು ಶಾಪ ಕೊಡುವ ಮುಂಚೆ ಪಾಂಡು ನೃಪಾಲನೊಡನೆ ಕೊಂಚ ಹೊತ್ತು ಧರ್ಮಜಿಜ್ಞಾಸೆ ನಡೆಸಿದಂತೆ ವರ್ಣಿಸಿದ್ದಾನೆ. ಬೇಟೆಯ ಧರ್ಮಾಧರ್ಮಗಳನ್ನು ವಿವೇಚಿಸಿದ ಆ ಜಿಂಕೆ ರಾಜನಾದವನು ಬೇಟೆಯಾಡುವುದು ಸರಿಯಾದರೂ ರತಿಮಗ್ನವಾಗಿದ್ದ ಸಾಧುಪ್ರಾಣಿಗಳನ್ನು ಕೊಲ್ಲುವುದು ಅನುಚಿತವೆಂದು ಹೇಳಿ ಧರ್ಮಜ್ಞನಾದವನು ಅಂಥ ಕೆಲಸ ಮಾಡಸಲ್ಲದೆಂದು ಆಕ್ಷೇಪಿಸಲು ಪಾಂಡುವು 'ಪೂರ್ವದಲ್ಲಿ ಅಗಸ್ತ್ಯಮಹಾಮುನೀಂದ್ರನು ಮೃಗ ಮಾಂಸದಿಂದ ನಿತ್ಯ ಶ್ರಾದ್ಧಮಾಡುತ್ತಿದ್ದು ರಾಜರಿಗೆ ಮೃಗವಧೆಯು ದೋಷವಿಲ್ಲದಂತೆ ಮಾಡಲಿಲ್ಲವೆ? ಅದನ್ನು ನೀನು ನಿಂದಿಸಲಾದೀತೆ?' ಎಂದು ಪ್ರತ್ಯಾಕ್ಷೇಪಣೆ ಮಾಡಿದನಂತೆ. ಬಾಣಘಾತದಿಂದ ಯಾತನೆ ಪಡುತ್ತಿದ್ದ ಆ ಮುನಿಯು ಆಗ ರೋಷದಿಂದ ಶಾಪಹಾಕಿದನಂತೆ! ಏನೇನು ಚರ್ಚೆ ನಡೆದರೂ ಫಲವೊಂದೇ ಆಯಿತು. ಆ ಮುನಿಶಾಪ ಪಾಂಡುವಿಗೆ ತಪ್ಪಲಿಲ್ಲ! ಆದ್ದರಿಂದ ಪಂಪ ಕಥೆಗೆ ಅತ್ಯಗತ್ಯವಾದ ಶಾಪವೃತ್ತಾಂತವನ್ನು ಮಾತ್ರ ಹೇಳಿ ಆ ವ್ಯರ್ಥಜಿಜ್ಞಾಸೆಯನ್ನು ಕೈಬಿಟ್ಟಿದ್ದಾನೆ. ಮೃಗಯಾಧರ್ಮವಿವರಣೆಯಾಗಲಿ ಅಗಸ್ತ್ಯನು ಮಾಡಿದ 'ನಿತ್ಯಶ್ರಾದ್ಧ'ದ ಸುದ್ದಿಯಾಗಲಿ ಪಂಪನಿಗೆ ರುಚಿಸಲಿಲ್ಲ. ಭಾರತಕಥಾನಿರೂಪಣೆಗೆ ಅವುಗಳ ಅಗತ್ಯವಿಲ್ಲವೆಂದು ಅವನು ಭಾವಿಸಿದನು.

## ಧರ್ಮರಾಯನ ಜನನ

ಪಾಂಡು ಕುಂತಿಮಾದ್ರಿಯರೊಡನೆ ಶತಶೃಂಗ ಪರ್ವತವನ್ನು ಸೇರಿ ಅಲ್ಲಿ ಮುನಿವೃತ್ತಿಯಿಂದ ಜೀವಿಸುತ್ತ ಕಾಲನಿರೀಕ್ಷೆ ಮಾಡುತ್ತಿದ್ದನು. ಗಾಂಧಾರಿಗೆ ನೂರ್ವರು ಮಕ್ಕಳಾಗುವಂತೆ ಪರಾಶರ ಮುನೀಂದ್ರನು ವರ ಪ್ರದಾನಮಾಡಿದನೆಂಬ ವಾರ್ತೆ ಕೇಳಿ ಕುಂತಿಯು ವ್ಯಥಿತಳಾಗಿರಲು ಪಾಂಡು ಅವಳನ್ನು ಸಂತೈಸಬಗೆದು 'ಸಂತತಿಗೆ ಮಕ್ಕಳೆ ನೆಟ್ಟನೆ ಬಾರ್ತೆಯಪ್ಪೊಡೆ' ಮುನಿಪುಂಗವರನ್ನು ಮೆಚ್ಚಿಸಿ ಮಕ್ಕಳನ್ನು ಪಡೆಯುವಂತೆ ಸಲಹೆ ನೀಡಿದನೆಂದೂ ಆಗ ಅವಳು ತನಗೆ ದೂರ್ವಾಸ ಮುನಿ ಕೊಟ್ಟಿದ್ದ ಮಂತ್ರೋಪದೇಶದ ಸುದ್ದಿ ಹೇಳಿ ಪಾಂಡುವಿನ ಅನುಮತಿಯಂತೆ ಯಮನನ್ನು ಪ್ರಾರ್ಥಿಸಿ ಮಗನನ್ನು ಪಡೆದಳೆಂದು ಪಂಪ ಹೇಳಿದ್ದಾನೆ. ನನ್ನಯನ ಭಾರತದಲ್ಲಿ ಇದು ಇಷ್ಟು ಸುಲಭವಾಗಿ ತೀರ್ಮಾನವಾಗುವುದಿಲ್ಲ. ಅಲ್ಲಿ ಪಾಂಡುವಿಗೇ ಮಕ್ಕಳ ಅಪೇಕ್ಷೆ ಮೊದಲು ಹುಟ್ಟಿತು. ಸ್ವರ್ಗಪಥದಲ್ಲಿ ಅನಾಯಾಸ

ವಾಗಿ ಪ್ರಯಾಣ ಹೋಗುತ್ತಿದ್ದ ಸಹಸ್ರಮುನಿ ಸಂಘವನ್ನು ನೋಡಿ ಅವರೊಡನೆ ಪಾಂಡು ಸಂಭಾಷಿಸಲು ತೊಡಗಿದಾಗ ಅವರೆಲ್ಲ ಅಮಾವಾಸ್ಯೆಯ ದಿನ ಬ್ರಹ್ಮ ಸನ್ನಿಧಿಯಲ್ಲಿ ಮಹರ್ಷಿಗಳೂ ಪಿತೃದೇವತೆಗಳೂ ಸಮಾವೇಶಗೊಳ್ಳುವುದು ರೂಢಿ ಯೆಂದೂ ಅವಕ್ಕಾಗಿ ತಾವೂ ಹೊರಟಿರುವುದಾಗಿಯೂ ಅವರು ತಿಳಿಸಿದರಂತೆ. ಅವರೊಡನೆ ತಾನೂ ಹೋಗಲು ಬಯಸಿದನಾದರೂ ಪಾಂಡುವಿಗೆ ಸಾಧ್ಯವಾಗಲಿಲ್ಲ. 'ಅಪುತ್ರಸ್ಯ ಗತಿರ್ನಾಸ್ತಿಯೆನು ವೇದವಚನಂಬು ಗಲದು ಗಾವುನ ನೇನಪುತ್ರಕುಂಡ ನೇಮಿಸೇಯುದುನು?' ಎಂದು ಪಾಂಡು ಪೇಚಾಡಿಕೊಳ್ಳಲು ಅವರು ಯೋಗ ದೃಷ್ಟಿಯಿಂದ ಅನಾಗತವನ್ನು ಬಲ್ಲವರಾದರಿಂದ ಪಾಂಡುವಿನ ಭವಿಷ್ಯವನ್ನು ಅರಿತು 'ನೀನು ಅಪುತ್ರಕನಲ್ಲ ದೈವಾಧಿಷ್ಠಿತವಾದ ಸಂತಾನ ನಿನಗೆ ಧರ್ಮಾನಿಲ ಶಕ್ರಾಶ್ವಿನಿಗಳ ವರದಿಂದ ಲಭಿಸುತ್ತದೆ. ನೀನು ಅಕ್ಷಯ ಲೋಕಗಳನ್ನು ಪಡೆಯುವೆ' ಎಂದು ಭವಿಷ್ಯ ಹೇಳಿದರು. ಆಗ ಅವನು ಕುಂತಿಯೊಡನೆ ಈ ವೃತ್ತಾಂತವನ್ನೆಲ್ಲ ಹೇಳಿ ಅವಳು 'ದೈವಾಧಿಷ್ಠಿತ'ವಾದ ಸಂತಾನ ಪ್ರಾಪ್ತಿಗೆ ಯತ್ನಿಸಬೇಕೆಂದು ಕೇಳಿಕೊಂಡನಂತೆ. ಕುಂತಿ ಅದಕ್ಕೆ ಒಪ್ಪಲಿಲ್ಲ. ಪಾಂಡುವಿಗೆ ಅವಳು ವ್ಯುಷಿತಾಶ್ವ ರಾಜನ ವೃತ್ತಾಂತವನ್ನು ಹೇಳಿ ಅವನ ಸಲಹೆಯನ್ನು ತಿರಸ್ಕರಿಸಿದಳಂತೆ. ಆದರೆ ಪಾಂಡು ಮತ್ತೆ ಪ್ರಾರ್ಥಿಸಿನಮೇಲೆ ಅವಳು ದೂರ್ವಾಸಮುನಿಯ ಮಂತ್ರೋಪದೇಶದ ಸುದ್ದಿಯನ್ನು ಹೇಳಿ ಯಮನನ್ನು ಪ್ರಾರ್ಥಿಸಿ ಆತನ ವರದಿಂದ ಗರ್ಭ ಧರಿಸಿದಳೆಂದು ನನ್ನಯ ಈ ಕಥೆಯನ್ನು ವಿಸ್ತರಿಸಿ ಹೇಳುತ್ತ ಅದರ ಅಂಗವಾಗಿ ಔರಸ ಕ್ಷೇತ್ರಜ ದತ್ತಕ ಕೃತ್ರಿಮ ಗೂಢೋತ್ಪನ್ನ, ಅಪವಿದ್ಧ ಕಾನೀನ ಸಹೋಢ ಕ್ರೀತ, ಪೌನರ್ಭವ ಸ್ವಯಂದತ್ತ ಮೊದಲಾದ ವಿವಿಧಪುತ್ರರ ಲಕ್ಷಣಗಳನ್ನೂ ಅವರ ಯೋಗ್ಯತಾ ತಾರತಮ್ಯವನ್ನೂ ವಿವರಿಸಿರುವುದಲ್ಲದೆ ಹಿಂದೆ ನಿಯೋಗ ಪದ್ಧತಿಯಿಂದ ಮಕ್ಕಳನ್ನು ಪಡೆದವರ ದೃಷ್ಟಾಂತಗಳನ್ನೂ ಹೇಳಿದ್ದಾನೆ! ನಿಯೋಗ ಪದ್ಧತಿಯ ಸಮರ್ಥನೆ ಯಾಗಲಿ ಈ ಪುರಾಣ ಕಥಾವಿವರಣೆಯಾಗಲಿ ಪಂಪಕವಿಗೆ ಬೇಕೆನಿಸಲಿಲ್ಲ. ಇದು ಭಾರತಕಥೆಗೆ, ವಿಕ್ರಮಾರ್ಜುನನ ಮಹಿಮಾ ನಿರೂಪಣೆಗೆ, ಸಂಗತವೆನಿಸಲಿಲ್ಲ. ಅವನು ಅದನ್ನೆಲ್ಲ ನಿರ್ವಿಚಾರನಾಗಿ ಕೈಬಿಟ್ಟಿರುವುದೇ ಸಮುಚಿತವಾಗಿದೆ.

ಧರ್ಮರಾಜನ ಅನುಗ್ರಹದಿಂದ ಅತಿ ಸ್ಥಿರಧರ್ಮಮೂರ್ತಿಯಾದ ಧರ್ಮ ರಾಯನು ಹುಟ್ಟಿದನು.

. . . .

## ಭೀಮ ಸಂಭವಂ

ಕುಂತಿಗೆ ಅಷ್ಟರಿಂದ ತೃಪ್ತಿಯಾಗಲಿಲ್ಲ. ಆಕೆ ಸುತಭ್ರಾಂತೆಯಾಗಿದ್ದು ಮತ್ತೆ ವಾಯುದೇವನನ್ನು ಪ್ರಾರ್ಥಿಸಿ ಆತನು ಪ್ರತ್ಯಕ್ಷನಾದಾಗ 'ಕುಡು ರಿಪುತಂತ್ರಕ್ಷಯ ಕರನನೆನಗೆ ಹಿತನಂ ಸುತನಂ' ಎಂದು ಬೇಡಿದಳು. ವಾಯುದೇವನು ದೂರ್ವಾಸ ಮಂತ್ರ ಚೋದಿತನಾಗಿ 'ಆದೇಂ ಪಿರಿದು? ಇತ್ತೆನ್' ಎಂದು ನುಡಿದು ಅಂತರ್ಧಾನ

ನಾದನು. ವಾಯುದೇವನ ವರಪ್ರಸಾದದಿಂದ ಗರ್ಭವತಿಯಾದ ಕುಂತಿಗೆ 'ಅರಾತಿ ಗಳ್ಗಂತಕಾಲಂ ದೊರೆಕೊಳ್ವಂತೆ ಪ್ರಸೂತಿ ಕಾಲಂ ದೊರೆಕೊಳೆ' 'ದಳಿತ ಶತ್ರು ಗೋತ್ರಂ ಪುತ್ರಂ' ಪುಟ್ಟಿದನು. ಅವನೇ ಭೀಮ.

## ದುರ್ಯೋಧನ

ಕುಂತಿಯು ಹೀಗೆ 'ಭರತಕುಲತಿಲಕರಪ್ಪಿರ್ವರ್ಮಕ್ಕಳಂ' ಪೆತ್ತ ಸುದ್ದಿ ಕೇಳಿ ಗರ್ಭವತಿಯಾಗಿದ್ದ ಗಾಂಧಾರಿ ತನಗೆ ಪ್ರಸೂತಿಯಾಗದಿದ್ದುದಕ್ಕೆ ಬೇಸರಪಟ್ಟು ತನ್ನ ಗರ್ಭವನ್ನು ಹೊಸೆದುಕೊಂಡಳು. ಅದರಿಂದ ನೂರೊಂದು ಅರುಣ ವರ್ಣದ ಪಿಂಡ ಗಳು 'ಕಾಳಕೂಟಾಂಕುರಂಗಳಂತೆ' ಕೆಳಗೆ ಬಿದ್ದುವೆಂದೂ ಗಾಂಧಾರಿ ರೊಚ್ಚಿನಿಂದ ಅವುಗಳನ್ನೆಲ್ಲಾ ಹೊರಗೆಸೆಯುವಂತೆ ದಾಸಿಗೆ ಆಜ್ಞಾಪಿಸುತ್ತಿರಲು ಆ ಹೊತ್ತಿಗೆ ಸರಿಯಾಗಿ ಅಲ್ಲಿಗೆ ಬಂದ ವ್ಯಾಸಭಟ್ಟಾರಕನು ಅವುಗಳನ್ನೆಲ್ಲ 'ತುಪ್ಪದ ಕೊಡದೊಳ್ ಸಮಂತು ಮಡಗಿಟ್ಟೊಡೆ' ಸೃಷ್ಟಿಗೆ ಚೋದ್ಯವೆನಿಸುವ ಹಾಗೆ ಅವರ ಪೈಕಿ ಒಬ್ಬ ಮೊದಲು ಸಂಪೂರ್ಣ ವಯಸ್ಕನಾಗಿ 'ಘೃತಘಟವಿಘಟನ'ನಾಗಿ ಹುಟ್ಟಿದನಂತೆ! ಅವನೇ ದುರ್ಯೋಧನ. ಅವನು ಹುಟ್ಟಿದಾಗ ಅನೇಕ ಉತ್ಪಾತಗಳಾದುವು. ಅವನ್ನು ಗಮನಿಸಿ ಚದುರನಾದ ವಿದುರನು ಇವನು ಕೌರವಕುಲದ ಪಾಲಿಗೆ ಧೂಮ ಕೇತುವೆಂದೂ ಇವನನ್ನು ಬಿಸುಡುವುದೇ ಸೂಕ್ತವೆಂದೂ ಹೇಳಿದರೂ ಪುತ್ರಮೋಹ ದಿಂದ ಧೃತರಾಷ್ಟ್ರನು ಅದಕ್ಕೆ ಒಪ್ಪಲಿಲ್ಲ.

ನನ್ನಯನ ಭಾರತದಲ್ಲಿಯೂ ಈ ಕಥೆ ಬಂದಿದೆ. ಆದರೆ ಅಲ್ಲಿ ಅದು ಇನ್ನಷ್ಟು ವಿಸ್ತಾರವಾಗಿದೆ. ಪಾಂಡುರಾಜನೇ ಮತ್ತೆ ಮತ್ತೆ ಪುತ್ರಲಾಭಕ್ಕೆ ಪ್ರಯತ್ನಿಸುವಂತೆ ಕುಂತಿಯನ್ನು ಬೇಡಿ ಬಲವಂತವಾಗಿ ಒಪ್ಪಿಸಿದನೆಂದು ನನ್ನಯ ಹೇಳಿದ್ದಾನೆ. ಪಂಪನಲ್ಲಿ ಆ ವಿವರಗಳಿಲ್ಲ. ದುರ್ಯೋಧನನ ನೂರ್ವರು ತಮ್ಮಂದಿರ ಹೆಸರು ಗಳನ್ನೂ ನನ್ನಯ ಹೇಳಿದ್ದಾನೆ. ಪಂಪ ಆ ಶ್ರಮ ತೆಗೆದುಕೊಳ್ಳದೆ 'ಮತ್ತಿನ ಕೂಸುಗಳ್ಗೆಲ್ಲಂ ದುಶ್ಶಾಸನಾದಿಯಾಗಿ ನಾಮಂಗಳನ್ನಿಟ್ಟು ಪರಕೆಯಂ' ಕೊಟ್ಟ ನೆಂದು ಹೇಳಿ ಮುಗಿಸಿಬಿಟ್ಟಿದ್ದಾನೆ. ನನ್ನಯ ದುಶ್ಶಳೆಯ ಜನನ ಕಥೆಯನ್ನೂ ಇಲ್ಲಿಯೇ ನಿರೂಪಿಸಿದ್ದಾನೆ. ಪಂಪ ಅದನ್ನು ಹೇಳಿಲ್ಲ.

ಏಕೋತ್ತರಶತ ಪುತ್ರರನ್ನು ಪಡೆದು ಕೃತಾರ್ಥನಾಗಿದ್ದ ಧೃತರಾಷ್ಟ್ರನಲ್ಲಿಗೆ ಭೀಷ್ಮ ವಿದುರಾದಿಗಳೂ ಪುರೋಹಿತ ಪ್ರಮುಖ ಬ್ರಾಹ್ಮಣವರರೂ ಒಟ್ಟಿಗೆ ಬಂದು ದುರ್ಯೋಧನನು ಸಂಭವಿಸಿದಾಗ ಆದ ಉತ್ಪಾತಗಳನ್ನು ಹೇಳಿ ಭವಿಷ್ಯಜ್ಞರಾದ ಮಹಾತ್ಮರು ಇಂಥ ಉತ್ಪಾತಗಳ ಕಾಲದಲ್ಲಿ ಹುಟ್ಟಿದ ದುರ್ಯೋಧನನು 'ಜಗಜ್ಜನ ಸಂಕ್ಷಯ ಜನನ'ನಾಗುವನೆಂದೂ ಆದ್ದರಿಂದ ಅವನನ್ನು ಪರಿತ್ಯಜಿಸಿ ಜಗತ್ತನ್ನೂ ಕುಲವನ್ನೂ ರಕ್ಷಿಸಿಕೊಳ್ಳುವುದು ಯೋಗ್ಯವೆಂದು ಹೇಳಿದರೆಂದೂ ತಿಳಿಸಿ ಧೃತರಾಷ್ಟ್ರನು

ಆ ಪ್ರಕಾರ ನಡೆದುಕೊಳ್ಳಬೇಕೆಂದೂ ಹಾಗೆ ದುರ್ಯೋಧನನನ್ನು ಕಳೆದುಬಿಟ್ಟರೂ ಅವನಿಗೆ ನೂರ್ವರು ಮಕ್ಕಳು ಉಳಿಯುವರೆಂದೂ ತಿಳಿಸಿದರಂತೆ! ಆದರೆ ಧೃತರಾಷ್ಟ್ರ ಅದಕ್ಕೆ ಒಪ್ಪಲಿಲ್ಲ. ಪುತ್ರಮೋಹದಿಂದ ಅವನು ಆ ಮಾತುಗಳನ್ನು ಕೇಳಿಸಿಕೊಳ್ಳಲೇ ಇಲ್ಲ. ಅವರ ಸಲಹೆ ಅವನಿಗೆ ಎಷ್ಟುಮಾತ್ರವೂ ಸಹನೆಯಾಗಲಿಲ್ಲ!

ಈ ಕಥಾಭಾಗವನ್ನು ಪಂಪ ನನ್ನಯರು ಏಕರೀತಿಯಾಗಿ ಹೇಳಿದ್ದಾರೆ. ಆದರೆ ನನ್ನಯನ ಕಥನ ವಿಸ್ತಾರ; ಪಂಪನ ಹೇಳಿಕೆ ಬಹಳ ಸಂಕ್ಷೇಪ. ನನ್ನಯನು ಹತ್ತು ಪದ್ಯಗಳಲ್ಲಿ ಹೇಳಿರುವ ಕಥಾವಸ್ತುವನ್ನು ಪಂಪ ಸಂಗ್ರಹಿಸಿ ಎರಡು ಪದ್ಯಗಳಲ್ಲಿ ಹೇಳಿಬಿಟ್ಟಿದ್ದಾನೆ. ಕಿರಿದರಲ್ಲಿಯೇ ಹಿರಿದಾದ ಅರ್ಥವನ್ನು ಹುದುಗುವ ಚಮತ್ಕಾರ ಪಂಪನಿಗೆ ಚೆನ್ನಾಗಿ ಸಿದ್ಧಿಸಿದೆ. ನನ್ನಯ ಭೀಮ ದುರ್ಯೋಧನಾದಿಗಳ ಜನನ ಕಥೆಯನ್ನು ಹೇಳುವಾಗ ಪುರಾಣಕವಿಗೆ ಸಹಜವಾದ ಸರಳ ಭಾಷೆಯಲ್ಲಿ ಹೇಳಿ ಮುಗಿಸಿದ್ದಾನೆ. ಪಂಪ ಈ ಸನ್ನಿವೇಶದಲ್ಲಿ ಬಳಸಿದ ಹಲವು ಸುಂದರ ಉಪಮಾನಗಳು ಅವನ ರಸಜ್ಞತೆಯನ್ನು ಪ್ರಕಾಶಗೊಳಿಸುತ್ತವೆಯಲ್ಲದೆ ಮುಂದೆ ನಡೆಯಲಿರುವ ಭಾರತ ಕಥೆಯ ಮುನ್ಸೂಚನೆಗಳಾಗಿವೆ. 'ಅರಾತಿಗಳ್ಗಂತಕಾಲಂ ದೊರೆಕೊಳ್ವಂತೆ ಪ್ರಸೂತಿಕಾಲಂ ದೊರೆಕೊಳೆ' ಕುಂತಿಯು 'ದಳಿತ ಶತ್ರುಗೋತ್ರಂ ಪುತ್ರಂ' ಭೀಮನನ್ನು ಹೆತ್ತಳೆಂದು ಹೇಳಿ ಕವಿ ಭಾರತಯುದ್ಧದಲ್ಲಿ ಭೀಮನ ಪಾತ್ರವನ್ನು ಸೂಚ್ಯವಾಗಿ ವರ್ಣಿಸಿದ್ದಾನೆ. ಗಾಂಧಾರಿ ತನ್ನ ಗರ್ಭವನ್ನು ಹೊಸೆದಾಗ ಬಿದ್ದ ನೂರೊಂದು ಪಿಂಡಗಳು 'ಕಾಳಕೂಟಾಂಕುರ'ಗಳಂತೆ ಇದ್ದುವಂತೆ! ದುರ್ಯೋಧನ ಅವನ ಕುಲಕ್ಕೆ ಕೇತು!

ನನ್ನಯಭಟ್ಟ ಭೀಮಸೇನನ ಶೈಶವ ಕಥೆಯನ್ನು ಆರಂಭಿಸುತ್ತ ಅವನು ಹುಟ್ಟಿದ ಹತ್ತನೆಯ ದಿನ ಕುಂತಿಯು ಶತಶೃಂಗ ಪರ್ವತದಲ್ಲಿ ದೇವರ ಗುಡಿಗೆ ಹೋಗುವ ಮಾರ್ಗದಲ್ಲಿ ನಡೆದ ಒಂದು ಅದ್ಭುತ ವ್ಯಾಪಾರವನ್ನು ವರ್ಣಿಸಿದ್ದಾನೆ. ಪಾಂಡು ಕುಂತಿಯರು ಶಿಶು ಸಮೇತರಾಗಿ ಹೋಗುತ್ತಿದ್ದಾಗ ದಾರಿಯಲ್ಲಿ ಗಹನಗಿರಿ ಗಹ್ವರದೊಳಗಿನಿಂದ ಒಂದು ದೊಡ್ಡ ಹುಲಿ ಮೇಲೆ ನೆಗೆಯಲು ವೀರನಾದ ಪಾಂಡು ಒಡನೆಯೇ ಮೂರು ದಾರುಣ ಬಾಣಗಳಿಂದ ಹೊಡೆದು ಅದನ್ನು ಕೊಂದು ಕೆಡಹಿದನು. ಆದರೆ ಆ ವ್ಯಾಘ್ರಭೀತಿಯಿಂದ ಕುಂತಿ ತನ್ನ ಕೈಯಲ್ಲಿದ್ದ ಕೂಸನ್ನು ಕೆಳಕ್ಕೆ ಬಿಟ್ಟಳು. ಆ ಹತ್ತು ದಿನಗಳ ಕೂಸು ಕೆಳಗಿದ್ದ ಬಂಡೆಯಮೇಲೆ ಬಿತ್ತು. ಅದರಿಂದ ಆ ಬಂಡೆಯೇ ಚೂರು ಚೂರಾಯಿತು.! ಪಂಪ ಈ ಶಾರ್ದೂಲ ವೃತ್ತಾಂತವನ್ನಾಗಲಿ ಕೂಸು ಹುಟ್ಟಿದ ಹತ್ತನೆಯ ದಿನ ಕುಂತಿ ಗುಡಿಗೆ ಹೋದ ಸುದ್ದಿಯನ್ನಾಗಲಿ ಪ್ರಸ್ತಾಪಿಸಿಲ್ಲ. ಆದರೆ ಶಿಶು ಭೀಮ ಮುಂದೆ ತಪ್ಪು ಹೆಜ್ಜೆಗಳನ್ನಿಟ್ಟು ನಡೆಯುವ ಕಾಲದಲ್ಲಿ ಅವನು ಬಿದ್ದು ಕೆಳಗಿನ ಬಂಡೆ ಹುಡಿಯಾಯಿತೆಂದು ಹೇಳಿದ್ದಾನೆ.

## ಅರ್ಜುನನ ಜನನ

ಧರ್ಮಸುತ ಭೀಮಸೇನರ ಜನ್ಮವೃತ್ತಾಂತವನ್ನೂ ದುರ್ಯೋಧನಾದಿಗಳ ಜನನ ಕಥೆಯನ್ನೂ ಹೇಳಿ ಮುಗಿಸಿಬಿಟ್ಟು ಪಂಪ ವಿಕ್ರಮಾರ್ಜುನನ ಜನ್ಮೋತ್ಸವ ವನ್ನು ಉತ್ಸಾಹಾತಿಶಯದಿಂದ ವರ್ಣಿಸಲು ಹೊರಟಿದ್ದಾನೆ. ಗಾಂಧಾರಿಗೆ ನೂರೊಂದು ಮಕ್ಕಳು ಹುಟ್ಟಿದರೆಂಬ ವಾರ್ತೆ ಕೇಳಿ ಕುಂತಿಗೆ ಆತಂಕವಾಗಿರಬೇಕು. ಹಿಂದೆಯೇ ಅವಳು 'ರಿಪುತಂತ್ರಕ್ಷಯಕರನಂ ಪುತ್ರನಂ' ಕೋರಿ ಕೊಂಡಿದ್ದಳು! ಈಗ ಅದು ಇನ್ನೂ ಹೆಚ್ಚು ಅಗತ್ಯ ಎನಿಸಿರಬೇಕು. ಆದ್ದರಿಂದಲೇ ಅವಳು 'ಉಗ್ರ ವೈರಿ ಮದವನ್ಮಾತಂಗ ಕುಂಭಾದ್ರ್ರ ಮೌಕ್ತಿಕಲಗ್ನೋಜ್ವಲಬಾಣ' ನಾದಂಥ ಮಗನಾಗಬೇಕೆಂದು ಬಯಸಿ ಪಾಂಡುರಾಜನೊಡನೆ ಒಂದು ವರ್ಷಕಾಲ ಶತಶೃಂಗ ಪರ್ವತದ ಮೇಲೆ ಉಗ್ರವಾದ ವ್ರತವನ್ನು ಆಚರಿಸಿದಳು. ಹಾಗೆ ವ್ರತಾಚರಣೆ ಮಾಡಿ ಒಂದು ದಿನ 'ಅಗಣ್ಯಪುಣ್ಯತೀರ್ಥಜಲಂಗಳಂ ಮಿಂದು ದಳಿಂಬಮನುಟ್ಟು ದರ್ಭಶಯನದೊಳಿರ್ದುಕೊಂಡು ಇಂದ್ರ ಮಂತ್ರವನ್ನು ಜಪಿಸಿದಳು. ಇಂದ್ರ ಬಂದು 'ಏನಂ ಕೊಡುವುದು?' ಎಂದು ಕೇಳಲು ಕುಂತಿ 'ಎನಗೀವುದು ನಿನ್ನೆಸಕದ ಮಸಕಮನೆ ಪೋಲ್ವ ಮಗನಂ ಮಘವಾ' ಎಂದು ಬೇಡಿದಳು. ಇಂದ್ರ ವರದ ನಾದನು. ಕುಂತಿ ಗರ್ಭ ಧರಿಸಿದಳು. ಗರ್ಭಿಣಿಗೆ ಅನೇಕ ಶುಭ ಸ್ವಪ್ನಗಳಾದುವು. ಆ ಕಾಲದಲ್ಲಿ ಕುಂತಿಗೆ ಬಿಚ್ಚುಗತ್ತಿಯಲ್ಲಿ ಆತ್ಮಬಿಂಬವನ್ನು ನೋಡಿಕೊಳ್ಳುವ ಅಪೇಕ್ಷೆ ಯಾಯಿತು. ಸಂತತವಾಗಿ ಧನುರ್ಲತಾಗುಣ ನಿನಾದವನ್ನು ಕೇಳುವ ಹಂಬಲ ಆ ವೀರ ಮಾತೆಗೆ! ಸಿಂಹದ ಮರಿಯನ್ನು ಸಾಕುವ ಬಯಕೆ ಮೂಡಿತು ಕುಂತಿಗೆ. 'ಏೞುಂ ಸಮುದ್ರಂಗಳ ನೀರನೊಂದು ಮಾಡಿ ಮೀಯಲುಂ ವೇಳಾವನಲತಾಗೃ ಹೋದರ ಪುಳಿನಸ್ಥಳ ಪರಿಸರ ಪ್ರದೇಶದೊಳ್ ತೊೞಲಲುಂ ಅೞ್ತಿ'ಯಾಯಿತಂತೆ! ಮುಂದೆ ಹುಟ್ಟಲಿರುವ ವೀರಕುಮಾರನ ಸಂಗರ ಪರಾಕ್ರಮದ ಪೂರ್ವ ಸೂಚನೆಗಳೆಲ್ಲ ಪ್ರಕಟಗೊಂಡವು.

ಎಲ್ಲ ಗ್ರಹಗಳೂ ಉಚ್ಚಸ್ಥಿತಿಯಲ್ಲಿದ್ದ ಸುಮುಹೂರ್ತದಲ್ಲಿ 'ಭರತ ಕುಲಗಗನ ದಿನಕರ'ನುದಯಿಸಿದನು. ಸುರದುಂದುಭಿಗಳು ಮೊಳಗಿದುವು. ದೇವಾನು ದೇವತೆಗಳೆಲ್ಲ ಜಯಘೋಷಮಾಡಿ ಹರಸಿದರು. ಹಿರಣ್ಯಗರ್ಭ ಬ್ರಹ್ಮನೇ ಮೊದಲ್ಗೊಂಡು ದಿವ್ಯಮುನಿಗಳೂ ಏಕಾದಶ ರುದ್ರರೂ ದ್ವಾದಶಾದಿತ್ಯರೂ ಅಷ್ಟ ವಸುಗಳೂ ಅಶ್ವಿನೀದೇವರೂ ಮೊದಲಾದ 'ಮೂವತ್ತು ಮೂಡೇವರುಂ ಇಂದ್ರಂ ಬೆರಸು ವೈಮಾನಿಕ ದೇವರುಂ ನೆರೆದು ಪಾಂಡುರಾಜನುಮಂ ಕೊಂತಿಯುಮಂ ಪರಸಿ ಕೂಸಿಗೆ ಜನ್ಮೋತ್ಸವ' ವನ್ನು ಮಾಡಿದರು!

ಅರ್ಜುನ ಪಂಪನ ಭಾರತಕ್ಕೆ ಕಥಾನಾಯಕ. ಅವನ ಜನನ ಕಥೆಯನ್ನು ಹೇಳುವ ಸಡಗರದಲ್ಲಿ ಜಿನಸಮಯ ದೀಪಕನಾದ ಪಂಪಕನಿ ಜಿನ ಶಿಶುವಿನ

ಜನ್ಮೋತ್ಸವವನ್ನು ಸ್ಮರಿಸಿಕೊಂಡಿದ್ದಾನೆ. ಇಂದ್ರನ ವರಪ್ರಸಾದದಿಂದ ಹುಟ್ಟಿದ ಶಿಶುವಿಗೆ ಸ್ವಯಂ ಇಂದ್ರನೇ ಬಂದು ಜನ್ಮೋತ್ಸವವನ್ನು ಆಚರಿಸಿದನು. ಆವನೊಡನೆ ದೇವಲೋಕದ ನಾನಾ ಜನರೂ ಬಂದು ಸೇರಿದರು. ಆ ದೇವ ವಿಮಾನಗಳಿಂದ ಆಕಾಶ ತುಂಬಿಹೋಯಿತು !

ನೋಡುವನಾ ಬ್ರಹ್ಮಂ ಪೞಂ
ಡಾಡುವನಮರೇಂದ್ರ ನಿಂದ್ರನಚ್ಚರಸೆಯರಿ
ಟ್ಟಾಡುವರೆಂದೊಡೆ ಪೊಗೞ
ಲ್ಕೀಡ ಗುಣಾರ್ಣವನ ಜನ್ಮದಿನದ ಬೆಡಂಗಂ

ಅವರು ದೊಡ್ಡ ಉತ್ಸವವನ್ನೇ ಮಾಡಿದರು. ದೇವಸಭೆ ಬ್ರಹ್ಮಸಭೆಗಳನ್ನೊಟ್ಟಿಗೆ ಇಟ್ಟುಕೊಂಡು ಇಂದ್ರನು ಆ ಶಿಶುವಿಗೆ ನಾಮಕರಣೋತ್ಸವವನ್ನು ನಡೆಸಿದನು.

ಇಂದ್ರ ನಾಮಕರಣ ಮಾಡುನಾಗ ಆ ಶಿಶು ಕುಂತೀಪುತ್ರನಾದ ಅರ್ಜುನ ನೆಂಬ ಸಂಗತಿಯನ್ನೇ ಮರೆತವನಂತೆ ' ಚಾಳುಕ್ಯ ವಂಶೋದ್ಭವಂ ಶ್ರೀಮದರಿಕೇಸರಿ ವಿಕ್ರಮಾರ್ಜುನ ನುದಾತ್ತನಾರಾಯಣಂ ಪ್ರಚಂಡ ಮಾರ್ತಾಂಡನುದಾರ ಮಹೇಶ್ವರಂ ಕಪನ ತ್ರಿನೇತ್ರಂ ಮನುಜಮಾಂಧಾತಂ ಪ್ರತಿಜ್ಞಾ ಗಾಂಗೇಯಂ ಶೌಚಾಂಜನೇಯನಕಳಂಕ ರಾಮಂ ಸಾಹಸಾಭರಣಂ .... ಸುರತ ಮಕರಧ್ವಜಂ.... ಪ್ರಿಯಗಳ್ಳಂ ಗುಣನಿಧಿ ಗುಣಾರ್ಣವಂ ಸಾಮಂತ ಚೂಡಾಮಣಿ .... ' ಎಂದು ಇವೇ ಮೊದಲಾದ ಅಷ್ಟೋತ್ತರ ಶತನಾಮುಗಳನ್ನು ಇಟ್ಟನಂತೆ ! ಅರ್ಜುನ ಯಾರಿಗೆ ಸಾಮಂತ ? ಆದರೆ ಪಂಪನ ಪ್ರಕಾರ ಅರಿಕೇಸರಿಯೇ ಅರ್ಜುನ ! ಅರಿಕೇಸರಿಯ ಬಿರುದುಗಳು ಅರ್ಜುನನಿಗೆ ಆಗಬಹುದು. ಹೀಗೆ ಅನೇಕ ಹೆಸರುಗಳನ್ನು ಕೊಟ್ಟು ನಾಮಕರಣೋತ್ಸವವನ್ನು ವೈಭವದಿಂದ ಪೂರ್ಣಮಾಡಿ ದೇವೇಂದ್ರನು ವಿಕ್ರ ಮಾರ್ಜುನನನ್ನು ಹೀಗೆ ಆಶೀರ್ವದಿಸಿದನು.

ಸಪ್ತಸಮುದ್ರ ಮುದ್ರಿತ ಧರಾತಳಮಂ ಬೆಸಗಯ್ಯು ಮೀಱಿದು
ದ್ದೃಪ್ತ ವಿರೋಧಿ ಸಾಧನಮನಾಹವ ದೊಳ್ ತಱಿದೊಟ್ಟು

(ವಿ.ವಿ. I: 149)

ಅರ್ಜುನನ ಜನ್ಮೋತ್ಸವದೊಡನೆ ಪಂಪ ತನ್ನ ' ವಿಕ್ರಮಾರ್ಜುನ ವಿಜಯ'ದ ಪ್ರಥಮಾಶ್ವಾಸವನ್ನು ಮುಗಿಸಿದ್ದಾನೆ. ಯುಧಿಷ್ಠಿರ ಭೀಮರ ಹುಟ್ಟಿನ ಕಥೆಯನ್ನು ಹೇಳುವುದಕ್ಕಿಂತ ಕವಿ ಅರ್ಜುನನ ಜನನ ಕಥೆಯನ್ನು ಹೆಚ್ಚು ವಿಸ್ತಾರವಾಗಿ ಅಮಿತ ವಾದ ಉತ್ಸಾಹದಿಂದ ವರ್ಣಿಸಿದ್ದಾನೆ. ತನ್ನ ಆಶ್ರಯದಾತನಾದ ಅರಿಕೇಸರಿಯನ್ನು ಪುರಾಣ ಕಥಾವ್ಯಕ್ತಿಯಾದ ಅರ್ಜುನನೊಡನೆ ಸಮೀಕರಿಸಿದುದರಿಂದ ಇದು ಕೇವಲ ಅರ್ಜುನನ ಕಥೆಯಾಗದೆ ಅರಿಕೇಸರಿಯ ಕಥೆಯೂ ಅಯಿತು. ರಾಜಾಶ್ರಿತನಾದ ಕವಿಗೆ ಸಹಜವಾಗಿ ಈ ವರ್ಣನೆ ಬಹಳ ಪ್ರಿಯವಾಯಿತು.

ನನ್ನಯಭಟ್ಟನೂ ಅರ್ಜುನನ ಜನ್ಮ ಕಥೆಯನ್ನು ಬಹಳ ಉತ್ಸಾಹದಿಂದಲೇ ಹೇಳಿದ್ದಾನೆ. ' ತ್ರಿಲೋಕ ವಿಜಯಿ 'ಯಾದ ಮಗನನ್ನು ಪಡೆಯಬೇಕೆಂದು

ಪಾಂಡು ಘೋರವಾದ ತಪಸ್ಸು ಮಾಡಿದನಂತೆ! ಕುಂತಿಯೂ ಒಂದು ಸಂವತ್ಸರ ಕಾಲ ತೀವ್ರವಾದ ನಿಷ್ಠೆಯಿಂದ ವ್ರತಾಚರಣೆ ಮಾಡಿದಳು. ಆಮೇಲೆ ಪಾಂಡುವಿನ ಇಚ್ಛೆಯಂತೆ ಕುಂತಿಯು ದೂರ್ವಾಸ ಕೊಟ್ಟ ಮಂತ್ರದಿಂದ ಇಂದ್ರನನ್ನು ಆರಾಧಿಸಲು ಅವನು ಪ್ರತ್ಯಕ್ಷನಾಗಿ ವರಪ್ರದಾನಮಾಡಲು ಕುಂತಿಗೆ ಸ್ಥಿರ ಪೌರುಷನಾದ ಲೋಕೋತ್ತರ ವೀರಪುತ್ರನೊಬ್ಬ ಉತ್ತರ ಫಲ್ಗುಣೀ ಪ್ರಥಮ ಪಾದದಲ್ಲಿ ಉದಯಿಸಿದನು. ಅವನೇ ಫಲ್ಗುನ! ಆಗ ಮುಂದೆ ಅರ್ಜುನನು ಮಾಡಲಿರುವ ಮಹಾ ಕಾರ್ಯಗಳನ್ನೆಲ್ಲ ಹೊಗಳುವ 'ನವಪಯೋದ ನಿನದ ಗಂಭೀರ'ವಾದ ದಿವ್ಯವಾಣಿಯೊಂದು ಮೊಳಗಿತು. ಆಕಾಶ ವೀಥಿಯಿಂದ ಪುಷ್ಪವೃಷ್ಟಿಯಾಯಿತು. ದೇವ ದುಂದುಭಿಗಳು ಮೊಳಗಿದವು! 'ಮಾರೀಚ್ಯಾದಿ ಪ್ರಜಾಪತಿಗಳೂ ಧಾತ್ರಾದಿ ದ್ವಾದಶಾದಿತ್ಯರೂ ಮೃಗವ್ಯಾಧಾದಿರುದ್ರರೂ ವರುಣಾದಿ ವಸುಗಳೂ ಭಾರದ್ವಾಜಾದಿ ಮಹರ್ಷಿಗಳೂ ಭೀಮಸೇನಾದಿ ಗಂಧರ್ವರೂ ಶೇಷಾದಿ ಮಹಾನಾಗ ಮುಖ್ಯರೂ ವೈನತೇಯಾದಿ ಖಚರರೂ ಮೇನಕಾದ್ಯಪ್ಸರೆಯರೂ ಅಶ್ವಿನೀ ದೇವತೆಗಳೂ ವಿಶ್ವೇ ದೇವತೆಗಳೂ' ಬಂದು ಶಿಶುವನ್ನು ಆಶೀರ್ವದಿಸಿದರು. ಇವರೆಲ್ಲರ ಆಗಮನದಿಂದ ಶತಶೃಂಗ ಪರ್ವತವು 'ಶತಧೃತಿ ಸರ್ಗದಿನದಂತೆ ತ್ರಿಭುವನ ಭೂತ ಪ್ರತತಿ ಪರಿಪೂರ್ಣ ಶೋಭಾಧೃತಿಯಿಂದ' ಶೋಭಿಸಿತು! ಸುರವಧೂಲಾಸ್ಯಗಳಾದವು. ವಿದ್ಯಾಧರರು ಪಟಹಾತೋದ್ಯಗಳನ್ನು ಬಾಜಿಸಿದರು! ಕಿನ್ನರ ಕಿಂಪುರುಷರು ಲಲಿತ ಗೀತೆಗಳನ್ನು ಹಾಡಿದರು! ವರಮುನಿಗಳು ದೇವತೆಗಳು ಎಲ್ಲರೂ ಆಶೀರ್ವಾದ ಮಾಡಿದರು.

ಪಂಪ ವರ್ಣಿಸಿದಂತೆ ಇಂದ್ರ ನಾಮಕರಣ ಮಾಡಿದ ಸುದ್ದಿ ಮಾತ್ರ ನನ್ನಯನಲ್ಲಿಲ್ಲ. ನನ್ನಯಭಟ್ಟ ವ್ಯಾಸಭಾರತದಲ್ಲಿರುವಂತೆ ಹೇಳ ಹೊರಟವನಾದುದರಿಂದ ಅವನು ತನ್ನ ಅರಸನಾದ ರಾಜರಾಜನನ್ನಾಗಲಿ ಅವನ ಬಿರುದಾವಳಿಯನ್ನಾಗಲಿ ಇಲ್ಲಿ ಬಿತ್ತರಿಸುವ ಆಗತ್ಯ ಬೀಳಲಿಲ್ಲ.

## ನಕುಲ ಸಹದೇವರು

ಮುಂದಿನ ವೃತ್ತಾಂತವನ್ನು ಪಂಪನಾಗಲಿ ನನ್ನಯನಾಗಲಿ ಹೆಚ್ಚಾಗಿ ಬೆಳಸಲಿಲ್ಲ. ಕುಂತಿಯು ಪಾಂಡುವಿನ ಸೂಚನೆಯಂತೆ ಮಾದ್ರಿಗೆ ಮಂತ್ರೋಪದೇಶ ಮಾಡಿದಳು. ಅವಳು ಅಶ್ವಿನೀ ದೇವರನ್ನು ಬೇಡಿಕೊಂಡದ್ದರಿಂದ ಅವಳಿಗೆ ಅವಳಿ ಮಕ್ಕಳು ಹುಟ್ಟಿದರು. ಪಾಂಡು ಅವರಿಗೆ ಜಾತಕರ್ಮ ನಾಮಕರಣಗಳನ್ನು ಮಾಡಿ 'ಪುತ್ರ ಸಂಪೂರ್ಣಮನೋರಥನಾಗಿ' ರ್ದನು, ಮಕ್ಕಳು ಪಾಡಿವದ ಚಂದ್ರನಂತೆ ವರ್ಧಿಸುತ್ತಿದ್ದರು. ಈ ಘಟ್ಟದಲ್ಲಿ ನನ್ನಯಭಟ್ಟನು ಕಶ್ಯಪನನ್ನು ಬರಮಾಡಿದ್ದಾನೆ. ವಸುದೇವನು ಕುಂತಿ ಮಾದ್ರಿಯರಿಗೆ ಸಂತಾನ ಲಭಿಸಿದ ವಾರ್ತೆ ಕೇಳಿ ಸಂತೋಷ ಪಟ್ಟು ತನ್ನ ಪುರೋಹಿತ ಕಶ್ಯಪನನ್ನು ಕರೆದು ಶತಶೃಂಗ ಪರ್ವತಕ್ಕೆ ಹೋಗಿ ತನ್ನ

ಭಾಗಿನೇಯರೇ ಆದ ಆ ಕುಮಾರಕರಿಗೆ 'ಅಮೇಯ ರತ್ನ ಭೂಷಾವಳಿ'ಗಳನ್ನು ಕೊಟ್ಟು ಬರುನಂತೆ ಕಳುಹಿಸಿದನು. ಆ ಕಶ್ಯಪನು ಬಂದು ಪಾಂಡವರನ್ನು ಕಂಡು ವಸುದೇವನ ಸಂದೇಶವನ್ನು ತಿಳಿಸಿ ಆ ಕುಮಾರರಿಗೆ ರತ್ನಾಭರಣಗಳನ್ನು ಕೊಟ್ಟು ಅವರಿಗೆ ಕ್ರಮವಾಗಿ ಚೌಲೋಪನಯನಾದಿಗಳನ್ನು ಒಡರಿಸಿ ವೇದಾಧ್ಯಯನ ಮಾಡಿಸುತ್ತಿದ್ದನು. ಪಂಪ ಈಗ ವಸುದೇವನ ಪ್ರಸ್ತಾಪವನ್ನೇ ಎತ್ತಿಲ್ಲ. ಇನ್ನು ಕಶ್ಯಪನು ಬಂದು ಆ ಹುಡುಗರಿಗೆ ಉಪನಯನ ಮಾಡಿಸಿದ ಸುದ್ದಿಯಾಗಲಿ ಅವರ ವೇದಾಧ್ಯಯನದ ವೃತ್ತಾಂತವಾಗಲಿ ನಮ್ಮ ಜಿನಕವಿಗೆ ಏಕೆ ಬೇಕು? ನನ್ನಯ ಭಟ್ಟ ಅದನ್ನು ಹೇಳದೆ ಬಿಡಲು ಸಾಧ್ಯವೆ? ಆ ಕ್ಷತ್ರಿಯ ಕುಮಾರರಿಗೆ ಸಕಾಲದಲ್ಲಿ ಉಪನಯನಾದಿ ಸಂಸ್ಕಾರಗಳು ನಡೆದುವೆಂಬುದೂ ಅವರು ವೇದಾಧ್ಯಯನ ಸಂಪನ್ನ ರಾದರೆಂಬುದೂ ಆ ಪರಮವೈದಿಕನಾದ ನನ್ನಯಭಟ್ಟನಿಗೆ ಮುಖ್ಯ ವಿಷಯಗಳು.

ಇದಾದ ಮೇಲೆ ಉಭಯ ಕವಿಗಳೂ ವಸಂತಋತು ವರ್ಣನೆ ಮಾಡಿ ಪಾಂಡು ತಪಸ್ವಿಜನೋಚಿತವಾದ ವ್ರತಾಚರಣೆಗಳಲ್ಲಿ ಮಗ್ನನಾಗಿದ್ದರೂ 'ಅಖಿಲಲೋಕಾನಂದ ಜನನ' ವಾದ ಆ ವಸಂತಕಾಲದ ವನಶೋಭೆಯನ್ನು ನೋಡಿ ಸಮ್ಮೋಹಗೊಂಡವನಂತೆ ವನದಲ್ಲಿ ಸಂಚರಿಸುತ್ತಿರಲು ಅವನಿಗೆ ಕ್ರೀಡಾನುಶೀಲೆಯಾದ ಮಾದ್ರಿ ಕಾಣಿಸಿದಳು. ಕುಂತಿ ಬೇರೆಲ್ಲೋ ಕೆಲಸದಲ್ಲಿದ್ದಳು. ಪಾಂಡು 'ಅಂಗಜರಾಗ ಮತ್ತ' ನಾಗಿ ತನ್ನ ಶಾಪವನ್ನು ಸ್ಮರಿಸದೆ ಮೇಲೆ ವಾಯ್ದು ಅವಳನ್ನು ಪ್ರೀತಿಯಿಂದ ಅಪ್ಪಿಕೊಂಡನು. ಅದು 'ವಿಷವಲ್ಲಿಯನಪ್ಪಿದಂತೆ' ಆಯಿತು. ನಲ್ಲಳ 'ಮೃದು ಮೃಣಾಳ ಕೋಮಳ ಬಾಹು ಪಾಶಗಳೆ ಯಮಪಾಶಂಗಳಾ' ದುವು! ಪಾಂಡುರಾಜ ಮುನಿಶಾಪೋಪಹತ ನಾಗಿ ವಿಗತಜೀವನಾದನು!

ಮುಂದೆ ಮಾದ್ರಿಯ ಸಹಗಮನವೃತ್ತಾಂತ, ಕುಂತಿ ಐವರು ಮಕ್ಕಳನ್ನೂ ಕಟ್ಟಿಕೊಂಡು ಅವರ ರಕ್ಷಣ ಶಿಕ್ಷಣಗಳಿಗಾಗಿ ಹಸ್ತಿನಾಪುರಕ್ಕೆ ಬಂದದ್ದು, ಈ ವೃತ್ತಾಂತಗಳ ವರ್ಣನೆ ಸಂಕ್ಷೇಪವಾಗಿ ಬಂದಿದೆ. ಹಸ್ತಿನಾವತಿಯಲ್ಲಿ ಭೀಷ್ಮ ಪಾಂಡುವಿಗೆ ಜಲದಾನಾದಿ ಕ್ರಿಯೆಗಳನ್ನು ನಿರ್ವರ್ತಿಸಿ 'ಅಯ್ವರ್ಕೂಸುಗಳುಮಂ ತನ್ನ ತೊಡೆಯೆ ತೊಟ್ಟಿಲಾಗೆ ನಡಪುತ್ತ'ಲಿದ್ದನೆಂದು ಪಂಪ ಈ ಪ್ರಕರಣಕ್ಕೆ ಮುಕ್ತಾಯ ಹೇಳಿದ್ದಾನೆ. ನನ್ನಯ ಕುಂತಿಯೊಡನೆ ಅನೇಕ ಮುನಿಗಳು ಶತಶೃಂಗದಿಂದ ಬಂದು ಭೀಷ್ಮರಿಗೆ ಆಕೆಯನ್ನೂ ಆಕೆಯ ಮಕ್ಕಳನ್ನೂ ಒಪ್ಪಿಸಿ ಮಾದ್ರೀದೇವಿ ಪಾಂಡುರಾಜರ ಮರಣ ವೃತ್ತಾಂತವನ್ನು ತಿಳಿಸಿ ಹೊರಟು ಹೋದರೆಂದೂ ಹೇಳಿ ಪಾಂಡುವಿಗೆ ನಡೆದ ಶ್ರಾದ್ಧ ಕರ್ಮವನ್ನು ವರ್ಣಿಸಿದ್ದಾನೆ.

## ಕುಮಾರ ಕ್ರೀಡೆ

ಭೀಷ್ಮನ ಪೋಷಣೆಯಲ್ಲಿ ದುರ್ಯೋಧನಾದಿ ನೂರ್ವರೂ ಧರ್ಮಪುತ್ರಾದಿ ಗಳೈವರೂ 'ಸಹಪಾಂಸು ಕ್ರೀಡಿತರಾಗಿ' ಸುಖಿಗಳಾಗಿ ಬೆಳೆದರು. ಆಟದಲ್ಲಿ

ಆಗಾಗ ಭೀಮಸೇನನ ಬಾಹುಬಲ ಪ್ರಕಾಶಕ್ಕೆ ಬರುತ್ತಿತ್ತು. ಒಮ್ಮೆ ಮರ ಕೋತಿಯಾಡುತ್ತ ಕೌರವರೆಲ್ಲ ಭೀಮನಿಗೆ ಕಾಣಿಸದ ಹಾಗೆ ಒಂದು ದೊಡ್ಡ ಆಲದ ಮರವೇರಿ ಕುಳಿತು ಅವನ ಮೇಲೆ ಕೊಂಬೆ ಕಡ್ಡಿ ಎಸೆದು ಕೀಟಲೆ ಮಾಡಿದರು. ಹುಡುಗನಾದ ಭೀಮ ಸಿಟ್ಟನಿಂದ ಆ ಮರದ ಬುಡವನ್ನು ಅಲ್ಲಾಡಿಸಲು ಮೇಲಿದ್ದ ಕೌರವರೆಲ್ಲ ಗಿಡದ ಹಣ್ಣುಗಳು ಉದುರುವ ಹಾಗೆ ಉದುರಿ ಬಿದ್ದರೆಂದು ಪಂಪ ವರ್ಣಿಸಿದ್ದಾನೆ. ಮುಂದೆ ಮಹಾಭಾರತ ಯುದ್ಧದಲ್ಲಿ ಭೀಮ ವಹಿಸುವ ಪಾತ್ರದ ಒಂದು ಪೂರ್ವಾಭ್ಯಾಸದಂತೆ ತೋರುವ ಘಟನೆ ಇದು. ಆದರೆ ಆಗ ಭೀಮಸಿಗಾಗಲಿ ಕೌರವರಿಗಾಗಲಿ ಅಂಥ ದುರ್ಭಾವನೆ ಇರಲಿಲ್ಲ. ಅದು ಬರಿಯ ಮಕ್ಕಳ ಜಗಳ. ಆದರೆ ಪುನಃ ಪುನಃ ಭೀಮನ ಬಲಪ್ರದರ್ಶನದಿಂದ ನೊಂದು ದುರ್ಯೋಧನಾದಿಗಳು ಅವನ ಮೇಲೆ ಕೋಪ ಮಸೆದರು. ಒಮ್ಮೆ ನಿದ್ರಿತನಾದ ಭೀಮನನ್ನು ಕಟ್ಟಿ ಮಡುವಿನಲ್ಲದ್ದಿದರು. ಇನ್ನೊಮ್ಮೆ ಹಾವುಗಳಿಂದ ಕಚ್ಚಿಸಿದರು. ಆದರೆ ಇದಾವುದರಿಂದಲೂ ಭೀಮ ಸಾಯಲಿಲ್ಲ, ಸೋಲಲಿಲ್ಲ. ಅವನು ಕೌರವರು ಮಾಡಿದ ದುಶ್ಚೇಷ್ಟೆಗಳನ್ನೆಲ್ಲ ನಿಗ್ರಹಿಸಿಕೊಂಡು ಬಲಿಷ್ಠನಾಗಿ ಮೆರೆದನು. ಕೌರವರು ಮನಸ್ಸಿನಲ್ಲಿ ದ್ವೇಷಭಾವನೆಗೆಡೆಗೊಟ್ಟರು. ‘ ಗೆಲಲಾಱದೆ ಮನಮಿಕ್ಕಿಯು ಮೆರ್ದೆಯಿಕ್ಕಿಯುಮಿರ್ದರ್ ’.

ಪಂಪ ಈ ಮಕ್ಕಳ ಜಗಳ ವಿರಸದಲ್ಲಿ ಪರ್ಯವಸಾನವಾಗಿ ಭೀಮನನ್ನು ನಿಗ್ರಹಿಸಲಾಗದೆ ದುರ್ಯೋಧನಾದಿಗಳು ಮನಸ್ಸಿನಲ್ಲಿಯೇ ಅಸೂಯೆಯನ್ನು ಬೆಳೆಸಿಕೊಂಡಿದ್ದರೆಂದಿಷ್ಟೇ ಹೇಳಿದರೆ ನನ್ನಯ ಇನ್ನು ಕೊಂಚ ಮುಂದೆ ಹೋಗಿ ದುರ್ಯೋಧನನು ಶಕುನಿ ದುಶ್ಶಾಸನರೊಡನೆ ಮಂತ್ರಾಲೋಚನೆ ಮಾಡಿ ‘ ಮದೋದ್ಧತನಾದ ಮಧ್ಯಮನನ್ನು ಕೊಂದು ಅಸಕ್ತನಾದ ಧರ್ಮಜನನ್ನು ಬಂಧಿಸಿ ನಾನು ಅಪಾಂಡವವಾದ ಅಖಿಲಕ್ಷೋಣಿಯನ್ನೂ ಆಳುತ್ತೇನೆ ’[1] ಎಂದು ನಿರ್ಣಯಿಸಿಕೊಂಡನೆಂದು ಹೇಳುತ್ತಾನೆ. ಇಂಥ ಪಾಪ ಬುದ್ಧಿಯಿಂದ ದುರ್ಯೋಧನನು ಭೀಷ್ಮ ವಿದುರಾದಿಗಳಿಗೆ ತಿಳಿಯದ ಹಾಗೆ ಭೀಮನನ್ನು ಅಪಾಯಕ್ಕೀಡು ಮಾಡಲು ನಾನಾ ಪ್ರಯತ್ನಗಳನ್ನು ಮಾಡಿ ವಿಫಲನಾದನು. ಆದರೆ ಹಾಗೆ ವಿಫಲನಾದಂತೆಲ್ಲ ಅವನ ಅಸೂಯೆ, ಕ್ರೋಧ ಹೆಚ್ಚುತ್ತಿತ್ತು.

ಹೀಗಿರುವಾಗ ಕೃಪಾಚಾರ್ಯನ ಬಳಿ ಕೌರವ ಪಾಂಡವರನ್ನು ವಿದ್ಯಾಭ್ಯಾಸಕ್ಕೆ ತೊಡಗಿಸಿ ಭೀಷ್ಮ ಅವರ ಶಿಕ್ಷಣಕ್ಕೆ ಸೂಕ್ತ ವ್ಯವಸ್ಥೆ ಮಾಡಿದನು. ಈ ಸಂದರ್ಭದಲ್ಲಿ ಪಂಪ ನನ್ನಯರಿಬ್ಬರೂ ಕೃಪಾಚಾರ್ಯನ ಜನ್ಮ ಕಥೆಯನ್ನು ಸಂಗ್ರಹವಾಗಿಯೇ ಹೇಳಿದ್ದಾರೆ. ಕೃಪನ ಶಿಕ್ಷಣದಲ್ಲಿ ಕುಮಾರರೆಲ್ಲ ಧನುರ್ವೇದ ವಿಶಾರದರಾದರು. ಪಂಪನ ಪ್ರಕಾರ ಧನುರ್ವಿದ್ಯೆಯೇ ಅಲ್ಲದೆ ಕಾವ್ಯನಾಟಕಾಲಂಕಾರಾದಿ

---

1 ಆದಿಪರ್ವ 5–168

ವಿವಿಧ ವಿದ್ಯೆಗಳನ್ನೂ ಅವರು ಕಲಿತರು. ಒಬ್ಬೊಬ್ಬರು ಒಂದೊಂದು ವಿದ್ಯೆಯಲ್ಲಿ ಪರಿಣತರಾದರಂತೆ. ಭೀಮಸೇನ ವ್ಯಾಕರಣದಲ್ಲಿ ನಿಷ್ಣಾತ. ಸಹದೇವನಿಗೆ ಜ್ಯೋತಿಷ್ಯ ದಲ್ಲಿ ಪರಿಣತಿ! ನನ್ನಯ ಈ ವಿಷಯಗಳನ್ನೆಲ್ಲ ಹೇಳಹೊರಡದೆ 'ಪಾಂಡವ ಧೃತರಾಷ್ಟ್ರಾತ್ಮಜರಾದಿಯಾಗಿ ರಾಜಪುತ್ರರು ಕೃಪನ ಶಿಕ್ಷಣದಲ್ಲಿ ಧನುರ್ವೇದ ವಿಶಾರದ ರಾದರು' ಎಂದು ಒಂದು ಮಾತಿನಲ್ಲಿ ಹೇಳಿ ಮುಗಿಸಿದ್ದಾನೆ.[2]

## ದ್ರೋಣ ವೃತ್ತಾಂತ

ಭಾರದ್ವಾಜಮುನಿಯು ಒಮ್ಮೆ ಗಂಗಾಸ್ನಾನಕ್ಕೆ ಹೋಗಿದ್ದಾಗ ಅಲ್ಲಿ ಸ್ನಾನಾರ್ಥ ವಾಗಿ ವಿವಸ್ತ್ರೆಯಾಗಿದ್ದ ಅಪ್ಸರ ಸ್ತ್ರೀಯೊಬ್ಬಳನ್ನು ಕಾಣಲು 'ಕಂತು ಶರಪರ ವಶನಾಗಿ ಧೈರ್ಯಕ್ಷರಣೆಯುಮಿಂದ್ರಿಯಕ್ಷರಣೆಯುಮೊಡನೊಡನಾಗೆ' ಅದು ದ್ರೋಣದಲ್ಲಿ ಬಿದ್ದು ತಕ್ಷಣ ಒಂದು ಶಿಶು ಹುಟ್ಟಿತು! ಅವನೇ ದ್ರೋಣ. ಅವನನ್ನು ಮುನಿಯು ತನ್ನ ಗೆಳೆಯನಾದ ಪಾಂಚಾಲರಾಜ ಪೃಷತನ ಮಗನಾದ ದ್ರುಪದನೊಡನೆ ಯಜ್ಞಸೇನನೆಂಬ ಬ್ರಹ್ಮಋಷಿಯ ಬಳಿ ಧನುರ್ವಿದ್ಯೆಯನ್ನು ಕಲಿಯಲು ಬಿಟ್ಟನೆಂದು ಪಂಪ ಹೇಳಿದ್ದಾನೆ.

ಇಲ್ಲಿ ದ್ರುಪದ ಪಾಂಚಾಲ ರಾಜ್ಯಬಿಟ್ಟು ಭರದ್ವಾಜನ ಬಳಿಗೇಕೆ ಬಂದನೆಂಬುದು ತಿಳಿಯುವುದಿಲ್ಲ. ಭರದ್ವಾಜನೇ ಅವನ ವಿದ್ಯಾಭ್ಯಾಸಕ್ಕೆ ವ್ಯವಸ್ಥೆ ಮಾಡುವುದಕ್ಕೆ ಕಾರಣವೇನೆಂಬುದೂ ತಿಳಿಯುವುದಿಲ್ಲ. ನನ್ನಯ ಭಟ್ಟ ಈ ವಿಷಯದಲ್ಲಿ ಕೆಲವು ವಿವರಗಳನ್ನು ನೀಡಿದ್ದಾನೆ. ಪಾಂಚಾಲಪತಿಯಾದ ಪೃಷತನು ಭರದ್ವಾಜನಿಗೆ ಸ್ನೇಹಿತ. ಅವನು ಘೋರವಾದ ತಪಸ್ಸಿನಲ್ಲಿ ತೊಡಗಿದ್ದು ಒಂದು ದಿನ 'ವಾಸಂತಿಕಾ ಕುಸುಮಾಪಚಯ ವಿನೋದದಲ್ಲಿದ್ದ ಮೇನಕೆಯೆಂಬ ಅಪ್ಸರೆಯನ್ನು ನೋಡಿ ಮದನರಾಗವಶದಿಂದ ಇಂದ್ರಿಯಕ್ಷರಣೆಯಾಗಲು ಅದನ್ನು ತನ್ನ ಪಾದದಿಂದ ಮರೆ ಮಾಡಿದನು. ಅದರಲ್ಲಿ ಮರುದಂಶದಿಂದ ದ್ರುಪದನೆಂಬ ಮಗ ಹುಟ್ಟಿದನು. ಅವನನ್ನು ಪೃಷತನು ಭರದ್ವಾಜಾಶ್ರಮದಲ್ಲಿಟ್ಟು ಪಾಂಚಾಲ ದೇಶಕ್ಕೆ ಹೋಗಿ ಅಲ್ಲಿ ರಾಜ್ಯಭಾರ ನಡೆಸುತ್ತಿದ್ದನಂತೆ. ಆದ್ದರಿಂದ ದ್ರುಪದ ಭರದ್ವಾಜನ ರಕ್ಷಣೆಯಲ್ಲಿಯೇ ಬೆಳೆದು ಅವನ ಏರ್ಪಾಟಿನಂತೆ ಯಜ್ಞಸೇನನ ಬಳಿ ವಿದ್ಯಾರ್ಜನೆ ಮಾಡಬೇಕಾಯಿತು. ಗುರುಕಟಾಕ್ಷದಿಂದ ದ್ರುಪದ ದ್ರೋಣರಿಬ್ಬರೂ ಉತ್ತಮ ಧನುರ್ಧರರಾದರು.

ಭರದ್ವಾಜಮುನಿಯು ಅಯೋನಿಜನಾದ ತನ್ನ ಮಗನಿಗೆ ಕೃಪನ ತಂಗಿ ಶಾರದ್ವತೆಯನ್ನು ತಂದು ಮದುವೆ ಮಾಡಿದನು. ಆ ದಂಪತಿಗಳಿಗೆ ತ್ರಿಣೇತ್ರನ ಅಂಶದಿಂದ ಅಶ್ವತ್ಥಾಮನೆಂಬ ಮಹಾ ಬಲಶಾಲಿಯಾದ ಮಗನು ಹುಟ್ಟಿದನು. ಎಳೆಯನಾಗಿರುವಾಗಲೇ ಅವನು ತನ್ನ ತಂದೆಯ ಉಪದೇಶ ಮಹಿಮೆಯಿಂದ ಬಿಲ್ಲ

---

2 ಆದಿ 5–192

ವಿದ್ಯೆಯನ್ನು ಕಲಿತು ಧನುರ್ಧರರಲ್ಲಿ ಅಗ್ರಗಣ್ಯನೆನಿಸಿದನು. ತಂದೆ ಮಕ್ಕಳಿಬ್ಬರೂ ಶಸ್ತ್ರಪಾರಂಗತರಾದರೂ ಅವರನ್ನು ಬಡತನ ಪೀಡಿಸುತ್ತಿತ್ತು. ವಿಧಿಯಿಲ್ಲದೆ ಅವರು ಹಲವು ನಾಡುಗಳಲ್ಲಿ ತೊಳಲಬೇಕಾಯಿತು. ಆದರೂ ಅವರಿಗೆ ಎಲ್ಲಿಯೂ ಆಶ್ರಯ ಲಭಿಸಲಿಲ್ಲ; ಜೀವನೋಪಾಯ ಸಿದ್ಧಿಸಲಿಲ್ಲ. ಕಡೆಗೆ ಅವರು ಪರಶುರಾಮನಲ್ಲಿಗೆ ಹೋದರು. ಆ ಮಹಾತ್ಮನು ಆಗ ಸರ್ವನಿವೇದಕವೆಂಬ ಯಜ್ಞವನ್ನು ಕೈಕೊಂಡಿದ್ದ ನೆಂದು ದ್ರೋಣನಿಗೆ ತಿಳಿದಿತ್ತು. ಯಾಗಕಾಲದಲ್ಲಿ ಹೋಗಿ ಬೇಡಿದರೆ ತನ್ನ ಬಡತನ ವನ್ನು ಆತನು ಬಗೆಹರಿಸಬಹುದೆಂಬ ಹಿರಿಯಾಸೆಯನ್ನಿಟ್ಟುಕೊಂಡು ದ್ರೋಣ ಅಲ್ಲಿಗೆ ಹೊರಟನು.

'ಪಾಪಿ ಸಮುದ್ರಕ್ಕೆ ಹೋದರೂ ಅಂಗಾಲು ತೇವವಾಗಲಿಲ್ಲ' ಎಂಬ ಗಾದೆಯಂತೆ ಆಯಿತು ದ್ರೋಣನ ಕಥೆ. ಅವನು ಪರಶುರಾಮನ ಯಜ್ಞಶಾಲೆಯನ್ನು ಪ್ರವೇಶಿಸುವ ಹೊತ್ತಿಗೆ ಆ ಯಾಗ ಮುಗಿದು ಸಮಸ್ತ ಐಶ್ವರ್ಯವನ್ನೂ ದಾನಮಾಡಿ ಸಮುದ್ರಮುದ್ರಿತ ಧರಾಮಂಡಲವನ್ನೇ ಅವನು ತನ್ನ ಗುರುವಾದ ಕಶ್ಯಪ ಪ್ರಜಾಪತಿಗೆ ಗುರುದಕ್ಷಿಣೆಯಾಗಿ ಸಮರ್ಪಿಸಿ ತಪಸ್ಸಿಗೆ ಹೊರಡುವುದರಲ್ಲಿದ್ದನು. ಆ ಸಮಯದಲ್ಲಿ ಕುಂಭಸಂಭವನು ಅವನಲ್ಲಿ ಧನಾರ್ಥಿಯಾಗಿ ಹೋಗಬೇಕೆ? ಪರಶುರಾಮನಿಗೆ ಬಹಳ ವ್ಯಥೆಯಾಯಿತು. ಶ್ರುತಪಾರಗನಾದ ಬ್ರಾಹ್ಮಣೋತ್ತಮನು ಅರ್ಥಿಯಾಗಿ ಬಂದಾಗ ಕೊಡಲು ತನ್ನಲ್ಲಿ ಏನೂ ಇಲ್ಲದೆ ಹೋಯಿತಲ್ಲಾ ಎಂದು ಅವನು ಮರುಗಿದನು. ಆದರೆ ಆತನು ಕಾರ್ಯಶೂರನು. ಬರಿಯ ಮರುಕ ತೋರಿ ತೃಪ್ತ ನಾಗದೆ ದ್ರೋಣನನ್ನು ಸ್ವಾಗತಿಸಿ ಕನಕಪಾತ್ರೆಯಿಲ್ಲದ್ದರಿಂದ ಮೃತ್ಪಾತ್ರೆಯಲ್ಲಿ ನೀರು ತಂದು ಅರ್ಘ್ಯಪಾದ್ಯಾದಿಗಳನ್ನು ನೀಡಿ ಸತ್ಕರಿಸಿದನು. ಬಹಳ ಆಸೆಯಿಟ್ಟುಕೊಂಡು ಬಂದಿದ್ದ ಅರ್ಥಿ ದ್ರೋಣನಿಗೆ ಆ ಮಣ್ಣಿನ ಪಾತ್ರೆಗಳನ್ನು ನೋಡಿಯೇ ಎದೆಗುಂದಿತು. ಅತ್ಯಂತ ನಿರಾಸೆಯಾಯಿತು. ಆದರೆ ಪರಶುರಾಮ ಬರಿಯ ಬಾಯುಪಚಾರದಲ್ಲಿ ಹೊತ್ತು ಕಳೆಯದೆ ತನ್ನ ಸಂಕಲ್ಪವನ್ನು ಹೀಗೆ ವಿವರಿಸಿದನು: 'ನನ್ನಲ್ಲಿದ್ದ ಹಣವನ್ನೆಲ್ಲ ಯಾಚಕರಿಗೆ ಕೊಟ್ಟೆನು. ಭೂಮಿಯನ್ನೆಲ್ಲ ಗುರುವಿಗೆ ಕೊಟ್ಟೆನು. ಈಗ ನನ್ನಲ್ಲಿ ಒಂದು ಅಡಕೆಯೂ ಇಲ್ಲ. ಆದರೆ ಶ್ರುತಪಾರಗನಾದ ನಿನ್ನನ್ನು ಬರಿಗೈಯಲ್ಲಿ ಹಿಂತಿರುಗಿಸುವುದು ನನಗೆ ಇಷ್ಟವಿಲ್ಲ. ಇಗೋ ಈ ಧನುಸ್ಸು ಇದೆ. ದಿವ್ಯ ಶರಾವಳಿ ಇದೆ. ಅಷ್ಟೇ ಹೊರತು ಧನವಿಲ್ಲ. ಇವುಗಳಲ್ಲಿ ನಿನಗೆ ಯಾವುದು ಬೇಕೋ ಅದನ್ನು ಆರಿಸಿಕೊ, ಅದನ್ನು ಒಡನೆಯೇ ಕೊಡುತ್ತೇನೆ[1]' ಎಂದು ಆಯ್ಕೆಯ ಹೊಣೆಯನ್ನು ಅರ್ಥಿಗೇ ಹೊರಿಸಿದನು. ದ್ರೋಣ ವಿದ್ಯಾಧನವೇ ಧನವೆಂದು ನಂಬಿದವನು. ಅವನು ದಿವ್ಯಶರಾವಳಿಯನ್ನೇ ಆರಿಸಿಕೊಂಡನು. ಕೊಂಚವೂ ತಡಮಾಡದೆ ಭಾರ್ಗವ ರಾಮನು ದ್ರೋಣನಿಗೆ ವಾರುಣ ವಾಯವ್ಯಾಗ್ನೇಯ ಪೌರಂದರಾದಿ ಪ್ರಧಾನಾಸ್ತ್ರ

---

1 ಪಂಪಭಾರತ II–46.

ಗಳನ್ನು ಮಂತ್ರೋಪದೇಶ ಪುರಸ್ಸರವಾಗಿ ಕೊಟ್ಟುಬಿಟ್ಟನು. ದ್ರೋಣನಿಗೆ ವಿದ್ಯಾ ಸಂಪತ್ತು ವೃದ್ಧಿಯಾಯಿತು. ಅರ್ಥಲಾಭವಾಗಲಿಲ್ಲ. ಅವನ ಬಡತನ ನೀಗಲಿಲ್ಲ. ಆಗ ದ್ರೋಣನಿಗೆ ತನ್ನ ಹಳೆಯ ಗೆಳೆಯ, ಬಾಲ್ಯದ ಒಡನಾಡಿ, ತನ್ನ ಸಹಾಧ್ಯಾಯಿ ದ್ರುಪದನ ನೆನಪಾಯಿತು. ಅವನು ಆಗ ಛತ್ರಾವತಿಯಲ್ಲಿ ರಾಜನಾಗಿದ್ದನೆಂದು ತಿಳಿಯಿತು. ಅವನಲ್ಲಿಗೆ ಹೋದರೆ ತನಗೆ ಸಹಾಯ ಲಭಿಸಬಹುದೆಂದು ಆಸೆಪಟ್ಟು ದ್ರೋಣನು ಪುತ್ರ ಸಮೇತನಾಗಿ ಪಾಂಚಾಲ ರಾಜಧಾನಿಗೆ ಹೊರಟನು.

ರಾಜಸಂದರ್ಶನ ಸುಲಭವಾಗಿ ಲಭಿಸುವುದೇ ? ಬಡವನಿಗೆ ಅರಮನೆಯ ದ್ವಾರಪಾಲಕರು ಮನ್ನಣೆ ಕೊಡುವರೆ ? ಆದರೆ ವೈದಿಕ ಬ್ರಾಹ್ಮಣನಾದ ದ್ರೋಣ ಇದೊಂದನ್ನೂ ಯೋಚಿಸದೆ ತನ್ನ ಬಾಲ್ಯದ ಗೆಳೆಯನೆಂದಿಷ್ಟೇ ಬಗೆದು ನೇರವಾಗಿ ದ್ರುಪದನ ಅರಮನೆಯ ಹೆಬ್ಬಾಗಿಲಿಗೆ ಹೋಗಿ ದ್ವಾರಪಾಲಕನನ್ನು ಕರೆದು 'ನಿಮ್ಮೊಡ ನಾಡಿದ ಕೆಳೆಯಂ ದ್ರೋಣನೆಂಬ ಪಾರ್ವಂ ಬಂದನೆಂದು ನಿಮ್ಮರಸಂಗಱಿಯೆ ಪೇೞ್' ಎಂದು ಆಜ್ಞಾಪಿಸಿದನು.

ಬಹುಶಃ ಆ ಬಾಗಿಲವನು ದ್ರೋಣನ ಆಕಾರವೈಭವ, ಅವನ ಕೈಯ ಧನುರ್ಬಾಣಗಳು, ಜತೆಯಲ್ಲಿದ್ದ ಅಶ್ವತ್ಥಾಮನ ಮುಖ ವರ್ಚಸ್ಸು, ಮುಂತಾದು ವನ್ನೆಲ್ಲ ಗಮನಿಸಿ ಭೀತನಾದನೆಂದು ತೋರುತ್ತದೆ. ಅವನು ಬದಲು ಮಾತನಾಡದೆ ರಾಜನ ಆಸ್ಥಾನವನ್ನು ಪ್ರವೇಶಿಸಿ ದ್ರೋಣನ ಮಾತನ್ನು ಯಥಾವತ್ತಾಗಿ ನಿವೇದಿಸಿ ದನು. ಆದರೆ ದ್ರುಪದನಿಗೆ ಆಗ ತನ್ನ ಬಾಲ್ಯದ ಗೆಳೆಯನ ಅಗತ್ಯವಿರಲಿಲ್ಲ. ಅವನು 'ರಾಜ್ಯ ಮದಿರಾಮದೋನ್ಮತ್ತನುಂ ಗರ್ವಗ್ರಹ ವ್ಯಗ್ರಚಿತ್ತನುಂ' ಆಗಿದ್ದನು. ಅವನು ಪ್ರತೀಹಾರಿಯ ಮಾತಿಗೆ ಹೆಚ್ಚು ಗಮನವನ್ನೇ ಕೊಡದೆ 'ನನಗೆ ಅಂಥ ಕೆಳೆಯನಾರೂ ಇಲ್ಲ. ದ್ರೋಣನೆಂಬುವನನ್ನು ನಾನು ಅರಿಯೆ. ಅವನನ್ನು ಆಚೆ ನೂಕು' ಎಂದು ಆಜ್ಞಾಪಿಸಿದನು. ಪಾಪ ! ಆ ದ್ವಾರಪಾಲಕ ನೇನು ಮಾಡಬೇಕು ? ಅವನು ಹಿಂತಿರುಗಿ ಬಂದು ದ್ರೋಣನಿಗೆ ಎಲ್ಲವನ್ನೂ ವಿನಯದಿಂದ ವರದಿ ಮಾಡಿದನು.

ದ್ರೋಣ ಶ್ರುತಪಾರಗನಾದ ಬ್ರಾಹ್ಮಣನೇ ಆದರೂ ಅವನು ಧನುರ್ಧರಾಗ್ರಣಿ. ಪರಶುರಾಮನಿಂದ ಮಂತ್ರಾಸ್ತ್ರಗಳನ್ನು ಪಡೆದ ಪುಣ್ಯಶಾಲಿ. ದ್ರುಪದನ ಈ ದುರ್ವರ್ತನೆ ಅವನಿಗೆ ಸಹಿಸಲಿಲ್ಲ. ಅವನು ವಿಶೇಷವಾಗಿ ಕೋಪಗೊಂಡನು. ಆಳಿನ ಕೈಲಿ ನೂಕಿಸಿಕೊಂಡು ಹೋಗುವ ಅಶಕ್ತತೆ ದ್ರೋಣನಿಗಿರಲಿಲ್ಲ. ಅವನು 'ಒತ್ತಂಬದಿಂದೊಳಗಂ ಪೊಕ್ಕು ದ್ರುಪದನಂ ಕಂಡನ್ !' ದ್ರುಪದ ಬೇರೇನೂ ದಾರಿಯಿಲ್ಲದೆ ಅಸಹಾಯನಾಗಿ ದ್ರೋಣನನ್ನು ಕಾಣಲೇಬೇಕಾಯಿತು ; ಅವನ ಮಾತುಗಳನ್ನು ಕೇಳಲೇಬೇಕಾಯಿತು !

ದ್ರೋಣ ಬಿರುಸಿನಿಂದ ರಾಜಾಸ್ಥಾನವನ್ನು ಪ್ರವೇಶಿಸಿ 'ಅಱಿಯಿರೆ ನೀಮುಮಾಮುಮೊಡನೋದಿದೆವೆಂಬುದನಣ್ಣ ?' ಎಂದು ದ್ರುಪದನನ್ನು

ಪ್ರಶ್ನಿಸಿದನು. ಅರಸನಿಗೆ ಮುಖ ಕಪ್ಪಿಟ್ಟಿತು. ಆದರೂ ಅವನು ಲಜ್ಜೆಗೆಟ್ಟು 'ನಾನಱಿಯೆ' ಎಂದನು. ಅಲ್ಲಿಗೆ ನಿಲ್ಲದೆ ಅವನು 'ಮಹೀಪತಿಗಂ ದ್ವಿಜವಂಶಜಂಗ ಮೇತಱ ಕೆಳೆ? ಇಂತು ನಾಣಿಲಿಗರಪ್ಪರೆ ಮಾನಸರ್?' ಎಂದು ಹೀನಾಯವಾಗಿ ಮಾತನಾಡಿ ದ್ರೋಣನನ್ನು ಅಪಮಾನಪಡಿಸಿದನು. ಇನ್ನೂ ಮುಂದುವರಿದು ಅವನು 'ಈ ನಾಣಿಲಿ ಪಾರ್ವನನ್ ಎೞೆದು ಕಳೆಯಿಂ' ಎಂದು ಸೇವಕರಿಗೆ ಆಜ್ಞಾಪಿಸಿದನು.

ದ್ರುಪದನ ಈ ವರ್ತನೆಯಿಂದ ದ್ರೋಣ ಬಹಳ ನೊಂದುಕೊಂಡನಾದರೂ ಏನೂ ಮಾಡಲಾರದವನಾದನು. ಎಷ್ಟೇ ಶಸ್ತ್ರಕುಶಲನಾದರೂ ತಾನು ಒಬ್ಬ! ಅಶ್ವತ್ಥಾಮನು ಜತೆಗಿದ್ದರೂ ಅವನು ಹುಡುಗ. ಅಥವಾ ತನ್ನ ಸಹಾಧ್ಯಾಯಿ ಅವಿವೇಕವಾಗಿ ನಡೆದುಕೊಂಡರೂ ಅವನನ್ನು ಒಡನೆಯೇ ದಂಡಿಸಲು ಮನಸ್ಸು ಬರಲಿಲ್ಲವೋ? ಅಥವಾ ಪರಶುರಾಮನ ಕೃಪೆಗೆ ಪಾತ್ರನಾಗಿ ಅನೇಕ ದಿವ್ಯಾಸ್ತ್ರಗಳನ್ನು ಪಡೆದು ಬಂದ ತಾನು ಈ ಕ್ಷುದ್ರನ ಮೇಲೆ ಸ್ವಯಂ ಯುದ್ಧ ಮಾಡುವುದು ತನ್ನ ಗೌರವ ಪ್ರತಿಷ್ಠೆಗಳಿಗೆ ಕುಂದೆಂದು ಭಾವಿಸಿದನೋ! ಅಂತು ಆಗ ಅವನು ದ್ರುಪದನ ಮೇಲೆ ಕೈ ಮಾಡಲಿಲ್ಲ. ಅವನು ದ್ರುಪದನನ್ನು ಕುರಿತು ಒಂದು ಲೋಕೋತ್ತರವಾದ ಮಾತನ್ನು ಹೇಳಿದನು.

> ನುಡಿ ತಡವಪ್ಪುದೊಂದು ಮೊಗದೊಳ್ ಮುಱುಕಂ ದೊರೆಕೊಳ್ವುದೊಂದು ನಾ
> ಣ್ಗೆಡೆಗುಡದಿರ್ಪುದೊಂದು ನುಡಿಗಳ್ ಪೊಱಿಯಂ ಮಱೆಯಿಪ್ಪುದೊಂದು ಕ
> ಳ್ಗುಡಿದವರಂದಮಿಂತು ಸಿರಿ ಸಾರ್ತರೆ ಸಾರ್ವುದದರ್ಕೆ ಸಂದೆಯಂ
> ಬಡದೆ ಜಲಕ್ಕನೀಗಳಱಿದೆಂ ಸಿರಿ ಕಳ್ಗೊಡವುಟ್ಟಿತೆಂಬುದಂ
>
> (ಪಂಪ ಭಾರತ II-49.)

ಕ್ಷೀರ ಸಾಗರವನ್ನು ಮಥನ ಮಾಡಿದಾಗ ತಾನೆ ಲಕ್ಷ್ಮಿ ಹುಟ್ಟಿದ್ದು? ಅದೇ ಸಮಯದಲ್ಲಿಯೇ ಮದ್ಯವೂ ಹುಟ್ಟಿತು. ಆದುದರಿಂದ ಹೆಂಡ ಲಕ್ಷ್ಮಿ ಇಬ್ಬರೂ ಏಕೋದರರು! ಹೀಗೆ ದ್ರೋಣ ದ್ರುಪದನನ್ನು ಛೀಮಾರಿ ಹಾಕಿ ರಾಜಪದವಿಯಿಂದ ಅವನು ಗರ್ವಗ್ರಹಪೀಡಿತನಾಗಿರುವನೆಂದು ಹೇಳಿ ಹಂಗಿಸಿ 'ಆಂಬರಮುಂಟೆ ನಿನ್ನದೊಂದಳವು?' ಎಂದು ಗರ್ಜಿಸಿ ದ್ರುಪದನನ್ನು ಹೀನಬಲನೆಂದು ಹೀಯಾಳಿಸಿದನು. ಅಷ್ಟಕ್ಕೆ ಸಂತುಷ್ಟನಾಗದೆ ಆ ಬ್ರಾಹ್ಮಣನು 'ನೀನು ನನ್ನೊಡನೆ ಓದಿದವನೆಂಬ ಅಭಿಮಾನ ನಿಮಿತ್ತದಿಂದ ನಿನ್ನನ್ನು ಕೊಲ್ಲಲು ನನ್ನ ಮನಸ್ಸು ಒಪ್ಪದು. ಆದರೆ ಈ ಸಭಾಮಂಡಲದಲ್ಲಿ ನೀನು ನನ್ನನ್ನು ಅಪಮಾನಪಡಿಸಿದ್ದೀಯೆ. ನಿನ್ನನ್ನು ಅನಾಯಾಸವಾಗಿ ನನ್ನ ಶಿಷ್ಯರಿಂದ ಸೆರೆಹಿಡಿಸದಿದ್ದರೆ ನಾನೇಕಾದೇನು?' ಎಂದು ಪ್ರತಿಜ್ಞೆ ಮಾಡಿ ಹೊರಟುಬಿಟ್ಟನು.

ದ್ರೋಣ ದ್ರುಪದನನ್ನು ಹೀಯಾಳಿಸಿದ್ದರೆ ಅದು ಅಷ್ಟು ದೊಡ್ಡ ವಿಚಾರವಲ್ಲ. ಆ ಮಹಾನುಭಾವನು ರಾಜನ ದುರಹಂಕಾರಕ್ಕೆ ರೋಸಿ ಹಾಗೆ ಕ್ರೂರವಾಕ್ಯಗಳ

ನ್ನಾಡಿದ್ದರೂ ಪಂಪ ಮಹಾಕವಿಯು ರಾಜನಿಂದಾತ್ಮಕವಾದ ಈ ಮಾತುಗಳನ್ನು ದ್ರೋಣನ ಬಾಯಲ್ಲಿ ಹೇಳಿಸಿರುವುದು ಬಹಳ ಸ್ವಾರಸ್ಯವಾದ ವಿಚಾರ. ಏಕೆಂದರೆ ಪಂಪನು ರಾಜಾಶ್ರಿತನಾದ ಆಸ್ಥಾನ ಕವಿ. ಅರಿಕೇಸರಿ ಮಹಾರಾಜನು ಅವನಿಗೆ ಬೇಕುಬೇಕಾದ ಮನ್ನಣೆಗಳನ್ನು ಮಾಡಿ ಒಂದು ಅಗ್ರಹಾರವನ್ನೇ ಕೊಟ್ಟಿದ್ದನು. ಪಂಪ ಅರಸನ ಆಶ್ರಿತ ಕವಿಯಷ್ಟೇ ಅಲ್ಲದೆ ಅವನಿಗಾಗಿ ರಣದಲ್ಲಿ ಹೋರಾಡಿ ಶತ್ರುವಧೆ ಮಾಡಿದ ಕಲಿ. ಅರಿಕೇಸರಿಯ ಮೇಲೆ ಅವನಿಗೆ ಬಹಳ ಮೆಚ್ಚಿಗೆ. ಆದ್ದರಿಂದಲೇ ಅವನು ಭಾರತವನ್ನು ಬರೆಯ ಹೊರಟು ಅದಕ್ಕೆ ಅರ್ಜುನನನ್ನೇ ಕಥಾನಾಯಕನನ್ನಾಗಿ ಮಾಡಿ ಅರ್ಜುನನಿಗೂ ಅರಿಕೇಸರಿಗೂ ಅಭೇದವನ್ನು ಕಲ್ಪಿಸಿ ತನ್ನ ಕಾವ್ಯಕ್ಕೆ 'ವಿಕ್ರಮಾರ್ಜುನವಿಜಯ'ವೆಂದೇ ಹೆಸರಿಟ್ಟವನು. ಇಂಥ ಪಂಪನು ರಾಜರನ್ನು ಹೀಗೆ ಆಕ್ಷೇಪಿಸುವುದು ಆಶ್ಚರ್ಯವೆನಿಸುತ್ತದೆ. ತನ್ನ ಆಸ್ಥಾನದಲ್ಲಿ ಕವಿ ಈ ಪದ್ಯಗಳನ್ನು ಓದಿ ಹೇಳಿದಾಗ ಅರಿಕೇಸರಿಯ ಮನಸ್ಸಿನಲ್ಲಿ ಎಷ್ಟು ಸಂತೋಷವಾಯಿತೋ ಹೇಳುವುದು ಕಷ್ಟ. ಅಲ್ಲದೆ ಪಂಪನು ಅದರಲ್ಲಿಯೂ ದ್ರುಪದನ ವರ್ತನೆಯನ್ನು ಕುರಿತು ಈ ರೀತಿ ಹೇಳಿರುವುದು ಇನ್ನೂ ಸ್ವಾರಸ್ಯವಾದ ಸಂಗತಿ. ದ್ರುಪದ ಕಥಾನಾಯಕನಾದ ವಿಕ್ರಮಾರ್ಜುನನ ಮಾವ. ಅಳಿಯನಿಗೆ ಮಾವನ ಮೇಲೆ ಅಷ್ಟೇನೂ ಪ್ರೀತಿ ಗೌರವಗಳಿರಲಿಲ್ಲವೊ !

ವ್ಯಾಸ ಭಾರತದಲ್ಲಿ ದ್ರೋಣ ಹೀಗೆ ಮಾತನಾಡಿಲ್ಲ. ಅಲ್ಲಿ ದ್ರೋಣನನ್ನು ಯಾವ ದ್ವಾರಪಾಲಕನೂ ತಡೆಯಲಿಲ್ಲ. ಯಾರ ಮೂಲಕವೂ ಅವನು ತನ್ನ ಆಗಮನ ವೃತ್ತಾಂತವನ್ನು ಅರಸನಿಗೆ ಹೇಳಿ ಕಳುಹಿಸಲಿಲ್ಲ. ಅವನು ನೇರವಾಗಿ ಆಸ್ಥಾನವನ್ನು ಪ್ರವೇಶಿಸಿ 'ರಾಜನ್ ಸಖಾಯಂ ವಿದ್ಧಿ ಮಾಮಿಹ' ಎಂದು ಹೇಳಿದನಂತೆ. ಪ್ರೀತಿಪೂರ್ವಕವಾಗಿ ಭಾರದ್ವಾಜನಾಡಿದ ಈ ಮಾತು ಆ ಜನೇಶ್ವರನಿಗೆ ಪ್ರಿಯವಾಗಲಿಲ್ಲ.

> ಸಕ್ರೋಧಾಮರ್ಷ ಜಹ್ಮಭ್ರೂಃ ಕಷಾಯೀಕೃತಲೋಚನಃ
> ಐಶ್ವರ್ಯಮದ ಸಂಪನ್ನೋ ದ್ರೋಣಂ ರಾಜಾ ಬ್ರವೀದಿದಮ್

ಅವನಿಗೆ ಕ್ರೋಧವುಂಟಾಯಿತು. ಕಣ್ಣು ಕೆಂಪಗಾಯಿತು. ಐಶ್ವರ್ಯಮದದಿಂದ ಕೂಡಿದ ಆ ರಾಜನು ಹುಬ್ಬುಗಂಟಿಕ್ಕಿ ದ್ರೋಣನೊಡನೆ ಮಾತನಾಡಿದನು.

> 'ಅಕೃತೇದು ತವ ಪ್ರಜ್ಞಾ ಬ್ರಹ್ಮನ್ ನಾತಿ ಸಮಂಜಸಾ
> ಯನ್ಮಾಂ ಬ್ರವೀಷಿ ಪ್ರಸಭಂ ಸಖಾ ತೇಹಮಿತಿ ದ್ವಿಜ'

ಎಂದು ಪ್ರಾರಂಭಿಸಿ ದ್ರುಪದನನ್ನು ಬಹಳವಾಗಿ ಆಕ್ಷೇಪಿಸಿದನು. 'ಶ್ರೀಮಂತನಿಗೆ ದರಿದ್ರನು ಸ್ನೇಹಿತನಲ್ಲ. ಶ್ರೋತ್ರಿಯನಿಗೆ ಶ್ರೋತ್ರಿಯನಲ್ಲದವನು ಸ್ನೇಹಿತನಾಗ ಲಾರ. ರಾಜನಲ್ಲದವನು ರಾಜನಿಗೆ ಸ್ನೇಹಿತನಾಗುವುದು ಸಾಧ್ಯವಲ್ಲ. ನಿನ್ನಂಥ ದರಿದ್ರ ಬ್ರಾಹ್ಮಣ ನನಗೆ ಸ್ನೇಹಿತನೆಂದು ಹೇಗೆ ಹೇಳುವೆ ?' ಎಂದು ದ್ರುಪದ

ದ್ರೋಣನನ್ನು ಅವಹೇಳನ ಮಾಡಿದನು. ಇವನ್ನೆಲ್ಲ ಕೇಳಿದ ದ್ರೋಣನು ಪ್ರತಿಯಾಗಿ ಏನೂ ಹೇಳಲು ಶಕ್ತನಾಗಲಿಲ್ಲ.

> ಮುಹೂರ್ತಂ ಚಿಂತಯಿತ್ವಾತು ಮನ್ಯುನಾಭಿಪರಿಪ್ಲುತಃ
> ಸನಿಶ್ಚಿತ್ಯ ಮನಸಾ ಪಾಂಚಾಲಂ ಪ್ರತಿ ಬುದ್ಧಿಮಾನ್
> ಜಗಾಮ ಕುರುಮುಖ್ಯಾನಾಂ ನಗರಂ ನಾಗಸಾಹ್ವಯಂ

ವ್ಯಾಸರು ಎಂದು ಇಷ್ಟು ಮಾತ್ರ ಹೇಳಿದ್ದಾರೆ. ದ್ರೋಣ ಮುಹೂರ್ತಕಾಲ ಚಿಂತಿಸಿ ಕೋಪ ತುಂಬಿದ್ದರೂ ಮನಸ್ಸಿನಲ್ಲಿ ಏನೋ ನಿಶ್ಚಯಿಸಿಕೊಂಡು ಮೌನವಾಗಿ ಹಸ್ತಿನಾವತಿಯ ಕಡೆಗೆ ಹೊರಟು ಹೋದನು. ಇಲ್ಲಿ ದ್ರೋಣ ದ್ರುಪದನನ್ನು ಆಕ್ಷೇಪಿಸುವುದಾಗಲಿ ಮುಂದೆ ತನ್ನ ಶಿಷ್ಯರಿಂದ ಸೆರೆಹಿಡಿಸುವ ಪ್ರತಿಜ್ಞೆ ಮಾಡುವುದಾಗಲಿ ಇಲ್ಲ.

ವ್ಯಾಸ ಭಾರತವನ್ನೇ ಅನುಸರಿಸಿದ ನನ್ನಯನು ಸಹ,ಈ ಪ್ರತಿ ಜ್ಞಾದಿಗಳನ್ನು ಹೇಳಿಲ್ಲ. 'ನಮ್ಮಂಥ ರಾಜರಿಗೆ ನಿಮ್ಮಂಥ ಬಡಹಾರುವರೊಡನೆ ಕಾರ್ಯಕಾರಣವಾದ ಸಖ್ಯವು ಎಂದಿಗೂ ಆಗಲಾರದು' ಎಂದು ಮೊದಲಾಗಿ ನಿಂದಿಸಿ ದ್ರುಪದ ದ್ರೋಣನಿಗೆ ಕ್ರೂರವಾದ ಅಪಮಾನ ಮಾಡಿದ ಸಂಗತಿಯನ್ನು ಹೇಳಿ 'ದ್ರೋಣುಂಡವಮಾನ ಜನಿತ ಮನ್ಯು ಘೂರ್ಣಮಾನಮಾನಸುಂಡಯಿ ಯೆದ್ದಿಯುಂ ಜೇಯು ನದಿ ನೇರಕ ಪುತ್ರಕಳತ್ರಾಗ್ನಿಹೋತ್ರ ಶಿಷ್ಯಗಣಂಬುಲತೋ ಹಸ್ತಿಪುರಂಬುನಕು ವಚ್ಚೆನ್' ಎಂದು ಮುಗಿಸಿದ್ದಾನೆ. ದ್ರೋಣ ದ್ರುಪದನ ತಿರಸ್ಕಾರಕ್ಕೆ ಪ್ರತಿ ತಿರಸ್ಕಾರ ಮಾಡುವ ಕಲ್ಪನೆ ಪಂಪನ ಸ್ವಂತ ಕಲ್ಪನೆಯಾಗಿದೆ. ದ್ರೋಣನ ಕ್ಷಾತ್ರಪರಾಕ್ರಮದ ಪೂರ್ಣ ಚಿತ್ರ ವೈದಿಕ ಬ್ರಾಹ್ಮಣನಾದ ನನ್ನಯನಿಗೆ ಸಿಕ್ಕಿದಂತಿಲ್ಲ. ಸ್ವಯಂ ಕಲಿಯಾದ ಪಂಪನು ದ್ರೋಣ ಜಾತಿಯಲ್ಲಿ ಬ್ರಾಹ್ಮಣನಾದರೂ ಶಸ್ತ್ರಾಸ್ತ್ರಗಳನ್ನು ಬಲ್ಲವನಾಗಿ ಪರಶುರಾಮನ ಅನುಗ್ರಹ ಪಾತ್ರನಾಗಿದ್ದು ತನಗೆ ಅವಮಾನ ಮಾಡಿದ ದ್ರುಪದನನ್ನು ಹಂಗಿಸದೆ ಇದಿರಾಡದೆ ಮೌನವಾಗಿ ಹೊರಟುಹೋದನೆಂದು ಹೇಳುವುದನ್ನು ಒಪ್ಪಲಿಲ್ಲ. ಅದು ಅವನಿಗೆ ಸರಿದೋರಲಿಲ್ಲ. ದ್ರೋಣ ಶ್ರುತಪಾರಗನೂ ಹೌದು, ಧನುರ್ಧರಾಗ್ರಗಣ್ಯನೂ ಹೌದು. ಕ್ಷಾತ್ರದಲ್ಲಿ ಅವನು ಯಾವ ಕ್ಷತ್ರಿಯನಿಗೂ ಕಡಿಮೆಯಾಗಿರಲಿಲ್ಲ. ದ್ರುಪದ ಅಂದು ಸಭೆಯಲ್ಲಿ ತನಗೆ ಮಾಡಿದ ಅಪಮಾನಕ್ಕಿಂತ ಮಿಗಿಲಾದ ಘೋರವಾದ ಅಪಮಾನವನ್ನು ಅವನಿಗೆ ಮಾಡಿ ತೀರಬೇಕೆಂಬ ಸಂಕಲ್ಪ ದ್ರೋಣನಿಗೆ ಹುಟ್ಟಿತು. 'ನನ್ನ ಶಿಷ್ಯರಿಂದ ಸೆರೆಹಿಡಿಸಿ ಕಟ್ಟಿ ಥಾಕದಿದ್ದರೆ ನಾನೇಕಾದೇನು?' ಎಂದು ಅವನು ಮೂದಲಿಸಿದ. 'ಕೆಮ್ಮನೆ ಮೀಸೆ ಪೊತ್ತೆನೇ?' ಎಂದು ಕೇಳಿ ದ್ರೋಣ ಮೀಸೆ ತಿರುವಿದ, ದ್ರುಪದನ ಇದಿರಿನಲ್ಲಿ! ತನ್ನ ಅರಮನೆಯಲ್ಲಿ ಸಿಂಹಾಸನದ ಮೇಲೆ ಕುಳಿತು ಒಡ್ಡೋಲಗದಲ್ಲಿದ್ದ ದೊರೆಗೆ ಇದಕ್ಕಿಂತ ಹೆಚ್ಚಿನ ಅಪಮಾನವಿನ್ನೇನಾಗಬೇಕು? ಆಗಂತುಕನಾಗಿ ಬಂದ ಒಬ್ಬ ಬಡಬ್ರಾಹ್ಮಣ ಬಿರುಗಾಳಿಯಂತೆ ಹೀಗೆ ನುಗ್ಗಿ ಬಂದು ಅರಸನನ್ನು ಹೀಗೆ ಮೂದಲಿಸಿ

ಸುರಕ್ಷಿತನಾಗಿ ಹೊರಟುಹೋದನು. ಅವನನ್ನು ತಡೆಯಲು ಯಾರಿಗೂ ಧೈರ್ಯ ಬರಲಿಲ್ಲ !

ಆದರೆ ದ್ರುಪದನ ಅಪಮಾನ ಇಲ್ಲಿಗೆ ಮುಗಿಯಲಿಲ್ಲ. ರೋಷದಿಂದ ಕುದಿಯುತ್ತಿದ್ದ ದ್ರೋಣನು ಹಸ್ತಿನಾವತಿಯಲ್ಲಿ ಕಟಕಾಚಾರ್ಯನಾಗಿ ನಿಂತು ಕೌರವ ಪಾಂಡವರಿಗೆ ಯುದ್ಧ ವಿದ್ಯಾ ಶಿಕ್ಷಣ ನೀಡಿ ಆಪ್ತ ಶಿಷ್ಯನಾದ ಪಾರ್ಥನಿಂದ ದ್ರುಪದನನ್ನು ಹಿಡಿತರಿಸಿ ತನ್ನ ಮಂಚದ ಕಾಲಿಗೆ ಕಟ್ಟಿಸಿ ಅವನ ತಲೆಯ ಮೇಲೆ ಕಾಲಿಟ್ಟು ಹಳೆಯ ಕಥೆಯನ್ನೆಲ್ಲ ಜ್ಞಾಪಿಸಿ ಅವನನ್ನು ಹಂಗಿಸಿದನು :

ಸಿರಿಮೆಯ್ಯೊಳಗಂದಱಿವಿರೆ
ನೆರವಿಯೊಳಾರಱಿವರೊರ್ವರ್ ಕಂಡರನಱಿಯ
ಲ್ಕರಿದೆಮ್ಮಂ ಬಡ ಪಾರ್ವರ
ನರಸರೆ ನೀಮಾಗಳಱಿವಿರಱಿಯಿರೊ ಪೇೞಿಂ

ಹೀಗೆ 'ಸಾಯೆ ಸರಸಂ ನುಡಿದು' ಅಷ್ಟರಿಂದ ತೃಪ್ತಿಹೊಂದದೆ 'ಮತ್ತಮಿಂತೆಂದಂ'.

ಆದಿ ಕ್ಷತ್ರಿಯರೇ ನೀ
ಮಾದಿತ್ಯನನಿಳಿಪ ತೇಜರಿರ್ ಪಾರ್ವನ ಕಾಲ್
ಮೋದೆ ನಡುತಲೆಯಲಿರ್ಪುದು
ಮಾದುದು ನಿಮಗೆಂದು ನುಡಿದು ಕಾಯ್ಪಿನೊಳೊದೆದಂ

ದ್ರುಪದನನ್ನು ದ್ರೋಣ ಕಾಲಿನಿಂದ ಒದ್ದ. ದ್ರುಪದ ಮಾಡಿದ ಅಪರಾಧವೆಷ್ಟು ? ಅದಕ್ಕಿಷ್ಟು ಶಿಕ್ಷೆಯೆ ? ಇಂಥ ಘೋರವಾದ ಅಪಮಾನ ಅನುಭವಿಸಿದ ದ್ರುಪದನು ದ್ರೋಣನನ್ನು ಕೊಲ್ಲ ಬಯಸಿದರೆ ಅಚ್ಚರಿಯೇನಿದೆ ? ಆದರೆ ಅವನಿಗೆ ದ್ರೋಣನನ್ನು ಕೊಲ್ಲುವ ಶಕ್ತಿಯಿರಲಿಲ್ಲ. ಅದು ಅವನಿಗೆ ಆಗತಾನೆ ಅನುಭವವೇದ್ಯವಾಗಿತ್ತು ! ಆದ್ದರಿಂದ ಅವನು 'ಪರಿಭವಾನಳನಳವಲ್ಲದಳುರೆ ನಿನ್ನಂ ಕೊಲ್ವನ್ನನೊರ್ವ ಮಗನುಮಂ ವಿಕ್ರಮಾರ್ಜುನಂಗೆ ಪೆಂಡತಿಯಪ್ಪನ್ನಳೊರ್ವ ಮಗಳುಮಂ ಪಡೆದಲ್ಲದಿರೆನೆಂದು ಮಹಾ ಪ್ರತಿಜ್ಞಾರೂಢನಾಗಿ ಪೋದನ್.' ಅಂದು ದ್ರೋಣ ದ್ರುಪದನ ಆಸ್ಥಾನದಿಂದ ಹೇಗೆ ಕೋಪವನ್ನು ನುಂಗಿಕೊಂಡು ಅಸಹಾಯನಾಗಿ ಹೊರಟು ಬರಬೇಕಾಯಿತೋ ಹಾಗೇ ಇಂದು ದ್ರೋಣನ ಬಳಿಯಿಂದ ದ್ರುಪದ ಅಸಹಾಯನಾಗಿ ಹೋಗಬೇಕಾಯಿತು !

ಇಲ್ಲಿ ಒಂದು ಸ್ವಾರಸ್ಯವಾದ ವಿಚಾರ. ಕಾಳಗದಲ್ಲಿ ತನ್ನನ್ನು ಸೋಲಿಸಿ ಸೆರೆ ಹಿಡಿದು ತಂದು ದ್ರೋಣನಿಗೆ ಒಪ್ಪಿಸಿದ ಅರ್ಜುನನೇ ತನ್ನ ಈ ಘೋರ ಅಪಮಾನಕ್ಕೆ ಸಹಾಯಕನಾಗಿದ್ದರೂ ಅವನ ಮೇಲೆ ದ್ರುಪದನಿಗೆ ಅಕ್ಕರೆಯೇ ಮೂಡಿತು. ಅವನಿಗೆ ಮಡದಿಯಾಗುವಂಥ ಮಗಳನ್ನು ಪಡೆಯಬೇಕೆಂಬ ಆಸೆಯುಂಟಾಯಿತು ದ್ರುಪದನಿಗೆ ! ಎಷ್ಟಾದರೂ ಅರ್ಜುನ ಕ್ಷತ್ರಿಯ, ಸ್ವಜಾತಿ. ಅವನ ಮೇಲೆ ದ್ರುಪದನಿಗೆ ಕ್ರೋಧ ಹುಟ್ಟಲಿಲ್ಲ. ಇಷ್ಟಕ್ಕೆಲ್ಲಾ ಪ್ರೇರಕನಾದ ತನ್ನ ಹಿಂದಿನ ಸಹಾಧ್ಯಾಯಿ

ಬಡ ಬ್ರಾಹ್ಮಣ ದ್ರೋಣನ ಮೇಲೆ ಸಹಜವಾಗಿಯೇ ಅವನಿಗೆ ಮಹಾಕ್ರೋಧ ಉತ್ಪನ್ನವಾಯಿತು. ಅವನನ್ನು ಕೊಲ್ಲುವಂಥ ಮಗ ಹುಟ್ಟಬೇಕೆಂದು ದೇವರಲ್ಲಿ ಬೇಡಿಕೊಂಡನು. ಅದಕ್ಕಾಗಿ ಯಜ್ಞವನ್ನೇ ಮಾಡಿ ದ್ರೌಪದೀಧೃಷ್ಟದ್ಯುಮ್ನರನ್ನು ಪಡೆದು ದ್ರುಪದ ಸಫಲ ಮನೋರಥನಾದನು.

ಪಂಪ ಕವಿಯು ದ್ರುಪದನ ಈ ಅಪಮಾನದ ಕಥೆಯನ್ನು ಮೊದಲು ಹೇಳಿ ಕೌರವ ಪಾಂಡವರ ಶಸ್ತ್ರಕೌಶಲ ಪ್ರದರ್ಶನ ವೃತ್ತಾಂತವನ್ನು ಆಮೇಲೆ ವರ್ಣಿಸಿದ್ದಾನೆ. ನನ್ನಯಭಟ್ಟನಲ್ಲಿ ಈ ಕ್ರಮ ವ್ಯತ್ಯಾಸವಾಗಿದೆ. ದ್ರೋಣ ಭೀಷ್ಮಾದಿಗಳ ಸಮ್ಮುಖದಲ್ಲಿ ಕುಮಾರರ ಶಸ್ತ್ರ ಪಾಂಡಿತ್ಯ ಪ್ರದರ್ಶನ ನಡೆಸಿದ ಮೇಲೆ ದ್ರುಪದನನ್ನು ಕಟ್ಟಿ ತರಬೇಕೆಂದು ಅವರನ್ನು ಕೋರಲು ಎಲ್ಲರೂ ದ್ರುಪದನ ಮೇಲೆ ಕಾಳಗಕ್ಕೆ ಹೋದರು. ಆದರೆ ದ್ರುಪದನೇನು ಹೇಡಿಯಾಗಿರಲಿಲ್ಲ; ಅಸಮರ್ಥನೂ ಅಲ್ಲ. ಅವನು ತನ್ನ ಮೇಲೆ ದಾಳಿ ಮಾಡಿದ ನೂರೈದು ಮಂದಿಯ ಮೇಲೂ ಕಾಳಗ ಹೂಡಿ ರಭಸದಿಂದ ಹೋರಾಡಿದನು. ಅವನ ಪೆಟ್ಟಿಗೆ ತಡೆಯಲಾರದೆ 'ಕುಮಾರಸ್ವಾಮಿಯ ಬಾಣದ ಪೆಟ್ಟಿಗೆ ಸೋತು ಹಿಮ್ಮೆಟ್ಟಿದ ಸುರಾರಿ ಕುಮಾರರಂತೆ' ಹಿಮ್ಮೆಟ್ಟಿ ಪಾಂಡವರ ಮರೆ ಹೊಕ್ಕರಂತೆ! ಆಗ ಅರ್ಜುನ ಧರ್ಮರಾಯನ ಅನುಮತಿ ಪಡೆದು ನುಗ್ಗಿ ಹೋಗಿ ಕಾದಿ ದ್ರುಪದನನ್ನು ಕಂಗೆಡಿಸಿ ಬಿಲ್ಲು ಮುರಿಯಲು ದ್ವಂದ್ವಯುದ್ಧ ಮಾಡಿ ಅವನನ್ನು ಹಿಡಿದು 'ಪ್ರಕ್ಷೀಣದರ್ಪ ದ್ರುಪದನನ್ನು ರಥಾಕ್ಷಕ್ಕೆ ಕಟ್ಟಿ ತಂದು' ಗುರುದಕ್ಷಿಣೆಯಾಗಿ ಆಚಾರ್ಯ ದ್ರೋಣನಿಗೆ ಸಮರ್ಪಿಸಿದನು. ಆಗ ದ್ರೋಣನು ತನ್ನ ಪ್ರಾಚೀನ ಸ್ನೇಹಿತನನ್ನು ಕಂಡು ಅರ್ಜುನನನ್ನು ಕುರಿತು ಹೀಗೆ ನುಡಿದನಂತೆ. "ಇವರು ಯಾರಯ್ಯ? ದ್ರುಪದ ಮಹಾರಾಜರೆ? ಹೀಗೆ ಕೃಪಣರಾಗಿ ಸಿಕ್ಕಿಬೀಳಬೇಕಾಯಿತೆ? ಆಹಾ! ರಾಜ್ಯಮದಾಂಧಕಾರ ಕಳೆದುಹೋಯಿತೆ? ಇನ್ನಾದರೂ ನಮ್ಮನ್ನು ಅರಿಯಬಹುದೊ?" ಹೀಗೆ ಸರಸ ನುಡಿದು ಬಿಲ್ಲ ಗುರುವು ದ್ರುಪದನನ್ನು ಬಿಡುಗಡೆ ಮಾಡಿದನು! ವಿಪ್ರರ ಮುಳಿಸು ತೃಣಕ್ಕೆ ಹತ್ತಿದ ಹುತಾಶನನಂತೆ! ದೀರ್ಘದ್ವೇಷ ಇರದು.[1]

---

[1] ವೀರೆವ್ವರಯ್ಯ ದ್ರುಪದ ಮ
ಹಾರಾಜುಲೆ ಯಿಟ್ಲು ಕೃಪಣುಲಯಿ ಪಟ್ಟುಪಡನ್
ವೀರಿಕಿ ವಲಿಸೆನೆ ಯಹಹಾ ಮ
ಹಾರಾಜ್ಯಮದಾಂಧಕಾರ ಮದಿ ವಾಸೆನೊಕೋ
ಇಕನೈನ ಮಮ್ಮನೆಱು ಗಂಗನಗುನೊಕ್ಕೊ
ಯನುಚು ನುಲ್ಲಸಂಬುಲಾಡಿ ದ್ರುಪದು
ವಿಡಿಚಿ ಪುಚ್ಚೆ ಗುರುಡು ವಿಪ್ರುಲ ಯಲುಕಯು
ತೃಣಹುತಾಶನಂಬು ದೀರ್ಘಮಗುನೆ

ನನ್ನಯ ಭಟ್ಟನ ದ್ರೋಣ ಪಂಪನ ದ್ರೋಣನಂತೆ ದ್ರುಪದನನ್ನು ಕಾಲಿನಿಂದ ಒದೆಯಲಿಲ್ಲ ಅವನನ್ನು ತನ್ನ ಮಂಚದ ಕಾಲಿಗೆ ಕಟ್ಟಿಸಲೂ ಇಲ್ಲ. ಆದರೆ ಅವನು ದ್ರುಪದನನ್ನು ಹಾಸ್ಯಮಾಡಿ 'ಉಲ್ಲಸ' ಗಳನ್ನಾಡಿದ. ಅವನು ಆಡಿದ 'ಉಲ್ಲಸಗಳು' ಪಂಪನ ಮಾತಿನ ಧೋರಣೆಯನ್ನೇ ಅನುಸರಿಸಿವೆ.

ವ್ಯಾಸ ಭಾರತದಲ್ಲಿ ಈ ಕಥೆ ಕೊಂಚ ಭಿನ್ನವಾಗಿದೆ. ಭಗ್ನ ದರ್ಪನಾಗಿ ರಾಜ್ಯಕೋಶಗಳನ್ನು ಕಳೆದುಕೊಂಡು ಸೆರೆಸಿಕ್ಕು ಬಂದ ದ್ರುಪದನನ್ನು ದ್ರೋಣ ಅವನ ಹಿಂದಿನ ವೈರವನ್ನು ಸ್ಮರಿಸಿಕೊಂಡು 'ಅರಸನೇ, ಈಗ ಜೀವಸಹಿತನಾಗಿ ಸಿಕ್ಕು ಬಿದ್ದಿರುವೆ. ಈಗಲಾದರೂ ನಮ್ಮ ಸ್ನೇಹವನ್ನು ಒಪ್ಪಿಕೊಳ್ಳುವೆಯಾ ?' ಎಂದು ಹಂಗಿಸಿ ಕೊಂಚ ಹೊತ್ತು ಗಟ್ಟಿಯಾಗಿ ನಕ್ಕು ಮತ್ತೆ ಹೀಗೆ ಹೇಳಿದನು :

'ಮಾ ಭೈಃ ಪ್ರಾಣಭಯಾದ್ವೀರ ಕ್ಷಮಿಣೋ ಬ್ರಾಹ್ಮಣಾ ವಯಮ್
ಆಶ್ರಮೇ ಕ್ರೀಡಿತಂ ಯತ್ತು ತ್ವಯಾ ಬಾಲ್ಯೇ ಮಯಾ ಸಹ
ತೇನ ಸಂವರ್ಧಿತಃ ಸ್ನೇಹಃ ಪ್ರೀತಿಶ್ಚ ಕ್ಷತ್ರಿಯರ್ಷಭ
ಪ್ರಾರ್ಥಯೇಯಂ ತ್ವಯಾ ಸಖ್ಯಂ ಪುನರೇವ ಜನಾಧಿಪ
ವರಂ ದದಾಮಿ ತೇ ರಾಜನ್ ರಾಜ್ಯಸ್ಯಾರ್ಧಮವಾಪ್ನುಹಿ
ಅರಾಜಾ ಕಿಲ ನೋ ರಾಜ್ಞಃ ಸಖಾ ಭವತುಮರ್ಹಸಿ
ಅತಃ ಪ್ರಯತ್ನಿತಂ ರಾಜ್ಯೇ ಯಜ್ಞಸೇನ ಮಯಾ ತವ
ರಾಜಾಸಿ ದಕ್ಷಿಣೇಕೂಲೇ ಭಾಗೀರಥ್ಯಾಹ ಮುತ್ತರೇ
ಸಖಾಯಂ ಮಾಂ ವಿಜಾನೀಹಿ ಪಾಂಚಾಲ ಯದಿಮನ್ಯಸೇ'

'ವೀರನೇ, ಪ್ರಾಣಭಯ ಬೇಡ. ನಾವು ಬ್ರಾಹ್ಮಣರು. ಕ್ಷಮಿಗಳು. ಬಾಲ್ಯದಲ್ಲಿ ಆಶ್ರಮದಲ್ಲಿ ನಾವು ಒಟ್ಟಿಗೆ ಆಡಿಕೊಂಡಿದ್ದು ಅದರಿಂದ ಸ್ನೇಹ ಪ್ರೀತಿಗಳು ವರ್ಧಿಸಿದುವು. ಜನಾಧಿಪ ! ಪುನಃ ನಿನ್ನೊಡನೆ ಸ್ನೇಹವನ್ನು ಬೇಡುತ್ತೇನೆ. ರಾಜನಲ್ಲದವನು ರಾಜನಿಗೆ ಸ್ನೇಹಿತನಾಗಲಾರನಲ್ಲವೆ ? ಆದ್ದರಿಂದ ರಾಜ್ಯದಲ್ಲರ್ಧವನ್ನು ನಿನಗೆ ಕೊಡುತ್ತಿದ್ದೇನೆ. ಭಾಗೀರಥಿಯ ದಕ್ಷಿಣಕ್ಕೆ ನೀನು ರಾಜ. ಉತ್ತರ ಭಾಗಕ್ಕೆ ನಾನು ರಾಜ. ಪಾಂಚಾಲ, ನಿನಗೆ ಒಪ್ಪಿಗೆಯಾಗುವುದಾದರೆ ನನ್ನನ್ನು ಸ್ನೇಹಿತನೆಂದು ಭಾವಿಸು'.

ವ್ಯಾಸರ ದ್ರೋಣ ದ್ರುಪದನ ರಾಜ್ಯದಲ್ಲಿ ಅರ್ಧವನ್ನು ಕಸಿದುಕೊಂಡನು. ಪಂಪನ ದ್ರೋಣನಿಗೆ ಅಂಥ ರಾಜ್ಯದಾಹವಿಲ್ಲ. ದ್ರುಪದನು ಹಿಂದೆ ಮಾಡಿದ ಅಪಮಾನವನ್ನು ಸ್ಮರಿಸಿಕೊಂಡು ಅವನ ಮಾತುಗಳನ್ನು ಅವನಿಗೇ ಹಿಂತಿರುಗಿಸಿ ಅಪಮಾನ ಮಾಡಿದ್ದುಂಟಾದರೂ ಕಾಲಿನಿಂದ ಒದೆದ ಪ್ರಸಂಗವೂ ಇಲ್ಲ. ಈ ಅಂಶದಲ್ಲಿ ವ್ಯಾಸ ನನ್ನಯ ಭಟ್ಟರ ಕಥಾಸರಣಿ ಏಕರೀತಿಯಾಗಿದೆ. ಆದರೆ ವ್ಯಾಸರು ಹೇಳಿದ ರಾಜ್ಯಾರ್ಧಸ್ವೀಕಾರದ ಸಂಗತಿಯನ್ನು ನನ್ನಯ ಕೈಬಿಟ್ಟಿದ್ದಾನೆ. ಬ್ರಾಹ್ಮಣನಿಗೆ ರಾಜತ್ವ ಸಲ್ಲದೆಂಬ ಭಾವನೆ ಆ ವೈದಿಕ ಕವಿಯಲ್ಲಿ ಮೂಡಿರಬಹುದು. ಅಥವಾ ಅವನು ಪಂಪನ ಕಲ್ಪನೆಯನ್ನು ಮೆಚ್ಚಿಕೊಂಡಿದ್ದಿರಬಹುದು.

ದ್ರೋಣ ದ್ರುಪದನಿಗೆ ಅವನ ರಾಜ್ಯದಲ್ಲಿ ಅರ್ಧವನ್ನು ತಾನು ಸಂಗ್ರಹಿಸಿ ಉಳಿದ ಅರ್ಧವನ್ನು ಅವನಿಗೆ 'ವರ'ವಾಗಿ ಅನುಗ್ರಹಿಸಿದಾಗ ದ್ರುಪದನು ಬಹಳ ವಿನೀತನಾಗಿ "ಬ್ರಾಹ್ಮಣೋತ್ತಮಾ, ಪರಾಕ್ರಮಿಗಳಾದ ಮಹಾತ್ಮರಲ್ಲಿ ಇದು ಆಶ್ಚರ್ಯವಲ್ಲ. ನಿನ್ನ ಶಾಶ್ವತವಾದ ಪ್ರೀತಿಯನ್ನು ಬಯಸುತ್ತೇನೆ[1]" ಎಂದು ಬಾಯಲ್ಲಿ ಆಡಿದನಾದರೂ ಅಂತರಂಗದಲ್ಲಿ ದ್ವೇಷವನ್ನು ತುಂಬಿಕೊಂಡು ಹೊರಟು ಹೋದನು. ದ್ರೋಣ ಅವನನ್ನು ಸತ್ಕರಿಸಿ ಕಳುಹಿಸಿಕೊಟ್ಟನಂತೆ[2].

ಪಂಪನ ದ್ರುಪದ ಏನೂ ಮಾತನಾಡದೆ ರೋಷಪರೀತಾತ್ಮನಾಗಿ ದ್ರೋಣನ ವಧೆಗೆ ಸಂಕಲ್ಪಿಸಿ ಸಿಟ್ಟಿನಿಂದ ಹೊರಟುಹೋದನೆಂದು ಹೇಳಿರುವುದು ಹೆಚ್ಚು ಔಚಿತ್ಯ ದಿಂದ ಕೂಡಿದೆ. ಅಂಥ ಘೋರ ಅಪಮಾನದ ಸಮಯದಲ್ಲಿ ದ್ರೋಣನಾಗಲಿ ದ್ರುಪದ ನಾಗಲಿ ಹೆಚ್ಚಿನ ಉಪಚಾರೋಕ್ತಿಗಳನ್ನು ಆಡಿವರೆಂದು ಊಹಿಸುವುದು ಶಕ್ಯವಲ್ಲ.

ದ್ರೋಣನು ದ್ರುಪದನ ಆಸ್ಥಾನದಲ್ಲಿ ತಿರಸ್ಕೃತನಾದ ಮೇಲೆ ಬೇರೇನೂ ತೋರದೆ ನೇರವಾಗಿ ಹಸ್ತಿನಾಪುರಕ್ಕೆ ಹೋಗಿ ಅಲ್ಲಿ ತನ್ನ ಭಾವನಾದ ಕೃಪನ ಮನೆಯಲ್ಲಿ ನಿಂತು ಮಾರ್ಗಾಯಾಸ ಪರಿಹರಿಸಿಕೊಳ್ಳುವಷ್ಟರಲ್ಲಿ ಒಂದು ದಿನ ಕೌರವ ಪಾಂಡವರು ಪುರದ ಹೊರವಳಯದಲ್ಲಿ ಆಡಿಕೊಳ್ಳುತ್ತ ಕಂದುಕ ಕ್ರೀಡೆಯಲ್ಲಿ ತೊಡಗಿದ್ದಾಗ ಆ ಕಂದುಕ[3] ಒಂದು ಹಳೆಯ ಭಾವಿಯಲ್ಲಿ ಹೋಗಿಬಿದ್ದಿತು. ಅದನ್ನು ಹೊರಕ್ಕೆ ತೆಗೆಯುವ ದಾರಿ ಕಾಣದೆ ರಾಜಪುತ್ರರೆಲ್ಲ ಆ ಬಾವಿಯ ಸುತ್ತ ನಿಂತು ಅಸಹಾಯರಾಗಿ ನೋಡುತ್ತಿರಲು ದ್ರೋಣ ಅದನ್ನು ಕಂಡು 'ಭರತಕುಲದಲ್ಲಿ ಹುಟ್ಟಿ ಬಿಲ್ಲು ಬಾಣಗಳಿದ್ದರೂ ಆ ಚೆಂಡನ್ನು ಹೊರಕ್ಕೆ ತೆಗೆಯಲು ನಿಮ್ಮಿಂದಾಗಲಿಲ್ಲವೇ ?' ಎಂದು ಅವರನ್ನು ಪ್ರಶ್ನಿಸಿದನಂತೆ

> ಭರತಕುಳತಿಳಕರಿರ್ ವರ
> ಶರಾಸನ ವ್ಯಗ್ರಹಸ್ತರಿರ್ ಬಳಯುತರಿರ್
> ನೆರೆದಿನಿಬರುಮೀ ಲಕ್ಷ್ಯಮ
> ನಿರದಕ್ಕಟ ಸರದೆ ತೆಗೆಯಲಾರ್ತಿರುಮಿಲ್ಲಾ

ಎಂದು ಪಂಪನ ದ್ರೋಣ ಕೇಳಿದರೆ ನನ್ನಯಭಟ್ಟನ ದ್ರೋಣ

> ಭರತ ಕುಲ ಪ್ರಸೂತಲರು ಭಾಸುರ ಶಸ್ತ್ರಮಹಾಸ್ತ್ರ ವಿದ್ಯಲಂ
> ಗರಮು ಪ್ರಸಿದ್ಧುಡೈ ಪರಗು ಗೌತಮಶಿಷ್ಯುಲ ರಿಟ್ಟಿ ಮೀಕು ದು

---

[1] ಅನಾಶ್ಚರ್ಯಮಿದಂ ಬ್ರಹ್ಮನ್ ವಿಕ್ರಾಂತೇಷು ಮಹಾತ್ಮಸು
ಪ್ರೀಯೇ ತ್ವಯಾಹಂ ತ್ವತ್ತಶ್ಚ ಪ್ರೀತಿಮಿಚ್ಛಾಮಿ ಶಾಶ್ವತೀಮ್

[2] ಏವಮುಕ್ತಃ ಸತಂ ದ್ರೋಣೋ ಮೋಕ್ಷಯಾಮಾಸ ಭಾರತ
ಸತ್ಕೃತ್ಯಚೈನಂ ಪ್ರೀತಾತ್ಮಾ ರಾಜ್ಯಾರ್ಧಂ ಪ್ರತ್ಯಪಾದಯತ್

[3] ಪಂಪ ಇದನ್ನು 'ತೋಲ್ವುಲ್ಲ' ಎಂದು ಕರೆದಿದ್ದಾನೆ. ತೊಗಲಿನಿಂದಾದ ಹುಲ್ಲೆಯೆಂದು ಅರ್ಥ ಮಾಡಬೇಕು. ನನ್ನಯಭಟ್ಟ ಇದನ್ನು ಸ್ಪಷ್ಟವಾಗಿ ಕಂದುಕವೆಂದೇ ಹೇಳಿದ್ದಾನೆ. ರಾಜಪುತ್ರರ ಆಟವಾದ್ದರಿಂದ ಅದು 'ಕಾಂಚನ ಕಂದುಕ' ವೆಂದೇ ಬಣ್ಣಿಸಿದ್ದಾನೆ.

ಷ್ಕರಮುಗ ನೂತಿಲೋ ಬಡಿನ ವೀಟ ಗೊನಂಗನೇರ ಕೊಂ
ಡೊರುಲ ವೊಗಂಬು ಚೂಚಿ ನಗು ಚಂಡಗ ಜನ್ನೆ ಯುಪಾಯಹೀನತನ್,

ಎಂದು ಪ್ರಶ್ನೆ ಮಾಡಿದ್ದಾನೆ. (ಭರತಕುಲ ಪ್ರಸೂತರು. ಶಸ್ತ್ರಮಹಾಸ್ತ್ರ ವಿದ್ಯೆಗಳಲ್ಲಿ ಪ್ರಸಿದ್ಧನಾದ ಗೌತಮನ ಶಿಷ್ಯರು! ಇಂಥ ನಿಮಗೆ ಬಾವಿಯಲ್ಲಿ ಬಿದ್ದ ಚೆಂಡನ್ನು ಮೇಲಕ್ಕೆತ್ತಿಕೊಳ್ಳಲು ಉಪಾಯ ತೋರಲಿಲ್ಲವೆ ?]

ಪಂಪನ ಪ್ರಕಾರ ದ್ರೋಣ ಅಶ್ವತ್ಥಾಮನಿಗೆ ಹೇಳಲು ಅವನು 'ಪುಂಖಾನು ಪುಂಖ' ವೆಂಬ ಶರಸಂಧಾನಕ್ರಮದಿಂದ ಆ ಚೆಂಡನ್ನು ಮೇಲಕ್ಕೆ ಎತ್ತಿಕೊಟ್ಟನು. ನನ್ನಯನು ದ್ರೋಣನೇ ಆ ಚೆಂಡನ್ನು ಬಾಣ ಸಹಾಯದಿಂದ ಎತ್ತಿಕೊಟ್ಟನೆಂದು ಹೇಳಿದ್ದಾನೆ ಫಲಿತಾಂಶ ಒಂದೇ. ಆ ಹುಡುಗರು ಈ ಬ್ರಾಹ್ಮಣರ ಬಿಲ್ಲು ವಿದ್ಯೆಯ ಚಮತ್ಕಾರವನ್ನು ಮೆಚ್ಚಿಕೊಂಡು ಭೀಷ್ಮರಲ್ಲಿಗೆ ಹೋಗಿ ವಿದ್ಯಮಾನ ತಿಳಿಸಿದರು. ಆಗ ಭೀಷ್ಮ ದ್ರೋಣರನ್ನು ಬರಮಾಡಿಕೊಂಡು 'ಪೂರ್ವ ಸಂಭಾಷಣಾರ್ಘ್ಯಮೆತ್ತಿ ಮಧುಪರ್ಕ ವೇತ್ರಾಸನ ತಾಂಬೂಲ ದಾನಾದಿಗಳಿಂ ಸಂತಸಂ ಬಡಿಸಿ ತದೀಯ ಕುಲ ವಿದ್ಯಾವೃತ್ತಿಗಳಂ ಬೆಸಗೊಂಡು' ಅವರಿಗೆ ತೃಪ್ತಿಯಾಗುವ ಹಾಗೆ ಧನಕನಕಾದಿ ಗಳನ್ನೂ ಮಾನ್ಯ ಗ್ರಾಮಗಳನ್ನೂ ಆನೆ ಕುದುರೆಗಳನ್ನೂ ಕೊಟ್ಟು ತನ್ನ ಮೊಮ್ಮಕ್ಕ ಳಿಗೆ 'ಒವಜ' ನಾಗಬೇಕೆಂದು ಬೇಡಿಕೊಂಡು ಒಪ್ಪಿಸಿದನು. ನನ್ನಯ ಈ ಸಂದರ್ಭದಲ್ಲಿ ದ್ರೋಣ ದ್ರುಪದನ ಆಸ್ಥಾನದಲ್ಲಿ ತನಗಾದ ಅಪಮಾನದ ಕಥೆ ಯನ್ನೂ, ಅವನಿಗೂ ತನಗೂ ಮೊದಲು ಇದ್ದ ಸ್ನೇಹ ವಿವರಗಳನ್ನೂ ಹೇಳಿ ತನ್ನ ದುಃಖ ತೋಡಿಕೊಂಡನೆಂದು ಹೇಳಿದ್ದಾನೆ. ಆದರೆ ಪಂಪನಿಗೆ ಇದು ಸರಿದೋರಲಿಲ್ಲ. ದ್ರೋಣ ಶಿಷ್ಯರನ್ನು ಹುಡುಕಿಕೊಂಡು ಹೊರಟಿದ್ದನು. ಏಕೆಂದರೆ ತನ್ನ ಶಿಷ್ಯ ರಿಂದ ದ್ರುಪದನನ್ನು ಸೆರೆಹಿಡಿಸುವ ಸಂಕಲ್ಪ ಅವನದಾಗಿತ್ತು. ಭೀಷ್ಮನಿಂದ ಅವನಿಗೆ ಶಿಷ್ಯರು ಲಭಿಸಿದರು. ಮುಂದಿನ ಕೆಲಸ ಸಮಯವರಿತು ಸಾಧಿಸಬೇಕಾದದ್ದು. ಅದನ್ನು ಆಗಲೇ ಭೀಷ್ಮರೊಡನೆ ಹೇಳಬೇಕಾದ ಅಗತ್ಯವಿಲ್ಲ. ಹಾಗೆ ಹೇಳಿಕೊಳ್ಳು ವುದು ದ್ರೋಣನಂಥ ಕ್ಷಾತ್ರವುಳ್ಳ ಧೀರನಿಗೆ ಗೌರವಪ್ರದವಲ್ಲ. ಆದ್ದರಿಂದಲೇ ಪಂಪ ಆ ಸುದ್ದಿಯನ್ನು ಪ್ರಸ್ತಾಪಿಸಲಿಲ್ಲ. ಅಲ್ಲದೆ ಅದು ಆಗಲೇ ಹೇಳಿರುವ ವಿಚಾರ. ಪುನರುಕ್ತಿ ಪಂಪನ ಉದ್ದೇಶ ಸಾಧನೆಗೆ ಭಂಗಕಾರಿ. ಅವನು ಹಿತ ಮಿತ ವಚನ ವನ್ನು ಮೆಚ್ಚಿಕೊಂಡವನು.

ದ್ರೋಣ ಭೀಷ್ಮನ ಕೋರಿಕೆಯಂತೆ ಹಸ್ತಿನಾಪುರದಲ್ಲಿ ಬಿಲ್ಲ ಗುರುವಾಗಿ ನಿಲ್ಲಲು ಕೌರವ ಪಾಂಡವರ ಜತೆಗೆ ಯಾದವ ವಂಶಸ್ಥರೂ ಇನ್ನೂ ಅನೇಕ ರಾಜರೂ ಬಂದು ಅವನಲ್ಲಿ ಧನುರ್ವಿದ್ಯೆಯನ್ನು ಅಭ್ಯಾಸ ಮಾಡತೊಡಗಿದರು. ದ್ರೋಣನು ಅವರಿಗೆ ಧನುರ್ವೇದವನ್ನೂ ದಿವ್ಯಾಸ್ತ್ರಗಳನ್ನೂ ಶಕ್ತಿ ತೋಮರ ಮುಸಲ ಭಿಂಡಿ ವಾಳ ಮುದ್ಗರ ಗದಾದಿ ವಿವಿಧಾಯುಧಗಳನ್ನು ಬಳಸುವ ರೀತಿಯನ್ನೂ ಕಲಿಸಿ

ಗಜಯುದ್ಧ, ರಥ ತುರಗ, ಪದಾತಿ ಯುದ್ಧ ಮೊದಲಾದ ಕಾಳಗಗಳ ವಿಧಾನವನ್ನೂ ಉಪದೇಶಿಸಿದನು. ಆಗ ಅಲ್ಲಿಗೆ ಕರ್ಣ ಬಂದು ದ್ರೋಣನ ಶಿಷ್ಯನಾಗಿ ಸೇರಿ ಅರ್ಜುನನ ಮೇಲೆ ಹುರುಡುಗಟ್ಟಿ ಧನುರ್ವಿದ್ಯಾಭ್ಯಾಸ ಮಾಡಿದನೆಂದು ಪಂಪ ಹೇಳಿದ್ದಾನೆ. ನನ್ನಯಭಟ್ಟನು ಕರ್ಣ ದ್ರೋಣಶಿಷ್ಯನಾಗಿದ್ದ ಸುದ್ದಿಯನ್ನು ಪ್ರಸ್ತಾಪಿಸಿಲ್ಲ. ಆದರೆ ಏಕಲವ್ಯನೆಂಬ ನಿಷಾದ ಯುವಕನು ದ್ರೋಣರ ಬಳಿ ವಿದ್ಯೆ ಕಲಿಯಲೆಳಸಿ ಬಂದು ರಾಜಕುಮಾರರೊಡನೆ ಸೇರಿ ಕಲಿಯಲು ಅವಕಾಶ ದೊರೆಯದೆ ಹೋಗಲು ದ್ರೋಣರ ಅನುಜ್ಞೆ ಪಡೆದು ಹೋಗಿ ದ್ರೋಣರ ಪ್ರತಿಕೃತಿಯೊಂದನ್ನು ಮಾಡಿಟ್ಟು ಅದಕ್ಕೇ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡುತ್ತ ಅದರೆದುರಿಗೆ ಬಾಣ ವಿದ್ಯೆಯನ್ನು ಅಭ್ಯಾಸ ಮಾಡುತ್ತ ಅದರಲ್ಲಿ ಪಂಡಿತನಾದ ಕಥೆಯನ್ನು ನನ್ನಯಭಟ್ಟ ಪ್ರಸ್ತಾಪಿಸಿದ್ದಾನೆ. ಪ್ರತ್ಯಕ್ಷವಾಗಿ ದ್ರೋಣರಿಂದಲೇ ಉಪದೇಶ ಪಡೆದ ಅರ್ಜುನಾದಿಗಳಿಗಿಂತ ಏಕಲವ್ಯ ಪರಿಣತನಾದನು. ಅರ್ಜುನ ಅದನ್ನು ಕಂಡು ಬೆರಗಾಗಿ ಗುರುವಿನ ಬಳಿಗೆ ಬಂದು 'ನಿಮ್ಮ ಶಿಷ್ಯನಾದ ಏಕಲವ್ಯನೆಂಬ ನಿಷಾದನು ನನಗಿಂತ ಹೆಚ್ಚಿನ ಅಸ್ತ್ರ ಕುಶಲತೆ ಪಡೆದಿದ್ದಾನೆ. ನನಗೆ ಕಲಿಸಿದ್ದಕ್ಕಿಂತ ಹೆಚ್ಚಿಗೆ ಅವನಿಗೆ ಕಲಿಸಿದ್ದೀರಿ' ಎಂದು ಆಕ್ಷೇಪಿಸಲು ದ್ರೋಣ ಹೋಗಿ ಏಕಲವ್ಯನನ್ನು ಕಂಡು ಅವನಿಂದ ಹೆಬ್ಬೆಟ್ಟಿನ 'ಗುರುದಕ್ಷಿಣೆ' ಪಡೆದುಬಂದ ವೃತ್ತಾಂತವನ್ನು ನನ್ನಯ ಸಂಕ್ಷೇಪವಾಗಿ ಹೇಳಿದ್ದಾನೆ. ಇಲ್ಲಿ ಏಕಲವ್ಯನ ಅಪೂರ್ವವಾದ ಗುರುಭಕ್ತಿ ಪ್ರಕಟವಾಗುವುದಕ್ಕಿಂತ ಹೆಚ್ಚಾಗಿ ದ್ರೋಣರ ಕುಯುಕ್ತಿ ಪ್ರಕಟವಾಗಿದೆಯೆಂದು ನಮ್ಮ ಪಂಪ ಭಾವಿಸಿದಂತೆ ತೋರುತ್ತದೆ. ಆದ್ದರಿಂದಲೇ ಅವನು ಈ ಪ್ರಸಕ್ತಿಯನ್ನೇ ಎತ್ತಿಲ್ಲ.

ಅರ್ಜುನನಿಗೂ ಕರ್ಣನಿಗೂ ಸ್ಪರ್ಧೆ ಹುಟ್ಟಿತೆಂದೂ 'ಕರ್ಣಂ ಗುಣಾರ್ಣವನೊಳ್ ಸೆಣಸಿ ಪಗೆಯನಭ್ಯಾಸಂಗೆಯ್ವಂತೆ ವಿದ್ಯಾಭ್ಯಾಸಂಗೆಯ್ಯೆ' ಎಂದು ನುಡಿದು ಕರ್ಣನ ಮನಸ್ಸಿನಲ್ಲಿ ಅರ್ಜುನನ ಮೇಲೆ ವೈರವೇ ಹುಟ್ಟಿತೆಂದೂ ಪಂಪ ಹೇಳಿದ್ದಾನೆ. ಈ ವೈರಕ್ಕೆ ಕಾರಣ ಬಹುಶಃ ಅನ್ಯಜನ್ಮದ ಮುಳಿಸೇ ಇರಬೇಕು. ಭೀಮ ದುರ್ಯೋಧನರಿಗಂತೂ ಜನ್ಮಾಂತರ ವೈರವೇ ಇದ್ದಿತೆಂದು ಪಂಪನ ಹೇಳಿಕೆ.

> ಮನದೊಳಗೊಗೆದನ್ಯಜನ್ಮದ
> ಮುನಿಸದು ಕಣ್ಣಿಂ ತುಳುಂಕೆ ಸೈರಿಸದವನು
> ರ್ವಿನ ಕಲಿತನಕ್ಕೆ ದುರ್ಯೋ
> ಧನನುಂ ಭೀಮನೊಳೆ ಸೆಣಸಿ ಗದೆಯುಂ ಕಲ್ತಂ.

ಜೈನ ಪುರಾಣಗಳಲ್ಲಿ ಭವಾಂತರ ಸ್ನೇಹ ವೈರಗಳ ಪ್ರಸ್ತಾಪ ಸಾಮಾನ್ಯ ವಿಚಾರ. ಪಂಪ ಅಭ್ಯಾಸಬಲದಿಂದಲೋ ಎಂಬಂತೆ ಇಲ್ಲಿ ಭಾರತವೀರರ ನಡುವೆಯೂ 'ಅನ್ಯಜನ್ಮದ ಮುನಿಸ'ನ್ನು ತಂದುಹಾಕಿದ್ದಾನೆ. ಇದು ವ್ಯಾಸನಾಗಲಿ ನನ್ನಯನಾಗಲಿ ಹೇಳಿರುವ ವಿಷಯವಲ್ಲ.

'ಅಂತು ಭಾರದ್ವಾಜನಾಗಾಮಿಕಸಂಗ್ರಾಮರಂಗಕ್ಕೆ ಪಾತ್ರಗಳಂ ಸಮೆಯಿಸುವ ಸೂತ್ರಧಾರನಂತೆ ಶಸ್ತ್ರವಿದ್ಯಾಭ್ಯಾಸಂಗೆಯ್ಯುತ್ತಿರೆ' ಎಂಬ ಪಂಪನ ವರ್ಣನೆ ಬಹಳ ರಮಣೀಯವಾಗಿದೆ. ದ್ರೋಣನಿಂದ ವಿದ್ಯೆ ಕಲಿತ ಆ ಕುಮಾರರೇ ಮುಂದೆ ಕುರುಕ್ಷೇತ್ರದಲ್ಲಿ ನಡೆದ ಭಾರತಯುದ್ಧದಲ್ಲಿ ಹೋರಾಡುವವರು. ರಂಗದಮೇಲೆ ಕುಣಿಯುವ ಬೊಂಬೆಗಳನ್ನು ಅಲಂಕಾರಮಾಡಿ ಸಿದ್ಧಪಡಿಸುವ ಸೂತ್ರಧಾರ ನಾಯಕ ಖಳನಾಯಕರಿಬ್ಬರ ಬೊಂಬೆಗಳನ್ನೂ ಒಂದೇ ರೀತಿಯಾದ ಶ್ರದ್ಧೆಯಿಂದ ಸಜ್ಜುಗೊಳಿಸುವ ಹಾಗೆ ದ್ರೋಣ ಪಾಂಡವರಿಗೂ ಕೌರವರಿಗೂ ಕರ್ಣನಿಗೂ ಏಕರೀತಿಯಾದ ಮಮತೆಯಿಂದ ವಿದ್ಯೆ ಕಲಿಸಿದನೆಂಬುದು ಕವಿಯ ಆಶಯವೆಂದು ತೋರುತ್ತದೆ. ಆದರೆ ದ್ರೋಣನಿಗೆ ಅವರು ಪರಸ್ಪರ ಕಾದಾಡಲೆಂಬ ಉದ್ದೇಶವಿರಲಿಲ್ಲ. ಮುಂದೆ ಅಂಥ ಕುಲವಿನಾಶಕ ಯುದ್ಧದಲ್ಲಿ ಆ ಕುಮಾರರು ತೊಡಗಬಹುದೆಂಬ ಸಂಶಯವೂ ಆ ಕಟಕಾಚಾರ್ಯನ ಮನಸ್ಸಿನಲ್ಲಿ ಮೂಡಿರಲಾರದು. ಆದರೆ ಆ ಯುದ್ಧದಲ್ಲಿ ಈ 'ಸೂತ್ರಧಾರ'ನಾದ ದ್ರೋಣನೂ ಅವನನ್ನು ಈ ಕೆಲಸಕ್ಕೆ ನೇಮಿಸಿದ ಭೀಷ್ಮನೂ ಕಾದಿ ಮಡಿದರು!

ದ್ರೋಣ ಎಲ್ಲ ಶಿಷ್ಯರನ್ನೂ ಏಕರೀತಿಯಾದ ಪ್ರೀತಿಯಿಂದ ತರಬಿಯತ್ತು ಮಾಡಿದನಾದರೂ ಅರ್ಜುನನ ಮೇಲೆ ಆತನಿಗೆ ಅತಿಶಯವಾದ ಪ್ರೀತಿ ಹುಟ್ಟಿತು. ಅವನು ಧನುರ್ವಿದ್ಯೆಯಲ್ಲಿ ನಿಪುಣನಾದ. ಅಲ್ಲದೆ 'ಗುರುದಕ್ಷಿಣೆ' ಕೊಡಬೇಕೆಂದು ದ್ರೋಣ ಹೇಳಿದಾಗ ಮಿಕ್ಕೆಲ್ಲ ಕುಮಾರರೂ ಸುಮ್ಮನಿದ್ದರೂ ಅರ್ಜುನ ಮಾತ್ರ 'ನಾನೀವೆಂ ನಿಮ್ಮ ಬಯಸಿ ಬೇಟ್ಟುದನ್' ಎಂದು ಮೊದಲೇ ಭಾಷೆ ಕೊಟ್ಟಿದ್ದನು! ಅವನೊಬ್ಬನೇ ಧನುರಾಗಮದಲ್ಲಿ ಕುಶಲನಾಗುವನೆಂದು ದ್ರೋಣ ಮೊದಲೇ ನಿರ್ಧರಿಸಿಕೊಂಡಿದ್ದನು. ಅದಕ್ಕೆ ತಕ್ಕಂತೆ ಅರ್ಜುನ ಬಹಳ ಶ್ರದ್ಧೆಯಿಂದ ಕಲಿತು ಪರಿಣತನಾಗಿ 'ದೇಶಾಧೀಶ್ವರರಪ್ಪ ಪಲಂಬರ್ ರಾಜಕುಮಾರರ ನಡುವೆ ತಾರಾಗಣಂಗಳ ನಡುವಣ ಸಕಳಕಳಾಧರನಂತೆ ಶಸ್ತ್ರಕಳಾಧರನಾಗಿ ಮೆರೆದನು!'

ದ್ರೋಣ ಅರ್ಜುನನ ಶರಪರಿಣತಿಯನ್ನು ನಾನಾರೀತಿಯಾಗಿ ಪರೀಕ್ಷಿಸಿ ತನ್ನ ಮನಸ್ಸಿಗೆ ಧೈರ್ಯಮಾಡಿಕೊಂಡನು. ಆ ಪರೀಕ್ಷಾಕ್ರಮವನ್ನು ನನ್ನಯಭಟ್ಟ ಹತ್ತು ಪದ್ಯಗಳಷ್ಟು ವಿಸ್ತಾರವಾಗಿ ವರ್ಣಿಸಿದ್ದರೆ ಪಂಪ ಅದನ್ನು ಒಂದು ಪುಟ್ಟ ಕಂದಪದ್ಯ ಹೇಳಿ ಮುಗಿಸಿದ್ದಾನೆ.

> ಛಾಯಾ ಲಕ್ಷ್ಯಮನೊಡ್ಡಿಯು
> ಮಾಯದ ನೀರೊಳಗೆ ತನ್ನ ನಡಸಿದ ಸೆಗೞಂ
> ಬಾಯಟಿವಿನಮಿಸಿಯು ಮರೆ
> ಹೋ ಯಜ ಬಾಪೆಂದು ಹರಿಗನಂ ಗುರು ಪೊಗೞ್ದಂ

ಅರ್ಜುನನ ಅಸ್ತ್ರಕುಶಲತೆಯನ್ನು ಹಲವು ಬಗೆಯಾಗಿ ಪರಿಕಿಸಿ ತೃಪ್ತಿಪಟ್ಟು ಇವನಿಂದಲೇ ತನ್ನ ಹಗೆಯನ್ನು ಸಾಧಿಸಬೇಕೆಂದು ನಿಶ್ಚಯಿಸಿ ಅವನಿಗೆ ದ್ರುಪದನನ್ನು

ಹಿಡಿದುತರುವ ಕೆಲಸವನ್ನು ಒಪ್ಪಿಸಿದನೆಂದೂ ಅರ್ಜುನ ಒಡನೆಯೇ ಪಾಂಚಾಲನ ಮೇಲೆ ನುಗ್ಗಿಹೋಗಿ ಖಾಡಾಖಾಡಿ ಯುದ್ಧದಲ್ಲಿ ಅವನನ್ನು ಹಿಡಿದು ಕಟ್ಟಿತಂದು ಆಚಾರ್ಯನಿಗೆ ಒಪ್ಪಿಸಿದನೆಂದೂ ಪಂಪ ಹೇಳಿದ್ದಾನೆ.

ನನ್ನಯಭಟ್ಟನೂ ವ್ಯಾಸನೂ ಕುಮಾರರ ಅಸ್ತ್ರಪ್ರದರ್ಶನ ಸಮಾರಂಭವಾದ ಮೇಲೆ ಈ ಯುದ್ಧ ನಡೆಯಿತೆಂದು ಹೇಳಿದ್ದಾರೆ. ಸಮಸ್ತ ಕೌರವರೂ ಪಾಂಡವರೂ ದ್ರುಪದನ ಮೇಲೆ ಯುದ್ಧಕ್ಕೆ ಹೋದರೆಂದೂ ಆದರೆ ಯಾರೂ ಅವನನ್ನು ಗೆಲ್ಲಲಾಗದೆ ಸೋತು ಹಿಮ್ಮೆಟ್ಟುವ ಸ್ಥಿತಿಗೆ ಬಂದಾಗ ಪಾರ್ಥ ಮುನ್ನುಗ್ಗಿ ದ್ರುಪದನನ್ನು ಗೆದ್ದ ನೆಂದೂ ಹೇಳಿದ್ದಾರೆ. 'ಪರಾಕ್ರಮಧವಳ'ನಿಗೆ ಅನ್ಯರ ನೆರವೇಕೆ ಬೇಕು? ಅವನೊಬ್ಬನೇ ದ್ರುಪದನ ಮೇಲೆ ದಾಳಿಯಿಟ್ಟು ಕೃತಕೃತ್ಯನಾಗಿ ಗುರುದಕ್ಷಿಣೆ ಸಮರ್ಪಿಸಿದನೆಂದು ಹೇಳುವುದರಲ್ಲಿ ಕವಿತಾಗುಣಾರ್ಣವನಿಗೆ ಹೆಚ್ಚಿನ ಸಂತೋಷವಿದೆ. ಇಲ್ಲಿಗೆ ಅರ್ಜುನನ ಯುದ್ಧ ಕೌಶಲವನ್ನು ಕೇವಲ ಗರಡಿಯಲ್ಲಿ ಮಾತ್ರವೇ ಅಲ್ಲದೆ ರಣರಂಗದಲ್ಲಿಯೂ ಒರೆ ಹಚ್ಚಿ ನೋಡಿದಂತಾಯಿತು.

ಪೂರ್ಣವಿದ್ಯರಾದ ಕುಮಾರರ ಶಸ್ತ್ರಾಸ್ತ್ರ ಕೌಶಲವನ್ನು ಭೀಷ್ಮ ಧೃತರಾಷ್ಟ್ರ ವಿದುರಾದಿಗಳೆದುರಿಗೆ ಪ್ರದರ್ಶನಮಾಡಿಸಬೇಕೆಂಬ ಸಂಕಲ್ಪ ಕಟಕಾಚಾರ್ಯನಲ್ಲಿ ಮೂಡಿತು. ಅವನು ಗಾಂಗೇಯನಿಗೆ ತನ್ನ ಉದ್ದೇಶವನ್ನು ತಿಳಿಸಿದನು. ಒಡನೆಯೇ ಹೊರವೊಳಲಿನಲ್ಲಿ ಸಮಚತುರಸ್ರವಾದ ಒಂದು ಪ್ರದೇಶವನ್ನಾರಿಸಿ ಭೂ ಶೋಧನೆ ಮಾಡಿ ಒಂದು ಉತ್ತಮವಾದ ವ್ಯಾಯಾಮ ರಂಗವನ್ನು ಭೀಷ್ಮ ಸಿದ್ಧಮಾಡಿಸಿದನು. ಶುಭಮುಹೂರ್ತದಲ್ಲಿ ಪ್ರದರ್ಶನ ಆರಂಭವಾಯಿತು.

## ರಂಗ ಪ್ರವೇಶಂ

ವ್ಯಾಯಾಮರಂಗದ ಮೇಲೆ ದ್ರೋಣನು ಕೃತವಿದ್ಯರಾದ ರಾಜಕುಮಾರರನ್ನು ಪ್ರವೇಶ ಮಾಡಿಸಿ ಅವರು ಅಭ್ಯಾಸಪೂರ್ವಕವಾಗಿ ಕಲಿತ ಶಸ್ತ್ರಾಸ್ತ್ರ ಕೌಶಲವನ್ನೂ ಯುದ್ಧವಿದ್ಯಾ ಪಾಂಡಿತ್ಯವನ್ನೂ ನೋಟಕರೆದುರಿಗೆ ಪ್ರದರ್ಶನ ಮಾಡಿಸಿದ ಕ್ರಮ ವನ್ನು ಪಂಪ ಬಹಳ ರಸವತ್ತಾಗಿ ನಿರೂಪಿಸಿದ್ದಾನೆ. ರಂಗದ ಸುತ್ತಲೂ ಕಟ್ಟಿ ಸಿದ್ಧಪಡಿಸಿದ್ದ ಚೌಪಳಿಗೆಗಳಲ್ಲಿ ಗಾಂಗೇಯ ಧೃತರಾಷ್ಟ್ರ ವಿದುರ ಸೋಮದತ್ತ ಬಾಹ್ಲೀಕ ಭೂರಿಶ್ರವಾದಿ ಕುಲವೃದ್ಧರು ಕುಂತಿ ಗಾಂಧಾರಿಯರೊಡನೆ ಬಂದು ಕುಳಿತು ಕೊಂಡರು. ಪುರಜನ ಪರಿಜನರೂ ಸುತ್ತ ನೆರೆದಿದ್ದರು. ಆಗ ಮೊದಲು ದ್ರೋಣ ರಂಗ ಪ್ರವೇಶ ಮಾಡಿದನು. ಕಟಕಾಚಾರ್ಯನ ವ್ಯಕ್ತಿಚಿತ್ರವನ್ನು ಪಂಪ ಒಂದು ಪದ್ಯದಲ್ಲಿ ಚಿತ್ರಿಸಿದ್ದಾನೆ.

> ಪೊಸಮುತ್ತಿನ ತುಡಿಗೆ ಪೊದ
> ಱ್ದೆಸೆಯೆ ದುಕೂಲಾಂಬರಂ ನಿಜಾಂಗದೊಳಂ ಸಂ
> ದೆಸೆದಿರೆ ಬೆಳ್ಳುಗಿಲಿಂದಂ
> ಮುಸುಕಿದ ನೀಲಾದ್ರಿ ಬರ್ಪ ತೆಱದೊಳ್ ಬಂದಂ

ದ್ರೋಣ ಕೃಷ್ಣವರ್ಣದವನು. ಅವನು ನೀಲಾದ್ರಿಯಂತಿದ್ದನು. ಅವನು ಧರಿಸಿದ
ಮುತ್ತಿನ ಆಭರಣ, ದುಕೂಲಾಂಬರ, ಇವು ನೀಲಾದ್ರಿಗೆ ಮುತ್ತಿಕೊಂಡಿದ್ದ ಬಿಳಿಯ
ಮುಗಿಲುಗಳಂತೆ ಇದ್ದುವು. ಕವಿ ನೀಲಾದ್ರಿಯ ಹೋಲಿಕೆಯಿಂದ ದ್ರೋಣನ ಮೈ
ಬಣ್ಣವನ್ನಷ್ಟೇ ಅಲ್ಲದೆ ಆತನ ಆಕಾರ ಭವ್ಯತೆಯನ್ನೂ ಸೂಚಿಸಿದ್ದಾನೆ. ದ್ರೋಣ
ರಂಗದ ಮೇಲೆ ಬಂದ ಕೂಡಲೆ ಪುಣ್ಯಾಹ ಸ್ವರ ಕೇಳಿಸಿತು. ಪಟು ಪಟಹ ಕಹಳಾ
ರವಗಳು ಮೊಳಗಿದವು! ಆಮೇಲೆ ಆಚಾರ್ಯನು ಕುಮಾರರನ್ನು ಬರಹೇಳಿದನು.
ಆ ಕೂಡಲೆ ಪ್ರಚಂಡ ಕೋದಂಡಧರರು ಕುಲಪರ್ವತಗಳೂ ದಿಗ್ಗಜಗಳೂ ಒಟ್ಟು
ಗೂಡಿ ಬರುವ ಹಾಗೆ ಗಂಭೀರವಾಗಿ ರಂಗ ಪ್ರವೇಶಮಾಡಿದರು. ಧರ್ಮರಾಯ
ನನ್ನು ಮುಂದಿಟ್ಟುಕೊಂಡು ಪಾಂಡವರೂ ಸುಯೋಧನನನ್ನು ಮುಂದಿಟ್ಟುಕೊಂಡು
ಕೌರವರೂ ಪ್ರವೇಶಿಸಿದರು. ಪ್ರವೇಶಿಸಿಯಾದಮೇಲೆ ಎಲ್ಲರೂ ಗಜಾರೋಹಣ
ರಥಾರೋಹಣ ಅಶ್ವಾರೋಹಣಗಳಲ್ಲಿ ತಮಗಿದ್ದ ಕೌಶಲವನ್ನು ಮೆರೆದು ಜನರ
ಮೆಚ್ಚಿಗೆಗೆ ಪಾತ್ರರಾದರು. ಆಮೇಲೆ ಅಸ್ತ್ರ ಪಾಂಡಿತ್ಯವನ್ನು ತೋರಿದರು.

ಸಾಮೂಹಿಕವಾದ ಈ ಪ್ರದರ್ಶನ ಮುಗಿದ ಮೇಲೆ ಭೀಮ ದುರ್ಯೋಧನರು
ರಂಗ ಪ್ರವೇಶಮಾಡಿ ಗದಾಯುದ್ಧವನ್ನು ವಿಶೇಷವಾದ ಸಾಮರ್ಥ್ಯದಿಂದ ಮಾಡ
ತೊಡಗಿದರು. ಅವರ ಗದಾಕೌಶಲ ಮಿಕ್ಕೆಲ್ಲರಿಗಿಂತ ಮಿಗಿಲಾದುದೇ ಸರಿ. ಆದರೆ
ಅವರು ಅದು ವ್ಯಾಯಾಮ ಪ್ರದರ್ಶನ ರಂಗವೆಂಬುದನ್ನು ಮರೆತು ರಣರಂಗ
ದಂತೆಯೇ ಭಾವಿಸಿ ಒಬ್ಬರನ್ನೊಬ್ಬರು ಮೂಳೆ ಮುರಿಯುವಂತೆ ಚಚ್ಚಬೇಕೆಂದು
ಹವಣಿಸಿದರು. ಅವರ ಮುಳಿಸನ್ನು ಅರಿತ ಕಟಕಾಚಾರ್ಯನು ಆ ವೀರಕುಮಾರರ
ಇಂಗಿತವನ್ನು ಅರಿತು ಅವರಿಬ್ಬರ ನಡುವೆ ಪ್ರವೇಶಿಸುವಂತೆ ತನ್ನ ಮಗ ಅಶ್ವತ್ಥಾಮನಿಗೆ
ಅಪ್ಪಣೆ ಮಾಡಿದನು! 'ಅಂತು ಮೇರೆದಪ್ಪಲ್ ಬಗೆದ ಮಹಾಸಮುದ್ರಂಗಳೆರಡಱ
ನಡುವೆ ಕುಲಗಿರಿಯಿರ್ಪಂತಿರ್ದಶ್ವತ್ಥಾಮನಂ ಕಂಡು ಇರ್ವರುಂ ಎರಡು ದೆಸೆಗೆ
ತೊಲಗಿ ನಿಂದ'ರಂತೆ! ಭೀಮದುರ್ಯೋಧನರನ್ನು ಪಂಪ ಮಹಾಸಮುದ್ರಗಳಿಗೆ
ಹೋಲಿಸಿದ್ದಾನೆ. ಅವರ ಆಕಾರ ಭವ್ಯತೆ ಬಾಹುಬಲ ಯುದ್ಧಪರಾಕ್ರಮ ಎಲ್ಲ
ಅಮೇಯವಾದುವು. ಸಮುದ್ರ ಉಕ್ಕಿ ಹರಿದರೆ ಯಾರು ತಡೆಯಬಹುದು? ಅದು
ಕುಲಪರ್ವತಕ್ಕೆ ಮಾತ್ರ ಸಾಧ್ಯ! ಅಶ್ವತ್ಥಾಮ ಕುಲಪರ್ವತದಂತೆಯೇ ಅಚಂಚಲ
ನಾಗಿ ಧೀರತೆಯಿಂದ ಮಧ್ಯೆ ನಿಂತುಬಿಟ್ಟನು! ವಿಧಿಯಿಲ್ಲದೆ ಭೀಮ ದುರ್ಯೋಧ
ನರು ಹಿಂದೆ ಸರಿಯಬೇಕಾಯಿತು. ತನ್ನ ಏಕಮಾತ್ರ ಪುತ್ರನನ್ನು ಈ ಪ್ರಚಂಡ
ಯೋಧರ ಮಧ್ಯಕ್ಕೆ ನುಗ್ಗಿಸಬೇಕಾದರೆ ಆ ಪುತ್ರಪ್ರಾಣನಾದ ದ್ರೋಣನಿಗೆ ಅವನ
ಪರಾಕ್ರಮದಲ್ಲಿ ಎಷ್ಟು ನಂಬಿಕೆಯಿತ್ತೊ? ಭೀಮ ದುರ್ಯೋಧನರು ಕೂಡ ಎಂಥ
ಕೋಪದ ಹೊತ್ತಿನಲ್ಲಿಯೂ ಗುರುಪುತ್ರನಿಗೆ ಘಾಸಿಮಾಡರೆಂಬ ದೃಢ ವಿಶ್ವಾಸವಿನ್ನೆ
ಷ್ಟಿತ್ತೊ! ಅಂತು ನಮ್ಮ ಕವಿ ಅಶ್ವತ್ಥಾಮನನ್ನು ಕುಲಗಿರಿಗೆ ಹೋಲಿಸಿ ಅವನ
ಆಕಾರದ ಒಂದು ಸ್ಪಷ್ಟ ಕಲ್ಪನೆಯನ್ನು ಒಂದೇ ಮಾತಿನಲ್ಲಿ ಮಾಡಿಕೊಟ್ಟಿದ್ದಾನೆ.

ನನ್ನಯಭಟ್ಟ ಈ ಸನ್ನಿವೇಶವನ್ನು ಇನ್ನೂ ವಿಸ್ತಾರವಾಗಿ ವರ್ಣಿಸಿದ್ದಾನೆ. ಭೀಮ ದುರ್ಯೋಧನರನ್ನು ಅಶ್ವತ್ಥಾಮ ದ್ರೋಣನ ಇಚ್ಛೆಯಂತೆ ಬೇರೆ ಮಾಡಿಸಿದ ಅಂಶವನ್ನೂ ಹೇಳಿದ್ದಾನೆ. ಆದರೆ ನನ್ನಯನ ದ್ರೋಣ ಆ ಗದಾಪಾಣಿಗಳ ಇಂಗಿತವನ್ನು ಗಮನಿಸಲಿಲ್ಲ; ಅವರ ಗದಾಕೌಶಲ ಪ್ರದರ್ಶನವನ್ನು ನೋಡುತ್ತಿದ್ದ ಜನರ 'ಪಕ್ಷಪಾತ ಜನಿತ ಪರಸ್ಪರ ಕ್ರೋಧ ವಚನಗಳನ್ನು ಕೇಳಿ ರಂಗ ಭಂಗ ಭಯದಿಂದ ಅಶ್ವತ್ಥಾಮನನ್ನು ಕಳುಹಿಸಿ ಅವರಿಬ್ಬರನ್ನೂ ವಾರಿಸಿ ವಾರಾಶಿಯಂತೆ ಮೊಳಗುತ್ತಿದ್ದ ವಾದಿತ್ರ ಶಬ್ದಗಳನ್ನು ನಿಲ್ಲಿಸಿ ನನ್ನ ಪ್ರಿಯ ಶಿಷ್ಯನಾದ ಅರ್ಜುನನ ಧನುಃಕೌಶಲವನ್ನು ನೋಡಿ' ಎಂದು ಹೇಳಿ ಅವನನ್ನು ರಂಗದ ಮೇಲೆ ಪ್ರವೇಶ ಮಾಡಿಸಿದನು. ಇಲ್ಲಿ ಭೀಮ ದುರ್ಯೋಧನ ಅಶ್ವತ್ಥಾಮರಿಗೆ ಕನ್ನಡದ ಕವಿ ಕೊಟ್ಟಿರುವ ಸುಂದರ ಉಪಮಾನಗಳಿಲ್ಲದೆ ಈ ವರ್ಣನೆ ಕಾಂತಿಹೀನವಾಗಿದೆ. ದ್ರೋಣನಿಗೆ ಜನರ ಮಾತು ಕೇಳಿ ರಂಗಕ್ಕೆ ಎಲ್ಲಿ ಭಂಗ ಬರುವುದೋ ಎಂಬ ಭಯವಾಯಿತಂತೆ!

ಮೂಲ ಭಾರತದಲ್ಲಿ ಭೀಮ ದುರ್ಯೋಧನರ ಗದಾ ಪ್ರದರ್ಶನವನ್ನು ಅಶ್ವತ್ಥಾಮ ನಿಲ್ಲಿಸಿದ ವಿಚಾರವನ್ನು ಹೇಳುತ್ತಾ ವ್ಯಾಸರು

'ತತಸ್ತಾವುದ್ಯತ ಗದೌ ಗುರುಪುತ್ರೇಣ ವಾರಿತೌ
ಯುಗಾಂತಾನಿಲ ಸಂಕ್ಷುಬ್ಧೌ ಮಹಾವೇಲಾನಿವಾರ್ಣವೌ'

ಎಂದು ಹೇಳಿದ್ದಾರೆ. ಪ್ರಳಯ ಕಾಲದ ಗಾಳಿಯಿಂದ ಸಂಕ್ಷೋಭೆಗೊಂಡು ದಡ ಮೀರಿದ ಮಹಾರ್ಣವದ ಹೋಲಿಕೆ ಇಲ್ಲಿದೆ. ಪಂಪ ಇಲ್ಲಿ ವ್ಯಾಸರ ವರ್ಣನೆಯಿಂದ ಸ್ಫೂರ್ತಿ ಪಡೆದು ಜತೆಗೆ ತಾನು ಅಶ್ವತ್ಥಾಮನನ್ನು ಕುಲಪರ್ವತಕ್ಕೆ ಹೋಲಿಸಿ ವರ್ಣನೆಯ ಸೊಬಗನ್ನು ಹೆಚ್ಚಿಸಿದ್ದಾನೆ!

ಅನಂತರ ಅರ್ಜುನನ ಬಿಲ್ಲುಗಾರಿಕೆಯ ವೈಭವದ ಪ್ರದರ್ಶನ ಆರಂಭವಾಯಿತು. ಪಂಪನಂತು ಇದನ್ನು ಬಾಯಿತುಂಬ ಹೊಗಳಿ ರಸಸ್ಯಂದಿಯಾದ ಭಾಷೆಯಲ್ಲಿ ಹೇಳಿದ್ದಾನೆ. ಪರಾಕ್ರಮಧವಳನ ಶರ ಪರಿಣತಿಯನ್ನು ಹೊಗಳುವುದರಲ್ಲಿ ಪಂಪನಿಗೆ ಕಾರ್ಪಣ್ಯ ಬಂದೀತೆ? ಆತನ ಉಪಮಾತೀತ ಸಾಹಸ ವೈರಿಗಜ ಘಟಾ ವಿಘಟನ ಕೌಶಲ ನೋಟಕರನ್ನು ಬೆರಗುಗೊಳಿಸಿತು. ಎಲ್ಲರೂ ಹರ್ಷದಿಂದ ಘೋಷಣೆ ಮಾಡಿದರು. ಆದರೆ ದುರ್ಯೋಧನನಿಗೆ ಮಾತ್ರ ಸಂತೋಷವಾಗಲಿಲ್ಲ. ಅವನ ಮುಖ ಕಾಂತಿಹೀನವಾಯಿತು. ಅವನ ಮನದಲ್ಲಿ ಸಂತೋಷ ಸುಕ್ಕಿಹೋಯಿತು. 'ದುರ್ಯೋಧನನ ಮೊಗಂ ತಲೆ ನವಿರ ಗಂಟಂ ಕಿಱಿದಾ'ಯ್ತೆಂದು ಒಂದು ಮಾತಿನಲ್ಲಿ ಪಂಪ ಅವನ ಮನಸ್ಸಿನ ತಳಮಳ ಅಸೂಯೆ ನಿರುತ್ಸಾಹಗಳನ್ನು ಯಶಸ್ವಿಯಾಗಿ ವ್ಯಕ್ತಪಡಿಸಿದ್ದಾನೆ. ನನ್ನಯಭಟ್ಟ ಈ ಸನ್ನಿವೇಶದಲ್ಲಿ ಸುಯೋಧನನ ಮನೋಭಾವವನ್ನು ಹೇಳುವ ಗೋಜಿಗೇ ಹೋಗಿಲ್ಲ. ವ್ಯಾಸರ ಧೃತರಾಷ್ಟ್ರನು ವಿದುರನಿಂದ

ಪಾರ್ಥನ ಬಾಣ ಕೌಶಲ ವರ್ಣನೆಯನ್ನು ಕೇಳಿ 'ಧನ್ಯೋಸ್ಯ್ರ ನುಗ್ರಹೀತೋಸ್ಮಿ ರಕ್ಷಿತೋಸ್ಮಿ ಮಹಾಮತೇ। ಪೃಥಾರಣಿ ಸಮುದ್ಭೂತೈಸ್ತ್ರಿಭಿಃ ಪಾಂಡವ ವಹ್ನಿಭಿಃ' ಎಂದು ತನ್ನ ಮೆಚ್ಚಿಗೆಯನ್ನು ವ್ಯಕ್ತಪಡಿಸಿದನಂತೆ! ಕೌಂತೇಯರು ಮೂವರನ್ನು ಪೃಥೆಯೆಂಬ ಅರಣಿಯಲ್ಲಿ ಸಮುದ್ಭವಿಸಿದ ಮೂರು ಅಗ್ನಿಗಳು ಎಂದು ವರ್ಣಿಸಿ ಅಂಥ ರಾಜನು ತನ್ನ ಮನಸ್ಸಿನಲ್ಲಿ ಮೂಡಿದ ಅಸೂಯೆಯನ್ನೂ ಭೀತಿಯನ್ನೂ ಮರೆಮಾಚ ಲಾರದೆ ಹೋದನು.

ನೋಟಕರೆಲ್ಲ ಅರ್ಜುನನ ಅಸಾಧಾರಣವಾದ ಬಾಣ ಕೌಶಲವನ್ನು ಮೆಚ್ಚಿ ಕೊಳ್ಳುತ್ತಿದ್ದ ಹೊತ್ತಿನಲ್ಲಿ ರಂಗದ ಹೆಬ್ಬಾಗಿಲಲ್ಲಿ ವಜ್ರನಿಷ್ಪೇಷಸದೃಶವಾದ ಭುಜಾ ಸ್ಫಾಲನದ ಸದ್ದು ಕೇಳಿಸಿತು. ಅದೇನೆಂದು ಪ್ರೇಕ್ಷಕರೆಲ್ಲ ಬೆರಗಾಗಿ ಅತ್ತಲೇ ಕಣ್ಣಾಗಿ ನೋಡುತ್ತಿರಲು ಸೂರ್ಯಪುತ್ರನಾದ ಕರ್ಣನು ಧನುರ್ಧಾರಿಯಾಗಿ ಪ್ರವೇಶಿಸಿದನು. ಅವನು ರಂಗದ ಬಳಿಗೆ ಬಂದವನೇ ದ್ರೋಣನಿಗೆ ನಮಸ್ಕಾರ ಮಾಡಿ ಬತ್ತಳಿಕೆಯಿಂದ ಬಾಣಗಳನ್ನೆಳೆದುಕೊಂಡು ಅಲ್ಲಿಯ ತನಕ ಅರ್ಜುನನು ತೋರಿದ ಚಮತ್ಕಾರ ಗಳನ್ನೆಲ್ಲಾ ತಾನೂ ಮಾಡಿ ತೋರಿಸಿದನು. ಆದರೆ ಅಷ್ಟರಿಂದ ಅವನಿಗೆ ಸಮಾಧಾನ ವಾಗಲಿಲ್ಲ. 'ಎರ್ದೆಯ ಮುಳಿಸು ನಾಲಗೆಗೆ ವರೆ ಸೈರಿಸಲಾಱದೆ' ಅರ್ಜುನನನ್ನು ಸಂಬೋಧಿಸಿ ಹೀಗೆ ಹೇಳಿದನು.

> ಸಂಗತದಿನೀಗಳಿಂತೀ
> ರಂಗಮ ರಣರಂಗಮಾಗೆ ಕಾದುವಮಳವಂ
> ಪೊಂಗದಿರಿರ್ದರ್ಜದೇಂ ಗಳ
> ರಂಗಂ ಬೊಕ್ಕಾಡುವಂತೆ ಪೆಂಡಿರೆ ಗಂಡರ್ ?

ಈ ಮೂದಲಿಕೆ 'ವಿದ್ವಿಷ್ಟ ವಿದ್ರಾವಣ'ನಿಗೆ ಸಹನೆಯಾಗುವುದುಂಟೆ? ಅರ್ಜುನ ನೇನು ಹೇಡಿಯೆ? ಅವನು ಈ ವೀರನ ಆಹ್ವಾನವನ್ನು ಅಂಗೀಕರಿಸಿ

> ನೀನೆನ್ನೀ ನಿಡುದೋಳ್ಗಳ
> ತೀನಂ ಮಟ್ಟಿಸುವೆಯಪ್ಪೊಡಾನೊಲ್ಲದನೇ'

ಎಂದು ನುಡಿದು ಕರ್ಣನೊಡನೆ ಕಾಳಗಕ್ಕೆ ಅನುವಾದನು. ಇನ್ನೇನು ಕರ್ಣಾರ್ಜುನರು ಕಾಳಗಕ್ಕೆ ತೊಡಗಬೇಕೆಂಬಾಗ ಕೃಪ ದ್ರೋಣರು ಅಡ್ಡ ಬಂದು ಕರ್ಣನನ್ನು ದಂಡಿಸಿ ದರು.

> ವಿವದ ಮುಳಿಸಿನ ಕಾರಣ
> ಮಾವುದೊ ನೀಂ ನಿನ್ನ ತಾಯ ತಂದೆಯ ದೆಸೆಯುಂ
> ಭಾವಿಸದೆ ಕರ್ಣ ನುಡಿವಂ
> ತಾವುದು ಸಮಕಟ್ಟು ನಿನಗಮರಿಕೇಸರಿಗಂ ?

ಈ ಪ್ರಶ್ನೆಗೆ ಕರ್ಣನಲ್ಲಿ ಉತ್ತರವಿರಲಿಲ್ಲ. ಅವನು ಮೌನದಿಂದ ನಿಂತನು. ಅವನ

ಮುಖ ಬೆವರತೊಡಗಿತು. ಇದನ್ನೆಲ್ಲ ಗಮನಿಸಿ ನೋಡುತ್ತಿದ್ದ ದುರ್ಯೋಧನನು

ಕುಲಮೆಂಬುದುಂಟೆ ಬೀರಮು
ಕುಲಮಲ್ಲದೆ ಕುಲಮನೆನಿತು ಪಿಕ್ಕದಿರಿಂ ನೀ
ಮೊಲಿದೆಲ್ಲಿ ಪುಟ್ಟ ಬಳೆದಿರೊ
ಕುಲಮಿರ್ದುದೆ ಕೊಡದೊಳಂ ಶರಸ್ತಂಬದೊಳಂ

ಎಂದು ಪ್ರಶ್ನಿಸಿ ಕೃಪದ್ರೋಣರನ್ನು ಪೇಚಿನಲ್ಲಿ ಕೆಡವಿದನು. ಅಷ್ಟಕ್ಕೆ ನಿಲ್ಲದೆ ಅವನು ಮುಂದುವರಿದು ಕರ್ಣನನ್ನು ಆ ಕೂಡಲೆ ಕುಲಜನನ್ನಾಗಿ ಮಾಡಲೆಳಸಿ ಅಂಗರಾಜ್ಯವನ್ನು ಅವನಿಗೆ ಕೊಟ್ಟು ಒಡನೆಯೇ ಬ್ರಾಹ್ಮಣೋತ್ತಮರಿಂದ ಪಟ್ಟಾಭಿಷೇಕವನ್ನೇ ಮಾಡಿಸಿದನು. ಇಷ್ಟೆಲ್ಲ ಆಗುವ ಹೊತ್ತಿಗೆ ಸೂರ್ಯಾಸ್ತಮಯವಾಯಿತು. ಅಸ್ತ್ರ ಪ್ರದರ್ಶನರಂಗ ಅಲ್ಲಿಗೆ ಮುಗಿಯಿತು. ಕೆಲವರು ಅರ್ಜುನನನ್ನೂ ಮತ್ತೆ ಕೆಲವರು ಕರ್ಣನನ್ನೂ ಮೆಚ್ಚಿಕೊಂಡರು. ದುರ್ಯೋಧನನಿಗೆ ಪಾಂಡವರ ಮೇಲೆ ತೀರದ ವೈರ ಹುಟ್ಟಿತು. ಕರ್ಣ ದುರ್ಯೋಧನರ ನಡುವೆ ಗಾಢ ಸ್ನೇಹ ಹುಟ್ಟಿತು. ಕರ್ಣನ ನೆರವಿನಿಂದ ಪಾರ್ಥನನ್ನು ಗೆಲ್ಲಬಹುದೆಂದು ಸುಯೋಧನನ ದೂರಾಲೋಚನೆ.

ನನ್ನಯ ಈ ಸನ್ನಿವೇಶವನ್ನು ಇನ್ನೂ ಸ್ವಲ್ಪ ದೀರ್ಘವಾಗಿ ಬೆಳಸಿದ್ದಾನೆ. ಕರ್ಣ ಅರ್ಜುನರ ನಡುವೆ ಕೊಂಚ ಹೊತ್ತು ಬಿಲ್ಲಿನ ಕಾಳಗ ನಡೆಯಿತೆಂದೂ ಆ ಘೋರವಾದ ರಣವನ್ನು ನೋಡುತ್ತಿದ್ದ ಕುಂತಿ ಭೀತಿಯಿಂದ ಮೂರ್ಛಿತಳಾದಳೆಂದೂ ವಿದುರ ಅವಳನ್ನು ಉಪಚರಿಸಿ ಸಂತೈಸಿದನೆಂದೂ ನನ್ನಯಭಟ್ಟ ಬಣ್ಣಿಸಿದ್ದಾನೆ. ಬಿಲ್ಲ ಕಾಳಗದಲ್ಲಿ ಯಾರೂ ಸೋಲಲಿಲ್ಲ. ಯಾರೂ ಗೆಲ್ಲಲಿಲ್ಲ. ಆಗ ಅವರು ದ್ವಂದ್ವ ಯುದ್ಧಕ್ಕೆ ಅಣಿಯಾಗುತ್ತಿರಲು ಕೃಪಾಚಾರ್ಯ ಮಧ್ಯೆ ಪ್ರವೇಶಿಸಿ ದ್ವಂದ್ವ ಯುದ್ಧ ನಿಯಮ ಪ್ರಕಾರ ಇಬ್ಬರು ಯೋಧರೂ ತಮ್ಮ ಕುಲಗೋತ್ರಗಳನ್ನು ತಿಳಿಸಬೇಕೆಂದೂ ಹಾಗಿಲ್ಲದೆ ದ್ವಂದ್ವಯುದ್ಧ ಕೂಡದೆಂದೂ ಘೋಷಿಸಿದನು. ಕೃಪನು 'ಅಖಿಲ ದ್ವಂದ್ವ ಯುದ್ಧ ಸಮಾಚಾರ ನಿಪುಣ'ನಂತೆ! ಆಗ ಕರ್ಣ ತನ್ನ ಕುಲವನ್ನೂ ತಾಯಿತಂದೆಗಳ ಹೆಸರನ್ನೂ ಹೇಳಲು ನಾಚಿಕೊಂಡು ತಲೆ ಬಗ್ಗಿಸಿ ನಿಲ್ಲಲು ದುರ್ಯೋಧನನು ಕೃಪನನ್ನು ಆಕ್ಷೇಪಿಸಿ 'ರಾಜನಲ್ಲದವನು ರಾಜಪುತ್ರನಾದ ಪಾರ್ಥನೊಡನೆ ಕಾಳಗ ಮಾಡಲಾಗದೆಂದು ನಿಯಮವಾದರೆ ಈಗಲೇ ಕರ್ಣನನ್ನು ರಾಜನನ್ನಾಗಿಸುತ್ತೇನೆ' ಎಂದು ಹೇಳಿ ಭೀಷ್ಮ ಧೃತರಾಷ್ಟ್ರರ ಅನುಮತಿ ಪಡೆದು ಕರ್ಣನಿಗೆ ಪಟ್ಟಾಭಿಷೇಕ ಮಾಡಿಸಿದನು. ಕರ್ಣ ದುರ್ಯೋಧನರು ಅಂದಿನಿಂದ ಆಪ್ತ ಮಿತ್ರರಾದರು.

ಆ ಹೊತ್ತಿಗೆ ಅಲ್ಲಿಗೆ ಬಂದ ಸೂತನು ಮಗನ ಅಭ್ಯುದಯವನ್ನು ಕಂಡು ಸಂತೋಷಿಸಿದನು. ಕರ್ಣ ತನ್ನ ತಂದೆಗೆ ಶಿರ ಸಾಷ್ಟಾಂಗ ವಂದನೆ ಮಾಡಿದನು. ಭೀಮನು ಆಗ ಕರ್ಣನನ್ನು ಸೂತಪುತ್ರನೆಂದು ಹೀಯಾಳಿಸಲು ದುರ್ಯೋಧನ ಭೀಮನನ್ನು ಆಕ್ಷೇಪಿಸಿದನು. ಆಗ ಭೀಮನಿಗೂ ಕೌರವನಿಗೂ ಕುಲದ ಹಿರಿಮೆಯು

ವಿಷಯವಾಗಿ ವಿವಾದವುಂಟಾಯಿತೆಂದೂ ಆ ಸಂದರ್ಭದಲ್ಲಿ ದುರ್ಯೋಧನ ದ್ರೋಣಾ ಚಾರ್ಯ ಕೃಪಾಚಾರ್ಯರ ಜನ್ಮವೃತ್ತಾಂತವನ್ನೇ ಎತ್ತಿ ಆಡಿದನೆಂದೂ ನನ್ನಯ ಭಟ್ಟ ಹೇಳಿದ್ದಾನೆ. ಇದು ಬಹಳ ಮಟ್ಟಿಗೆ ವ್ಯಾಸರ ವರ್ಣನೆಗೆ ಅನುಗುಣವಾಗಿಯೇ ಇದೆ. ಪಂಪ ಈ ಕುಲ ವಿವಾದವನ್ನು ದೀರ್ಘವಾಗಿ ಬೆಳಸದೆ ಕೃಪ ದ್ರೋಣರ ಜನ್ಮವೃತ್ತಾಂತವನ್ನು ನೆನಪಿಗೆ ತಂದು ಕೌರವನು 'ಕುಲಮೆಂಬುದುಂಟೆ ಬೀರಮೆ ಕುಲಮಲ್ಲದೆ' ಎಂದು ಪ್ರಶ್ನಿಸಿ ತನ್ನ ಒಲವು ಕರ್ಣನ ಕಡೆಗಿದೆಯೆಂಬುದನ್ನು ವ್ಯಕ್ತ ಪಡಿಸಿ ಒಡನೆಯೇ ಅಂಗರಾಜ್ಯವನ್ನು ಅವನಿಗೆ ಕೊಟ್ಟನೆಂದು ಹೇಳಿದ್ದಾನೆ.

ಈ ಕೋಲಾಹಲಕಾರಿಯಾದ ಘಟನೆಯಲ್ಲಿ ಶಸ್ತ್ರವಿದ್ಯಾಪ್ರದರ್ಶನ ಕೊನೆ ಗೊಂಡಿತು. ಕೌರವ ಪಾಂಡವರು ಎರಡು ಗುಂಪುಗಳಾಗಿ ಹೊರಟುಹೋದರು. ಅವರ ಮನಸ್ಸಿನಲ್ಲಿ ವೈರ ಸ್ಥಿರವಾಯಿತು. ಇದನ್ನೆಲ್ಲ ನೋಡಿದ ಜ್ಞಾನಿಗಳು 'ಪಾಂಡವರನಕಾರಣಂ ಕೆಣಕಿದೀ ಪೊಸ ಪೊತ್ತಿಱೊಳಾದ ಕಿರ್ಚು ಕೌರವರ್ಗಿದು ನಾಡೆಯುಂ ತಿಣುಕನಾಗಿಸದೆಂಗಳ ಸಯ್ತು ಪೋಕುಮೇ' ಎಂದು ಪರಿತಾಪಪಟ್ಟು ಕೊಂಡರಂತೆ! ಈ ವೈರ 'ಪೊಸಪೊತ್ತಿಱೊಳಾದ ಕಿರ್ಚ್ಚು'! ಕೌರವ ಪಾಂಡವರ ಜೀವನ ಸುಪ್ರಭಾತದಲ್ಲಿಯೇ ಹುಟ್ಟಿದ ಕಿಚ್ಚು ಇದು. ಇದೇ ಮುಂದೆ ಹೊತ್ತಿಹೊಗೆದು ಪ್ರಜ್ವಲಿಸಿ ಕುರುಕ್ಷೇತ್ರದಲ್ಲಿ ದಳ್ಳುರಿಯಾಗಿ ಉರಿದು ಕೌರವರನ್ನೂ ಹದಿನೆಂಟು ಅಕ್ಷೋಹಿಣಿಗಳಷ್ಟು ಅಗಾಧವಾದ ಸೈನ್ಯವನ್ನೂ ಅನೇಕ ರಾಜರನ್ನೂ ಸುಟ್ಟು ಬೂದಿ ಮಾಡಿತು. ಮುಂದೆ ಇಂಥ ಅನಾಹುತವಾಗಬಹುದೆಂದು ಅಂದು ಪ್ರಾಜ್ಞರು ಊಹಿಸಿ ಕೌರವರಿಗೆ ಇದು ಕೇಡು ತರದೆ ಇರುವುದಿಲ್ಲವೆಂದು ಹೇಳಿದರಂತೆ! ಆದರೆ ಈ ಕಲಹ, ಕಲಹದಿಂದ ಮನಸ್ಸಿನಲ್ಲಿ ಉಳಿದ ಕಿಸುರು ಪಾಂಡವರಿಗೆ ತಾನೆ ಒಳ್ಳೆಯದನ್ನು ಮಾಡಿತೆ? ದ್ವೇಷ ಯಾರಿಗೆ ತಾನೆ ಒಳ್ಳೆಯದನ್ನು ಮಾಡೀತು? ಅದು ಬೆಂಕಿಯಂತೆ ಆಶ್ರಯಾಶಿಯಲ್ಲವೆ? ದ್ವೇಷಕ್ಕೆ ಎಡೆಗೊಡುವವರ ಮನಶ್ಶಾಂತಿ ಮೊದಲು ನಾಶ ಹೊಂದುತ್ತದೆ. 'ಪಾಂಡವರನ್ ಅಕಾರಣಂ ಕೆಣಕಿದೀ ಪೊಸಪೊತ್ತಿಱೊಳಾದ ಕಿರ್ಚು' ಎಂದು ಬಣ್ಣಿಸಿ ಕೌರವರು ಪಾಂಡವರನ್ನು ಅಕಾರಣವಾಗಿ ಕೆಣಕಿದರೆಂದು ಅಭಿಪ್ರಾಯಪಟ್ಟಿದ್ದಾನೆ. ಆ ಕ್ಷಣವಲ್ಲಿ ಏನೂ ಕಾರಣ ಕಾಣಿಸಲಿಲ್ಲ. ಆದರೆ ಆ ಕಿಚ್ಚಿನ ಕಾರಣ ದುರ್ಯೋಧನನ ಅಸೂಯೆ, ಪಾಂಡವರ ವಿದ್ಯಾವೈಭವವನ್ನು ಕಂಡು ಅವನು ಅಂತರಂಗದಲ್ಲಿ ಭೀತಿ ಹೊಂದಿದನು. ಅರ್ಜುನನ ಬಾಣವಿದ್ಯಾಕೌಶಲ ವಂತು ಅವನನ್ನು ಕಂಗೆಡಿಸಿತ್ತು. ಆ ಹೊತ್ತಿನಲ್ಲಿ ಕರ್ಣ ಬಂದು ಪಾರ್ಥನಿಗೆ ಪ್ರಬಲ ಪ್ರತಿಕಕ್ಷಿಯಾಗಿ ನಿಂತದ್ದರಿಂದ ಅವನ ಮೇಲೆ ದುರ್ಯೋಧನನಿಗೆ ಅಮಿತವಾದ ಪ್ರೀತಿ ಹುಟ್ಟಿತು: ಅವನನ್ನು ಎಲ್ಲ ಪ್ರಯತ್ನಗಳಿಂದಲೂ ತನ್ನ ಸ್ನೇಹಿತ ನನ್ನಾಗಿಸಿಕೊಳ್ಳಬೇಕೆಂಬ ಆಸೆ ಅವನಲ್ಲಿ ಮೂಡಿತು. ಅರ್ಜುನನ ಮೇಲಿದ್ದ ದ್ವೇಷವೇ ಕೌರವನ ಕರ್ಣಸ್ನೇಹಕ್ಕೆ ಮೂಲಾಧಾರ. ತನ್ನ ಶಿಷ್ಯರ ಜಾಣ್ಮೆಯನ್ನು ತೋರಲೆಂದು ದ್ರೋಣರು ಹೂಡಿದ ವ್ಯಾಯಾಮ ಪ್ರದರ್ಶನರಂಗವೇ ಅವರ ಅಂತ

ರಂಗದಲ್ಲಿ ಅಡಗಿದ್ದ ದುರ್ದಮ್ಯವಾದ ಹಗೆತನದ ಪ್ರದರ್ಶನವಾಗಿ ಪರಿಣಮಿಸಿತು ! ಬಾಲ್ಯದಲ್ಲಿಯೇ ಹುಟ್ಟಿದ ಈ ಮತ್ಸರಾಗ್ನಿ ಆರಲಿಲ್ಲ. ನಾನಾ ಕಾರಣಗಳಿಂದ ಇದು ಹೆಚ್ಚು ಹೆಚ್ಚಾಗಿ ಪ್ರಜ್ವಲಿಸಿತು ; ಹರಡಿ ಹಬ್ಬಿಕೊಂಡಿತು.

ಪಂಪನು ಭಾರತಕಥೆಯನ್ನು ಹೇಳಹೇಳುತ್ತ ಅಲ್ಲಲ್ಲಿ ತನ್ನ ವಿಮರ್ಶೆಯನ್ನೂ ಸೂಕ್ತಿರೂಪವಾಗಿ ಹೇಳುವುದು ವಾಡಿಕೆ. ಆದ್ದರಿಂದಲೇ ಈ ವ್ಯಾಯಾಮರಂಗದಲ್ಲಿ ಶಸ್ತ್ರಪ್ರದರ್ಶನಾಂತ್ಯದಲ್ಲಿ ಸಂಭವಿಸಿದ ಕೌರವಪಾಂಡವರ ಕಲಹ-ಕಲಹಕ್ಕಿಂತ ಹೆಚ್ಚಾಗಿ ಅವರ ಮನಸ್ಸಿನಲ್ಲಿ ನಿಂತುಹೋದ ಅಪ್ರೀತಿಯನ್ನು ಪಂಪ ಅವರ ಬದುಕಿನ ಆರಂಭದಲ್ಲಿಯೇ ಹುಟ್ಟಿದ ಕಿಚ್ಚೆಂದು ವರ್ಣಿಸಿ ಅದರಿಂದ ಮುಂದೆ ಕೌರವರಿಗೆ ಕೇಡು ತಪ್ಪದೆಂದು ಹೇಳಿದ್ದಾನೆ. ಈ ಕಲ್ಪನೆ ಮೂಲಭಾರತದಲ್ಲಿಯೂ ಇಲ್ಲ. ನನ್ನಯ ಭಟ್ಟನಲ್ಲಿಯೂ ಇಲ್ಲ. ಇದು ಪಂಪನ ಸ್ವಂತ ಕಲ್ಪನೆ. ಇದುವರೆಗೆ ಕೌರವ ಪಾಂಡವರ ನಡುವೆ ಬೇಕಾದಹಾಗೆ ಹೊಡೆದಾಟ ಬಡಿದಾಟಗಳು ನಡೆದಿದ್ದುವಾದರೂ ಅವು ಮಕ್ಕಳ ಜಗಳಗಳು. ಅವಕ್ಕೆ ಹೆಚ್ಚಿನ ಪ್ರಾಮುಖ್ಯ ಸಲ್ಲದು. ಮಕ್ಕಳ ಜಗಳ ವೆಷ್ಟು ಹೊತ್ತು, ಸ್ನೇಹವೆಷ್ಟು ಹೊತ್ತು? ಆ ಜಗಳಗಳು ತಾತ್ಕಾಲಿಕ. ಅವು ಮನಸ್ಸಿನಲ್ಲಿ ಏನೂ ಕಿಸುರನ್ನು ಉಳಿಸುವುದಿಲ್ಲ. ಆದರೆ ಈಸಲ ಹಾಗಾಗಲಿಲ್ಲ. ದುರ್ಯೋಧನನ ಹೃದಯಾಂತರಾಳದಲ್ಲಿ ತೀವ್ರವಾದ ಅಸೂಯೆ ಹುಟ್ಟಿ ಭದ್ರವಾಗಿ ಬೇರು ಬಿಟ್ಟುಕೊಂಡು ನಿಂತಿತು. ಭೀಮನ ಗದಾಕೌಶಲ ಬಾಹುಬಲಗಳಿಗಿಂತ ಹೆಚ್ಚಾಗಿ ಅವನಿಗೆ ಪಾರ್ಥನ ಶರಕೌಶಲ ಅಂಜಿಕೆಯನ್ನುಂಟುಮಾಡಿತು. ಅವನನ್ನು ಸರಿಗಟ್ಟಬಲ್ಲ ಬಿಲ್ಲುಗಾರನು ತಮ್ಮಲ್ಲಿ ಯಾರೂ ಇಲ್ಲವೆಂಬುದನ್ನು ಮನಗಂಡಾಗ ಅವನ ಮುಖ ಅವನ ಜುಟ್ಟಿಗಿಂತ ಚಿಕ್ಕದಾಯ್ತಂತೆ! ಆ ವೇಳೆಗಾಗಲೇ ದುರ್ಯೋಧನ ಪಾಂಡವರನ್ನು ಗೆದ್ದು ಅವರ ರಾಜ್ಯವನ್ನು ತನಗೇ ಮಾಡಿಕೊಳ್ಳ ಬೇಕೆಂಬ ಯೋಚನೆ ಮಾಡಿದ್ದರೂ ಮಾಡಿರಬಹುದು. ಪಾಂಡವರೊಡನೆ ಯುದ್ಧ ಅನಿವಾರ್ಯವೆಂಬ ಭಾವನೆ ಅವನಿಗೆ ಬಂದಿತ್ತೆಂಬುದು ಖಚಿತ. ಆದ್ದರಿಂದಲೇ ಆ ಕ್ಷಣದಲ್ಲಿ ಬಂದು ಪಾರ್ಥನಿಗೆ ಪ್ರಬಲ ಪ್ರತಿಸ್ಪರ್ಧಿಯಾಗಿ ನಿಂತು ಶಸ್ತ್ರಪ್ರಾಗಲ್ಭ್ಯ ವನ್ನು ಮೆರೆದ ಕರ್ಣನ ಮೇಲೆ ಅವನಿಗೆ ಅಮಿತವಾದ ಮಮತೆ ಮೂಡಿತು. ಅವನ ಕುಲ ಅಂತಸ್ತುಗಳ ವಿಷಯದಲ್ಲಿ ಚರ್ಚೆ ಬರಲು ಸುಯೋಧನನು ಸ್ವಲ್ಪವೂ ಸಂದೇಹಿಸದೆ ತಟ್ಟನೆ ಕರ್ಣನನ್ನು ಆದರಿಸಿ ಅವನನ್ನು ಅಲ್ಲಿಯೇ ಆಗಲೇ 'ಕುಲಜ' ನನ್ನಾಗಿಸುವ ಛಲತೊಟ್ಟು ತಟ್ಟನೆ ಅವನಿಗೆ ಅಂಗರಾಜ್ಯವನ್ನು ಕೊಟ್ಟು ಒಡನೆಯೆ ಪಟ್ಟಾಭಿಷೇಕವನ್ನೇ ಮಾಡಿಸಿದನು! ಅಂದಿನಿಂದ ಕರ್ಣದುರ್ಯೋಧನರ ನಡುವೆ ಗಾಢಸ್ನೇಹ ಮೂಡಿತು. ಈ ಸ್ನೇಹಾಂಕುರದ ಬೇರು ಪಾರ್ಥನ ಮೇಲೆ, ಪಾಂಡವರ ಮೇಲೆ, ದುರ್ಯೋಧನನಿಗಿದ್ದ ವೈರವೇ ಹೌದೆಂಬುದನ್ನು ನಾವು ಮರೆಯು ವಂತಿಲ್ಲ.

## ಜತುಗೃಹದಾಹಂ

ಶಸ್ತ್ರಪ್ರದರ್ಶನ ಕಥೆಯಾದ ಮೇಲೆ ನನ್ನಯಭಟ್ಟ ದ್ರುಪದನನ್ನು ಅರ್ಜುನ ಸೆರೆಹಿಡಿದು ತಂದು 'ಗುರುದಕ್ಷಿಣೆ' ಕೊಟ್ಟ ಕಥೆಯನ್ನು ಹೇಳಿದ್ದಾನೆ. ಅರ್ಜುನನ ಯುದ್ಧ ಪರಾಕ್ರಮಕ್ಕೆ ನಿದರ್ಶನವಾದ ದ್ರುಪದ ಪ್ರಸಂಗವಾದ ಮೇಲೆ ದುರ್ಯೋಧನನ ದುಃಖ ದುಸ್ಸಹವಾಯಿತು. ಅವನ ಅಸೂಯೆ ಕೆರಳಿತು. ಸರ್ವಪ್ರಯತ್ನಗಳಿಂದಲೂ ಪಾಂಡವರನ್ನು ತುಳಿಯಲೇಬೇಕೆಂಬ ಹಂಬಲ ಹುಟ್ಟಿತು. ದಾಯಾದಿಗಳ ವಿದ್ಯಾವೈಭವ ಶಸ್ತ್ರಪಾಂಡಿತ್ಯ ಯುದ್ಧ ಪರಾಕ್ರಮಗಳನ್ನು ನೋಡಿ ಸಹಿಸಿಕೊಂಡಿರುವುದು ಅವನಿಗೆ ಇನ್ನು ಅಶಕ್ಯವಾಯಿತು. 'ಭೀಮಸೇನನ ಬಲ್ಲಾಳ್ತನದಳವುಮಂ ವಿಕ್ರಮಾರ್ಜುನನ ದಿವ್ಯಾಸ್ತ್ರ ಕೌಶಳಮುಮಂ ಕಂಡು ತನ್ನೆರ್ದೆಯಂ ಪೊಳ್ಳುಮರನಂ ಕಿರ್ಚುಳುರ್ವಂತೊಳಗೊಳಗೆ' ಮತ್ಸರ ಉರಿಯುತ್ತಿತ್ತಂತೆ !

ಆದರೆ ಯುದ್ಧದಕ್ಷರೂ ಹಿರಿಯರ ಅಭಿಮಾನಕ್ಕೆ ಪಾತ್ರರೂ ಆದ ಪಾಂಡವರನ್ನು ನಾಶಗೊಳಿಸುವ ಮಾರ್ಗ ಯಾವುದು ? ಅದು ಅತ್ಯಂತ ರಹಸ್ಯವಾಗಿಯೇ ನಡೆಯಬೇಕು. ದುರ್ಯೋಧನನು ಮೊದಲು ಕರ್ಣನ ಸಂಗಡ ಆಲೋಚಿಸಿ ತನ್ನ ತಂದೆಯಾದ ಧೃತರಾಷ್ಟ್ರನನ್ನು ಏಕಾಂತದಲ್ಲಿ ಕಂಡು ತನ್ನ ದುಃಖವನ್ನು ಹೇಳಿಕೊಂಡನು. 'ಪಾಲನೆಱೆವಿರಿ ಪಾಪಿಂಗೆ, ದಾಯಾದ್ಯರಂ ಪಿರಿಯರ್ ಮಾಡಿದಿರಿ ಎಮ್ಮ ಸಾವು ಮುಳಿಪುಂ ದೈವೇಚ್ಛೆಯಾಯ್ತು' ಎಂದು ಅಂಧರಾಜನನ್ನು ಆಕ್ಷೇಪಿಸಿ ಅವನು ತನ್ನ ಹೃದಯ ವೇದನೆಯನ್ನು ತೋಡಿಕೊಂಡನು. ಧೃತರಾಷ್ಟ್ರನೇನು ದಡ್ಡನೆ? ಅವನು ಆ ವೇಳೆಗಾಗಲೆ ಪಾಂಡವರ ಅಭ್ಯುದಯದ ವಾರ್ತೆ ಕೇಳಿ ಅವರ ಪರಾಕ್ರಮವನ್ನರಿತು ನಾನಾ ಉಪಾಯಗಳನ್ನು ಕುರಿತು ಯೋಚಿಸಿದ್ದನೆಂದು ತಿಳಿಯುತ್ತದೆ. ಆದ್ದರಿಂದಲೇ ಅವನು ಮಗನ ಹೇಳಿಕೆಯನ್ನು ಕೇಳಿದ ಕೂಡಲೇ ಅವನಿಗೆ ಅಭಯ ನೀಡಿದನು. 'ನೀನೇಸು ಮದರ್ಕೆ ಚಿಂತಿಸದಿರಿಲ್ಲಿರಲೀವೆನೆ ಪಾಂಡುಪುತ್ರರಂ ?' ಪಾಂಡವರನ್ನು ಹಸ್ತಿನಾವತಿಯಿಂದ ಹೊರಕ್ಕೆ ಕಳುಹಿಸಿ ಅವರನ್ನು ಬೇರೆ ಕಡೆ ನಿಲ್ಲಿಸಬೇಕೆಂಬ ಯೋಚನೆ ಆ ವೇಳೆಗಾಗಲೆ ಅಂಧರಾಜನ ಮನಸ್ಸಿನಲ್ಲಿ ಮೂಡಿದ್ದಿತೆಂದು ಪಂಪನ ಹೇಳಿಕೆ. ಆದ್ದರಿಂದಲೇ ಅವನು ತನ್ನ ಮೋಹದ ಮಗನ ಯೋಚನೆಯನ್ನು ತಟ್ಟನೆ ಒಪ್ಪಿಕೊಂಡನು.

ನನ್ನಯಭಟ್ಟನ ಧೃತರಾಷ್ಟ್ರನೂ ದುರ್ಯೋಧನನ ಪ್ರಾರ್ಥನೆಗೆ ಓಗೊಟ್ಟು ಪಾಂಡವರನ್ನು ದೂರ ಕಳುಹಿಸುವ ಸಂಕಲ್ಪ ಮಾಡಿದನಾದರೂ ಅವನು ಮೊದಲು ಅಡ್ಡಿ ಹೇಳಿದನು. ದುರ್ಯೋಧನ ಅವನೊಡನೆ ಬಹಳ ಚರ್ಚೆ ಹೂಡಬೇಕಾಯಿತು. 'ವಿನೀತರೂ ಜನಾನುರಾಗಿಗಳೂ ಆದ ಪಾಂಡವರನ್ನು ಕಳುಹಿಸಿಬಿಟ್ಟರೆ ಪ್ರಜೆಗಳಲ್ಲಿ ಕ್ಷೋಭೆಯುಂಟಾಗುವುದು. ಭೀಷ್ಮ ವಿದುರಾದಿಗಳು ಈ ಏರ್ಪಾಟನ್ನು ಒಪ್ಪಲಾರರು' ಎಂದು ಧೃತರಾಷ್ಟ್ರನ ಅಂಜಿಕೆ. ಅಲ್ಲದೆ ಅವರ ತಂದೆ ಪಾಂಡುವು ಮಹಾವೀರನಾಗಿ ಶತ್ರುನಿಗ್ರಹ ಮಾಡಿ ರಾಜ್ಯವನ್ನು ವಿಸ್ತರಿಸಿದರೂ ಅಣ್ಣನಾದ ಧೃತರಾಷ್ಟ್ರನನ್ನು-ಅಂಧ

ನಾಗಿದ್ದರೂ—ರಾಜನಂತೆಯೇ ನಡೆಸಿಕೊಂಡ ಸಂಗತಿ ಅವನ ಸ್ಮರಣೆಗೆ ಬಂತು. ಅಂಥ ವನ ಮಕ್ಕಳು ತನಗೆ ವಿಧೇಯರಾಗಿರುವಾಗ ಅವರನ್ನು ಅನಾದರಣೆ ಮಾಡಬಾರದೆಂಬ ಯೋಚನೆಯೂ ಅವನ ಮನಸ್ಸಿನಲ್ಲಿ ಮೂಡದಿರಲಿಲ್ಲ. ಆದರೆ ಪುತ್ರಮೋಹ ಬಲವತ್ತರವಾದದ್ದು. ಅವನು ಮಿಕ್ಕೆಲ್ಲ ಯೋಚನೆಗಳನ್ನೂ ಬದಿಗೊತ್ತಿ ಮೋಹದ ಮಗನ ಸಂತೋಷಾರ್ಥವಾಗಿ ಯತ್ನವಿಲ್ಲದೆ ಪಾಂಡವವಿವಾಸನಕ್ಕೆ ಒಪ್ಪಿಕೊಂಡನು. ಆದರೆ ದುರ್ಯೋಧನ ಅವರನ್ನು ಗುಟ್ಟಾಗಿ ಕೊಲ್ಲಿಸಲು ಹವಣಿಸಿದ್ದನೆಂಬ ಸತ್ಯಸಂಗತಿ ಅವನಿಗೆ ತಿಳಿಯದು. ದುರ್ಯೋಧನನು ತನ್ನ ತಂದೆಯೊಡನೆ ಆ ತನ್ನ ಕ್ರೂರವಾದ ಮಸಲತ್ತನ್ನು ಹೇಳಲಿಲ್ಲ. 'ಉಪಾಯವಾಗಿ ಕುಂತಿಯನ್ನೂ ಪಾಂಡವರನ್ನೂ ತದೀಯ ಭೃತ್ಯಾಮಾತ್ಯವರ್ಗದವರೊಡನೆ ವಾರಣಾವತಕ್ಕೆ ಕಳುಹಿಸೋಣ. ನಮಗೆ ರಾಜ್ಯ ಸುಭದ್ರವಾದ ಮೇಲೆ ಮತ್ತೆ ಅವರು ಇಲ್ಲಿಗೆ ಬರುವರು'[1] ಎಂದು ಸುಯೋಧನ ತನ್ನ ತಂದೆಗೆ ಹೇಳಿ ನಂಬಿಕೆ ಹುಟ್ಟಿಸಿದನು. ಪಂಪಭಾರತದ ಧೃತರಾಷ್ಟ್ರನಿಗೆ ದುರ್ಯೋಧನನ ನೀಚ ಸಂಕಲ್ಪ ತಿಳಿದಿತ್ತು. ಪಾಂಡವರನ್ನು ಉಪಾಂಶುವಧೆಗೆ ಗುರಿ ಮಾಡಲೆಂದೇ ಅವರನ್ನು ವಾರಣಾವತಕ್ಕೆ ಕಳುಹಿಸಲಾಗುತ್ತಿದೆಯೆಂದು ಅವನು ಸುಯೋಧನನಿಂದಲೇ ಕೇಳಿ ತಿಳಿದಿದ್ದನು[2].

ಅಂಧರಾಜನ ಅಂಗೀಕಾರ ದೊರೆತಕೂಡಲೇ ರಾಜರಾಜನು ತನ್ನ ಆಪ್ತನಾದ ಪುರೋಚನನನ್ನು ಕರೆದು ವಾರಣಾವತದಲ್ಲಿ ಪಾಂಡವರಿಗಾಗಿ ಒಂದು ಅರಗಿನ ಮನೆಯನ್ನು ಕಟ್ಟಿ ಸಿದ್ಧಪಡಿಸುವಂತೆ ಹೇಳಿ ಅವನಿಗೆ ಬೇಕಾದ ಸಹಾಯಕರನ್ನು ಕೊಟ್ಟು ಕಳುಹಿಸಿದನು. ನನ್ನಯಭಟ್ಟನ ದುರ್ಯೋಧನ ಪುರೋಚನನಿಗೆ ಬಹಳ ಆಸೆ ಹೇಳುತ್ತಾನೆ. 'ಈ ಕಾರ್ಯ ಸಿದ್ಧಿಯಾದರೆ ನಿನ್ನ ಕತದಿಂದ ಅಖಿಲ ಧಾರುಣೀ ರಾಜ್ಯವೂ ನನಗೆ ಏಕಾಧಿಷ್ಠಿತವಾಗುವುದು. ಇದು ನಿನಗೂ ನಿತ್ಯೋಪಭೋಗನಿಲಯವೇ ಅಲ್ಲವೆ?'[3] ರಾಜಭಕ್ತಿ, ಮುಂದೆ ತನಗೆ ಲಭಿಸಲಿರುವ 'ನಿತ್ಯೋಪಭೋಗ'ದ ಆಸೆ ಪುರೋಚನನನ್ನು ಕಾರ್ಯತತ್ಪರನನ್ನಾಗಿಸಿದವು. ಅಲ್ಪಕಾಲದಲ್ಲಿಯೇ ವೈಭವೋಪೇತವಾದ ದಿವ್ಯಮಂದಿರ ಸಿದ್ಧನಾಯಿತು. ಪಂಪ ಅದನ್ನು 'ಇಂದ್ರಜಾಲಮೆ ಧರೆಗವತರಿಸಿರ್ದುದೆನಿಸುವ ಅರಗಿನ ಮನೆ' ಎಂದು ಹೊಗಳಿದ್ದಾನೆ!

ಇತ್ತ ಧೃತರಾಷ್ಟ್ರನು ಧರ್ಮರಾಯನನ್ನು ತನ್ನಲ್ಲಿಗೆ ಕರೆಸಿಕೊಂಡು ಪ್ರೀತ್ಯಾದರಗಳಿಂದ ಮಾತನಾಡಿಸಿ ಹತ್ತಿರ ಕುಳ್ಳಿರಿಸಿಕೊಂಡು 'ದುರ್ಯೋಧನನಪ್ಪೊಡೆ ಪೊಲ್ಲಮಾನಸನ್, ಆತನುಂ ನೀಮುಮೊಂದೆಡೆಯೊಳಿರೆ ಕಿಸುಟುಂ ಕಲಹಮು ಮೆಂದುಂ ಕುಂದದು' ಎಂದು ಪ್ರಾರಂಭಿಸಿ ಅವನೆದುರಿಗೆ ತನ್ನ ಮಗನನ್ನೇ ಬೈದಂತೆ ಮಾಡಿ

---

[1] (ಆದಿ) I 6–129

[2] II 90 (ಗ)

[3] ಆದಿ 6–141 (ಗ)

ಪಾಂಡವರು ಗಂಗಾನದಿಯ ದಕ್ಷಿಣ ತೀರದಲ್ಲಿ ಕುರುಜಾಂಗಣ ವಿಷಯಕ್ಕೆ ತಿಳಕದೋ ಪಾದಿಯಲ್ಲಿರುವ ವಾರಣಾವತವೆಂಬ ಪೊಳಲಿಗೆ ಹೋಗಿ ಅಲ್ಲಿ ನೆಲಸಿ ಸುಖದಿಂದಿರ ಬೇಕೆಂದು ಸೂಚಿಸಿದನು.

ಧರ್ಮರಾಯನು ಎಂದಿಗಾದರೂ ಹಿರಿಯರ ಮಾತನ್ನು ಮೀರುವುದುಂಟೆ? ದೊಡ್ಡಪ್ಪನ ಸೂಚನೆಯೇ ಅವನಿಗೆ ಶಿರೋಧಾರ್ಯವಾದ ಆಜ್ಞೆಯಾಯಿತು. ಅವನು ಒಡನೆಯೇ ಒಪ್ಪಿಕೊಂಡು ತಾಯಿ ತಮ್ಮಂದಿರನ್ನೂ ಕರೆದುಕೊಂಡು ವಾರಣಾವತಕ್ಕೆ ಪ್ರಯಾಣ ಹೊರಡಲು ಸಂಕಲ್ಪಿಸಿದನು.

ಪಾಂಡವರು ಪರಿವಾರ ಸಮೇತರಾಗಿ ಪ್ರಯಾಣ ಮಾಡಲು ಸಜ್ಜಾಗಿ ಹೊರಡು ವಾಗ ವಿದುರನು 'ಬಟ್ಟೆಯ ನಂಜಿನ ಕಿರ್ಚಿನ ದೆಸೆಗೆ ಕರಂ ಪ್ರಯತ್ನಪರರಾಗಿಮ್' ಎಂದು ಹಿತವಾಕ್ಯವನ್ನು ಹೇಳಿದನು. ಅದು ಪಕ್ಕದವರಿಗೆ ತಿಳಿಯದ ಹಾಗೆ ಯುಧಿಷ್ಠಿರನಿಗೆ ಮಾತ್ರ ತಿಳಿಯುವ ಹಾಗೆ ವಿದುರ ಚಮತ್ಕಾರವಾಗಿ ಹೇಳಿದನಂತೆ! ವಿದುರನ ಈ ಸಕಾಲಿಕವಾದ ಎಚ್ಚರಿಕೆಯಿಂದ ಮುಂದೆ ವಾರಣಾವತದಲ್ಲಿ ಏನೋ ವಿಪತ್ತು ಕಾದಿದೆಯೆಂಬ ಕಲ್ಪನೆ ಯುಧಿಷ್ಠಿರನ ಮನಸ್ಸಿನಲ್ಲಿ ಮೂಡಿರಬಹುದು. ಆದರೆ ಆಗ ಅದನ್ನು ಯಾರಿಗೂ ಸೂಚಿಸದೆ ಗಂಭೀರವಾಗಿ ಪ್ರಯಾಣ ಹೊರಟು ಅವನು ತಮ್ಮಂದಿರೊಡನೆ ವಾರಣಾವತವನ್ನು ಸೇರಿದನು.

ವಾರಣಾವತ ಸೇರುತ್ತಲೇ ಪುರೋಚನನು ಪಾಂಡವರನ್ನು ಎದುರುಗೊಂಡು ಸ್ವಾಗತ ಸತ್ಕಾರಗಳನ್ನು ಮಾಡಿ ಆ ವೇಳೆಗಾಗಲೆ ಸಜ್ಜಾಗಿದ್ದ ಅರಮನೆಗೆ ಕರೆದು ಕೊಂಡು ಹೋಗಿ ಪ್ರವೇಶ ಮಾಡಿಸಿದನು. ಅವನ ಅತಿಯಾದ ಆದರವೇ ಧರ್ಮ ಪುತ್ರನ ಮನಸ್ಸಿನಲ್ಲಿ ಸಂಶಯವನ್ನು ಹುಟ್ಟಿಸಿತು. ವಿದುರನ ಸಂಕೇತೋಕ್ತಿ ನೆನ ಪಿಗೆ ಬಂತು. ಪುರೋಚನ ಮಾಡಿದ ಉಪಚಾರಗಳನ್ನೆಲ್ಲ ಮಾಡಿಸಿಕೊಂಡು ಅವನಿಗೆ ಹೇಳಬೇಕಾದ ಉಪಚಾರೋಕ್ತಿಗಳನ್ನೆಲ್ಲ ಹೇಳಿ ಮುಗಿಸಿ ಪುರೋಚನನನ್ನು ಕಳುಹಿಸಿಕೊಟ್ಟಮೇಲೆ ಅರಸನು ಆ ಮನೆಯನ್ನೆಲ್ಲ ಸೂಕ್ಷ್ಮವಾಗಿ ಪರೀಕ್ಷಿಸಿ ನೋಡ ತೊಡಗಿ ತನ್ನ ತಮ್ಮಂದಿರಿಗೂ ತೋರಿಸಿದನು. 'ಇದು ಮನೆಯಂದಮಲ್ತುರಿವ ದಳ್ಳುರಿಯುಗ್ಗಡದಂದಂ' ಎಂಬುದು ಅವರೆಲ್ಲರ ಏಕಾಭಿಪ್ರಾಯವಾಯಿತು. ರಾಜ್ಯ ದಾಹ ಪೀಡಿತನಾದ ದುರ್ಯೋಧನನ ದ್ವೇಷಾನಲವೇ ಆ ಮನೆಯ ರೂಪವಾಗಿ ಸಾಕ್ಷಾತ್ಕಾರವಾಗಿತ್ತೆಂದು ಹೇಳಿದರೂ ಸಲ್ಲುವಂತಿತ್ತು. ಅದು ಮಹಾ ಪರಾಕ್ರಮಿ ಗಳಾದ ದಾಯಾದಿಗಳನ್ನು ಸುಲಭವಾಗಿ ಕೊಂದು ಪರಿಹರಿಸುವ ಕುಟಿಲೋಪಾ ಯವೇ ಹೊರತು ಪಾಂಡವರು 'ಕಿಸುಬು ಕಲಹಗಳಿಲ್ಲದೆ' ಸಂತೋಷದಿಂದಿರುವುದ ಕ್ಕೆಂದು ಕಟ್ಟಿದ ಸುಖಾವಾಸವಲ್ಲ. ಪಂಚಪಾಂಡವರು ಕುಂತೀ ಸಮೇತರಾಗಿ ತಮ್ಮ ಮುಂದಿನ ಕರ್ತವ್ಯವೇನೆಂದು ಆಲೋಚಿಸುತ್ತಿರಲು ವಿದುರನ ವಿಶ್ವಾಸದಾಸನಾದ ಕನಕನೆಂಬುವನು ಬಂದು ಪಾಂಡವರನ್ನು ರಹಸ್ಯವಾಗಿ ಕಂಡು ಆ 'ಮೃತ್ಯುಮಂದಿರ' ದಿಂದ ಹೊರಕ್ಕೆ ಹೋಗಲು ಅನುಕೂಲಿಸುವಂತೆ ಒಳಗಿನಿಂದಲೇ ಒಂದು ಸುರಂಗ

ಮಾರ್ಗವನ್ನು ಬೇರಾರಿಗೂ ತಿಳಿಯದ ಹಾಗೆ ನಿರ್ಮಿಸಿಕೊಟ್ಟು ಯುಧಿಷ್ಠಿರನ ಅಪ್ಪಣೆ ಪಡೆದು ಹೊರಟುಹೋದನು. ಪುರೋಚನನಿಗೆ ಇದರ ಸುಳಿವೇ ಗೊತ್ತಾಗಲಿಲ್ಲ! ಅವನು ದುರ್ಯೋಧನನ ಆದೇಶವನ್ನು ನೆರವೇರಿಸಿ ಕೃತಾರ್ಥನಾಗಲು ಸಮಯ ಕಾಯುತ್ತಿದ್ದನು.

ನನ್ನಯಭಟ್ಟ ಈ ಪ್ರಸಂಗವನ್ನು ಪಂಪನಂತೆಯೇ ಚಿತ್ರಿಸಿದ್ದಾನೆ. ಆದರೆ ಅವನ ಕನಕನು—ಅವನೇ ಖನಕ—ಯಾವುದೋ ಕೃಷ್ಣ ಚತುರ್ದಶಿಯ ದಿನ ಪುರೋಚನನು ಅರಗಿನ ಮನೆಗೆ ಬೆಂಕಿ ಹಚ್ಚುವ ಸಂಕಲ್ಪ ಮಾಡಿರುವನೆಂದು ಧರ್ಮಜನಿಗೆ ಹೇಳುತ್ತಾನೆ. ಆ ಹೊತ್ತೇ ಪುರೋಚನ ಸಮೇತವಾಗಿ ಆ ಮನೆಗೆ ಬೆಂಕಿ ಹಚ್ಚಿ ಪಾಂಡವರು ತಪ್ಪಿಸಿಕೊಂಡು ಸುರಂಗ ಮಾರ್ಗವಾಗಿ ಕ್ಷೇಮವಾಗಿ ಹೊರಬೀಳುತ್ತಾರೆ.

ಪಂಪನಲ್ಲಿ ಮುಹೂರ್ತದ ಪ್ರಸ್ತಾಪವಿಲ್ಲ. ಒಂದು ಸಂಜೆ ಪಾಂಡವರು ಬ್ರಾಹ್ಮಣ ಸುವಾಸಿನೀ ಭೋಜನವನ್ನು ಏರ್ಪಡಿಸುವ ನೆಪದಿಂದ ತಮ್ಮ ಪರಿವಾರದವರನ್ನೆಲ್ಲ ಹೊರಗೆ ಕಳುಹಿಸಿಬಿಟ್ಟರು. ಆದ್ದರಿಂದ ಅವರೆಲ್ಲ ಪ್ರಾಣಾಪತ್ತಿನಿಂದ ಪಾರಾದರು! ಎಲ್ಲ ಅತಿಥಿಗಳೂ ಊಟಮಾಡಿ ಹೋದಮೇಲೆ ಅಲ್ಲಿಗೆ ಆಕಸ್ಮಾತ್ತಾಗಿ ಬಂದ ಒಬ್ಬ ಬೇಡಿತಿಗೂ ಅವಳ ಐವರು ಮಕ್ಕಳಿಗೂ ಉಣಲಿಕ್ಕಲು ಅವರು ತಣಿಯುಂಡು 'ಬೆಂಡುಮರಲ್ದು ಮರಸುಂದಿದರ್' ಪುರೋಚನನೂ ಉಂಡು ತನ್ನ ಕೋಣೆಯಲ್ಲಿ ಮೈ ಮರೆತು ಮಲಗಿ ನಿದ್ರಿಸಿದನಂತೆ! ಆ ಸಮಯ ಸಾಧಿಸಿ ಪಾಂಡವರು ಕುಂತೀದೇವಿಯನ್ನು ಕರೆದುಕೊಂಡು ರಹಸ್ಯ ಸುರಂಗವನ್ನು ಹೊಕ್ಕರು. ಭೀಮನು ಮೊದಲೇ ಯೋಚಿಸಿದ್ದಂತೆ ಪುರೋಚನನ ಕೋಣೆಗೇ ಬೆಂಕಿ ಹಚ್ಚಿ ಸರ್‍ರನೆ ಬಿಲವನ್ನು ಪ್ರವೇಶಿಸಿ ತನ್ನವರನ್ನು ಕೂಡಿಕೊಂಡನು.

ಬೆಂಕಿಗೆ ತನ್ನವರಾರು ಪರಕೀಯರಾರು? ಆ ಮನೆ ಕಟ್ಟಿದ ಪುರೋಚನನೇ ಆ ಬೆಂಕಿಯಲ್ಲಿ ಮೊದಲು ಬೆಂದುಹೋದನು. ಭೀಮ ಹಚ್ಚಿದ ಆ ಬೆಂಕಿಯು ಆ ಮಹಾಸೌಧವನ್ನು ಸುಟ್ಟು ಕೌರವನ ಕುಟಿಲತಂತ್ರವನ್ನು ಭಂಗಗೊಳಿಸಿತು. ಪಾಂಡವರನ್ನು ನಾಶಪಡಿಸುವ ಆಶಾಗೋಪುರ ದಗ್ಧವಾಗಿ ಹೋಯಿತು! ಕೌರವನ ತೀವ್ರ ದ್ವೇಷದ ವಿಷಯದಲ್ಲಿ ಪಾಂಡವರ ಮನಸ್ಸಿನಲ್ಲಿದ್ದಿರಬಹುದಾದ ಸಮಸ್ತ ಸಂಶಯಗಳೂ ಆ ಅರಗಿನಮನೆಯ ಜ್ವಾಲೆಯಲ್ಲಿಯೇ ಉರಿದುಹೋದುವು.

ವಿದ್ಯಾಗುರುಗಳಾದ ದ್ರೋಣಾಚಾರ್ಯರು ತಮ್ಮ ಶಿಷ್ಯರ ಪಾಂಡಿತ್ಯವನ್ನು ಪ್ರದರ್ಶಿಸಲು ಏರ್ಪಡಿಸಿದ್ದ ವ್ಯಾಯಾಮರಂಗ ಕೌರವನ ಅಂತರಂಗದಲ್ಲಿ ಹೊತ್ತಿ ಹೊಗೆಯಾಡುತ್ತಿದ್ದ ಮಾತ್ಸರ್ಯವನ್ನು ತೀವ್ರವಾಗಿ ಕೆರಳಿಸಿತು. ಅದಕ್ಕೆ ಧೃತರಾಷ್ಟ್ರನ ಆಶೀರ್ವಾದವೂ ಲಭಿಸಿದ್ದು ಉರಿಯುವ ಬೆಂಕಿಗೆ ತುಪ್ಪವನ್ನೆರೆದಂತಾಯಿತು. ಕೌರವನ ಪಾಂಡವ ದ್ವೇಷ ಸ್ಥಿರಪಟ್ಟಿತು. ಅದಕ್ಕೆ ಮುಂಚೆ ನಡೆದ ಹೊಡೆದಾಟಗಳನ್ನೂ ಭೀಮನನ್ನು ಕೊಲ್ಲಲು ದುರ್ಯೋಧನನು ಹಿಂದೆ ಮಾಡಿದ್ದ ಹಂಚಿಕೆಗಳನ್ನೂ ಹುಡುಗಾಟಿಕೆಯ ಜಗಳಗಳೆಂದು ಭಾವಿಸಿ ಅಸಡ್ಡೆಮಾಡಬಹುದಾಗಿದ್ದಿತೋ

ಏನೋ ! ಆದರೆ ಪಾಂಡವರನ್ನೆಲ್ಲ ಒಟ್ಟಿಗೆ ಮೋಸದಿಂದ ತೀರಿಸಿಬಿಡುವ ಲಾಕ್ಷಾಗೇಹ ದಾಹದಂಥ ರೌದ್ರವಾದ ದುಸ್ಸಾಹಸವನ್ನು ಹಾಗೆ ಭಾವಿಸುವುದು ಎಷ್ಟುಮಾತ್ರವೂ ಶಕ್ಯವಿಲ್ಲ. ಈ ಪಾಪಕೃತ್ಯದ ಯೋಜನೆಯಲ್ಲಿ ಧೃತರಾಷ್ಟ್ರನಿಗೂ ಅಷ್ಟೋ ಇಷ್ಟೋ ಪಾಲು ಇದ್ದಿತೆಂಬುದು ವಿದುರನೊಬ್ಬನಿಗಾದರೂ ಸುಸ್ಪಷ್ಟವಾಗಿತ್ತು ! ತಂದೆ ಮಕ್ಕಳಿಬ್ಬರೂ ಸೇರಿ ಸಂಚುಹೂಡಿ ಪಾಂಡವರನ್ನು ಸಂಹರಿಸಿ ರಾಜ್ಯದ ಏಕಾಧಿಪತ್ಯ ವನ್ನು ಗಳಿಸಿಕೊಳ್ಳಲು ಹವಣಿಸುತ್ತಿದ್ದರೆಂಬುದು ಖಚಿತವಾಯಿತು. ದಾಯಾದ ವೈರದ ದುರ್ಲಕ್ಷಣಗಳೆಲ್ಲ ಸುವ್ಯಕ್ತವಾಗಿ ಕಾಣಿಸಿಕೊಂಡವು. ಆದ್ದರಿಂದ ಪಾಂಡವರು ಸ್ವರಾಜ್ಯವನ್ನು ಪರಿತ್ಯಜಿಸಿ ಕಾಂದಿಶೀಕರಾಗಿ ಹೊರಟು ಹೋಗಬೇಕಾಯಿತು !

ಸುಟ್ಟುಹೋದ ಅರಗಿನಮನೆಯ ಬೂದಿಯ ರಾಶಿಯಲ್ಲಿ ಐವರು ಗಂಡಸರ ಶವ ಗಳೂ ಒಬ್ಬ ಹೆಂಗಸಿನ ಹೆಣವೂ ಗುರುತು ಸಿಕ್ಕದಹಾಗೆ ಸುಟ್ಟು ಕರಿಕಾಗಿ ಬಿದ್ದಿದ್ದು ದನ್ನು ಕಂಡು ತಮ್ಮ ವೈರಿಗಳಾದ ಪಾಂಡವರೂ ಅವರ ತಾಯಿ ಕುಂತಿಯೂ ಒಟ್ಟಿಗೆ ನಾಶಹೊಂದಿದರೆಂದು ಭಾವಿಸಿ ಅಂಧರಾಜ ದುರ್ಯೋಧನಾದಿಗಳು ಸಮಾಧಾನ ಹೊಂದಿ ಸಂತೃಪ್ತರಾದರು. ತಮ್ಮ ತಂತ್ರವನ್ನೆಲ್ಲ ಅರಿತವನಾದ ಪುರೋಚನನೂ ಆ ಬೆಂಕಿಯಲ್ಲಿಯೇ ಸತ್ತುಹೋದುದರಿಂದ ತಮ್ಮ ರಹಸ್ಯ ಬಯಲಾಗುವ ಸಂಭವವೇ ಇಲ್ಲವೆಂದು ಅವರಿಗೆ ಬಹಳ ಹರ್ಷವಾಯಿತು.

ನನ್ನಯನು ಜತುಗೃಹ ಪ್ರಕರಣವನ್ನು ಬಹಳಮಟ್ಟಿಗೆ ಪಂಪನ ಕ್ರಮದಲ್ಲಿಯೇ ವರ್ಣಿಸಿರುವನಾದರೂ ಪಂಪ ಹೇಳದೆ ಬಿಟ್ಟಿರುವ ಒಂದು ಅಂಶವನ್ನು ಹೇಳಿದ್ದಾನೆ. ಪಾಂಡವರೂ ಕುಂತಿಯೂ ಪುರೋಚನನೂ ಬೆಂಕಿಯಲ್ಲಿ ಸುಟ್ಟುಹೋದರೆಂದು ಎಲ್ಲರೂ ಮಾತನಾಡಿಕೊಳ್ಳುತ್ತಿದ್ದಾಗಲೇ ವಿದುರನ ನಂಬಿಕೆಯ ಕನಕನು ಆ ಬೂದಿ ಯನ್ನೆಲ್ಲ ಕೆದಕಿ ತಾನು ನಿರ್ಮಿಸಿದ್ದ ರಹಸ್ಯ ಸುರಂಗಮಾರ್ಗದ ಬಾಯಿ ಭದ್ರವಾಗಿ ಮುಚ್ಚಿದ್ದುದನ್ನು ಕಂಡು ಪಾಂಡವರು ತಪ್ಪಿಸಿಕೊಂಡಿರುವರೆಂದು ಖಚಿತಪಡಿಸಿ ಕೊಂಡು ಗಜಪುರಕ್ಕೆ ಹೋಗಿ ವಿದುರನಿಗೆ ವರ್ತಮಾನ ಕೊಟ್ಟನಂತೆ ! ವಿದುರ ಮಾತ್ರ ಆ ಸುದ್ದಿಯನ್ನು ಗಾಂಗೇಯನಿಗೂ ಹೇಳಲಿಲ್ಲ. ಧೃತರಾಷ್ಟ್ರಾದಿಗಳು ಬೇಕಾದಷ್ಟು ಶೋಕಪ್ರದರ್ಶನಮಾಡಿ 'ಮೃತರಾದ' ಪಾಂಡವರಿಗೆ ಅಪರಕರ್ಮಗಳನ್ನು ನಡೆಸಿ ದರೂ ವಿದುರ ಬಾಯಿ ಬಿಚ್ಚದೆ ಅರಿತೂ ಅರಿಯದವನಂತೆ ಮೌನದಿಂದಿದ್ದುಬಿಟ್ಟನು. ಮಹಾಜ್ಞಾನಿಯಲ್ಲವೆ ವಿದುರ? ಆಗ ಗುಟ್ಟು ಬಿಟ್ಟುಕೊಟ್ಟರೆ ದುಷ್ಟ ಕೌರವರು ಪಾಂಡವರನ್ನು ಹುಡುಕಿಸಿ ಅವರು ಅಸಹಾಯಕರಾಗಿ ಅಡವಿಯಲ್ಲಿರುವಾಗ ಮತ್ತೆ ಏನಾದರೂ ಹಿಂಸೆ ಮಾಡಿಯಾರೆಂಬ ಯೋಚನೆ ಅವನದು.

ಧೃತರಾಷ್ಟ್ರಾದಿಗಳು ಪಾಂಡವರ ಮರಣವಾರ್ತೆಯನ್ನು ಕೇಳಿ ವಿಶೇಷವಾಗಿ ಗೋಳಾಡಿದರು. ಅವರ ಆಕ್ರಂದನ ಧ್ವನಿ ಮುಗಿಲು ಮುಟ್ಟಿತು ! ಧೃತರಾಷ್ಟ್ರನು ಕರು ಸತ್ತ ದನ ಅರಚುವ ಹಾಗೆ ವಿಧವಿಧವಾಗಿ ಪ್ರಲಾಪ ಮಾಡುತ್ತ ಅತ್ತನಂತೆ. ಪಂಪ ಧೃತರಾಷ್ಟ್ರನಿಗೆ ಆಗ ಉಂಟಾದ ಸಂತೋಷವನ್ನೂ ಅವನು ಅಭಿನಯಿಸಿದ

ಕೃತಕ ಶೋಕವನ್ನೂ ಈ ಒಂದು ಪದ್ಯದಲ್ಲಿ ಬಹಳ ಮುದ್ದಾಗಿ ಹೇಳಿದ್ದಾನೆ.

ಮನದೊಳ್ ತ್ರೈಭುವನಮನಾ
ಳ್ವನಿತುವರಂ ತನಗೆ ಸಂತಸಂ ಪೆರ್ಚಿಯುಮಂ
ದಿನಿಸಂಧನೃಪಂ ತನ್ನಯ
ಜನದೊಳ್ ಕೆಲನಱಿಯೆ ಕೃತಕ ಶೋಕಂಗೆಯ್ದಂ

ಪಾಂಡುಪುತ್ರರ ಮರಣವಾರ್ತೆ ಆ ಜಾತ್ಯಂಧನಿಗೆ 'ಮೂರು ಲೋಕಗಳ ಆಳ್ವಿಕೆ ದೊರೆತಷ್ಟು ಸಂತಸವನ್ನುಂಟುಮಾಡಿತಂತೆ! ಕೆಲಬಲದಲ್ಲಿರುವವರ ತೃಪ್ತ್ಯರ್ಥವಾಗಿ ಅವನು ತನಗಿಲ್ಲದ ಶೋಕವನ್ನು ತೋಡಿಕೊಂಡನು.

## ಹೈಡಿಂಬಂ

ಅತ್ತ ಪಾಂಡವರು ಸುರಂಗದಲ್ಲಿ ಬಹಳ ಕಷ್ಟಪಟ್ಟು ಸಾಗಿಬಂದು ದಕ್ಷಿಣಾಭಿಮುಖವಾಗಿ ಪ್ರಯಾಣ ಮಾಡಿದರು. ಎಲ್ಲರಿಗೂ ಆ ಬಿಲದ್ವಾರದಲ್ಲಿ ನಡೆಯುವುದು ಬಹಳ ಕಷ್ಟವಾಯಿತು. ಹೇಗೋ ಎಲ್ಲರೂ ಕ್ಷೇಮವಾಗಿ ಹೊರಕ್ಕೆ ಬಂದರು. ಆಕಾಶದಲ್ಲಿ ತಾರಾಗಣಗಳು ನಿಂತ ನೆಲೆಯನ್ನು ಗಮನಿಸಿ ಹೊತ್ತೆಷ್ಟಾಯಿತೆಂದು ಲೆಕ್ಕ ಹಾಕಿಕೊಂಡು ದಿಕ್ಕುಗಳನ್ನು ನಿರ್ಧರಿಸಿಕೊಂಡು ಅವರು ದಕ್ಷಿಣಾಭಿಮುಖವಾಗಿ ಹೊರಟರು. ಕಡೆಗೆ ಭೀಮಸೇನನು ಕುಂತಿಯನ್ನೂ ತನ್ನ ಸಹೋದರರನ್ನೂ ಹೊತ್ತು ನಡೆದು ಕೊಂಚದೂರ ಬರುವ ವೇಳೆಗೆ ಬೆಳಗಾಯಿತು. ಅಲ್ಲಿ ಶ್ರಾಂತರಾಗಿದ್ದ ಅಣ್ಣತಮ್ಮಂದಿರನ್ನೂ ತಾಯಿಯನ್ನೂ ಒಂದು ಆಲದ ಮರದ ಕೆಳಗೆ ಮಲಗಿಸಿ ಭೀಮ ಕಾವಲು ಕುಳಿತಿದ್ದನಂತೆ! ಕಾಡಿನಲ್ಲಿ ಮರದ ಕೆಳಗೆ ಮಲಗಿ ಮೈಮರೆತು ನಿದ್ರಿಸುತ್ತಿದ್ದ ತನ್ನ ಸೋದರರ ಸ್ಥಿತಿಯನ್ನು ಕಂಡು ಅವನಿಗೆ ಮರುಕವಾಯಿತು. ತಾನು ಪಟ್ಟ ಶ್ರಮ ಅವನಿಗೆ ಲೆಕ್ಕವಿಲ್ಲ! 'ತನ್ನೊಡವುಟ್ಟಿದರ್ಗಾದ ಪ್ರವಾಸಾಯಾಸಂಗಳ್ಗಂ ದೆಸೆಗಂ ಮನ್ಯುಮಿಕ್ಕು ಬರೆ ಕಣ್ಣನೀರಂ ತುಂಬಿ' ಭೀಮ ಮರುಗಿದನು. ಭರತ ವಂಶದಲ್ಲಿ ಹೆಸರಾಂತ ಪಾಂಡುರಾಜನ ಮಕ್ಕಳು! ಸಮಸ್ತ ಸಾಗರ ಪರಿವೇಷ್ಟಿತವಾದ ಅವನೀಮಂಡಲಕ್ಕೇ ವಲ್ಲಭರು! ಆದರೂ ಧರ್ಮರಾಯನು ಈಗ ದುಷ್ಟಶ್ವಾಪದಗಳ ಆವಾಸವಾದ ಘೋರಾಟವಿಯಲ್ಲಿ ಮಲಗಿ ನಿದ್ರಿಸುವಂತಾಯಿತು. ವೈತಾಳಿಕರ ಸ್ತೋತ್ರಪಾಠಕ್ಕೆ ಎಚ್ಚರಗೊಳ್ಳುವ ಬದಲು ಈಗ ನರಿ ತೋಳಗಳ ಅಮಂಗಳ ಧ್ವನಿಗೆ ಎಚ್ಚರಹೊಂದುವಂತಾಯಿತು! ಅಣ್ಣನ ದುಃಸ್ಥಿತಿಯನ್ನು ಕಂಡು ವಾಯುಪುತ್ರನು ಬಹಳವಾಗಿ ಮರುಗುತ್ತಿದ್ದನು. ಅಂದರೆ ಭೀಮಸೇನನು ಇಡೀ ರಾತ್ರಿ ಜಾಗರಣೆ ಮಾಡಿದನು!

ನನ್ನಯಭಟ್ಟ ಈ ಕಥೆಯನ್ನು ಹೇಳುವಾಗ ಪಾಂಡವರು ಸುರಂಗದಿಂದ ಹೊರಕ್ಕೆ ಬಂದಮೇಲೆ ಒಂದು ಇಡೀ ಹಗಲು ನಿಂತಲ್ಲಿ ನಿಲ್ಲದೆ ಪ್ರಯಾಣಮಾಡಿ 'ಮಾರುತ ಮಾರ್ತಾಂಡ ಮರೀಚಿ ಗೋಚರ'ವಾಗದ ಗಹನಾರಣ್ಯದಲ್ಲಿ ನಡೆದು

ಮಾರನೆಯ ದಿನ ಸಂಜೆಗೆ ಅಡವಿಯ ನಡುವೆ ಒಂದು ವಟವೃಕ್ಷದ ಅಡಿಯಲ್ಲಿ ಮಲಗಿದ್ದರೆಂದು ಹೇಳಿದ್ದಾನೆ. ಪಂಪ ಈ ವಿವರವನ್ನು ಕೈಬಿಟ್ಟಿದ್ದಾನೆ. ಅದರಿಂದ ಕಥೆಗೆ ಯಾವ ಕುಂದಕವೂ ಆಗಲಿಲ್ಲ. ಭೀಮಸೇನ ಆಲದ ಮರದ ಬುಡದಲ್ಲಿ ಕುಳಿತು ಮನಸ್ಸಿನಲ್ಲಿ ಧರ್ಮಪುತ್ರ ಕುಂತಿ ಅರ್ಜುನ ನಕುಲ ಸಹದೇವ ಈ ಒಬ್ಬೊಬ್ಬರಿಗೂ ಒಂದ ದುಸ್ಥಿತಿಯನ್ನು ಭಾವಿಸಿಕೊಂಡು ಮರುಗುವುದಲ್ಲದೆ ಧೃತರಾಷ್ಟ್ರ ದುರ್ಯೋಧನರ ಪಾಪ ಬುದ್ಧಿಯನ್ನು ಸ್ಮರಿಸಿ ಅವರನ್ನು ಯಥೇಚ್ಛ ವಾಗಿ ನಿಂದಿಸುತ್ತ ದಿಕ್ಕುಗಳನ್ನು ಗಮನಿಸುತ್ತಿರಲು ದೂರದಲ್ಲಿ ಜನರಭಸ ಕಂಡಿ ತಂತೆ! ಇನ್ನು ಈ ಸ್ಥಳದಲ್ಲಿ ಎಚ್ಚರ ತಪ್ಪಬಾರದೆಂದು ನಿರ್ಣಯಿಸಿಕೊಂಡು ಆ 'ಪಾಂಡವ ವಜ್ರಪ್ರಾಕಾರ'ನು ಸುತ್ತಲೂ ಗಮನಿಸುತ್ತ ಸೋದರರ ರಕ್ಷಣೆಯಲ್ಲಿ ದೀಕ್ಷಿತನಾಗಿ ಕಟ್ಟುಕಾವಲಾಗಿ ನಿಂತನು. ಇದಿಷ್ಟು ವೃತ್ತಾಂತವನ್ನು ಪಂಪನು ನಾಲ್ಕು ಪದ್ಯಗಳಲ್ಲಿ ಹೇಳಿದ್ದರೆ ನನ್ನಯಭಟ್ಟ ಹದಿನೆಂಟು ಪದ್ಯಗದ್ಯಗಳನ್ನು ಬಳಸಿಕೊಂಡು ವಿವರವಾಗಿ ಹೇಳಿದ್ದಾನೆ.

ಪಾಂಡವರು ವಿಶ್ರಮಿಸುತ್ತಿದ್ದ ಸ್ಥಳಕ್ಕೆ ಹತ್ತಿರದಲ್ಲಿಯೇ ಹಿಡಿಂಬನೆಂಬ ರಕ್ಕಸನು ತನ್ನ ತಂಗಿ ಹಿಡಿಂಬೆಯೊಡನೆ ನಿವಾಸವನ್ನೇರ್ಪಡಿಸಿಕೊಂಡಿದ್ದನು. ಅವನು ಅಪೂರ್ವವಾಗಿ ಬಂದ ಮನುಷ್ಯರ ವಾಸನೆಯನ್ನು ಗಮನಿಸಿ 'ಐವರು ಬಲ್ದಡಿಗರು' ಬಂದಿರುವರೆಂದು ,ತಿಳಿಸಿ ಅವರನ್ನು ಕೊಂದು ಅಡಿಗೆ ಮಾಡೆಂದು ತನ್ನ ತಂಗಿಗೆ ನೇಮಿಸಿದನು. ಅವಳು ಅದಕ್ಕೆ ಅಂಗೀಕರಿಸಿ

> 'ಆಗಸದೊಳೊಂದು ಮಹೀ
> ಭಾಗದೊಳಿನ್ನೊಂದು ದಾಡೆಯಾಗಿರೆ'

ಮನೋವೇಗಕ್ಕಿಂತ ತೀವ್ರವಾಗಿ ಬಂದಳು. ಆದರೆ ಇನ್ನೂ ಕೊಂಚ ದೂರದಲ್ಲಿ ದ್ದಾಗಲೇ ಮಾರುತಿಯ ಆಕಾರ ಅವಳ ದೃಷ್ಟಿಗೆ ಬಿತ್ತು. 'ಅಂಬುವೀಡಿನೆಡೆಯೊಳ್ ಕಾಮನಂಬು ವೀಡಿಂಗೊಳಗಾಗಿ' ಹಿಡಿಂಬೆ ತನ್ನ ಸ್ವಸ್ವರೂಪದಲ್ಲಿ ಕಾಣಿಸಿಕೊಳ್ಳ ಬಾರದೆಂದು ತಟ್ಟನೆ 'ದಿವ್ಯಕನ್ಯಕಾಸ್ವರೂಪಮಂ ಕೆಯ್ಕೊಂಡು' ಭೀಮನ ಬಳಿಗೇ ನೇರವಾಗಿ ಬಂದಳು. ಅವಳನ್ನು ಕಂಡು ನನ್ನಯನ ಭೀಮನು ,ಒರಟೊರಟಾಗಿ 'ನೀನು ಎಲ್ಲಿಯವಳು, ಇಷ್ಟು ಹೊತ್ತಿನಲ್ಲಿ ಇಲ್ಲಿಗೇಕೆ ಬಂದೆ? ಎಲ್ಲಿಗೆ ಹೊರಟೆ? ದೂರ ಹೋಗು' ಎಂದು ಅಪಮಾನ ಮಾಡಿದನು. ಆದರೆ ಪಂಪನ ಭೀಮ ಕೊಂಚ ನಾಗರಿಕ. ಅವನ ಪ್ರತಿಕ್ರಿಯೆ ಕೊಂಚ ಭಿನ್ನವಾಗಿದೆ.

> ಖೇಚರಿಯೋ ಭೂಚರಿಯೋ ನಿ
> ಶಾಚರಿಯೋ ರೂಪು ಬಣ್ಣಿಸಲ್ಕಾರ್ಗಮಪಾ
> ಗ್ಗೋಚರಮಿಾ ಕಾನನಮುಮ
> ಗೋಚರಮಿವಳಿಲ್ಲಿಗೇಕೆ ಬಂದಳೊ ಪೇೞು

ಎಂದು ಅವನು ಮನಸ್ಸಿನಲ್ಲಿಯೇ ಹೇಳಿಕೊಳ್ಳುತ್ತಿರುವಷ್ಟರಲ್ಲಿ ಅವಳು ಬಹಳ

ಹತ್ತಿರಕ್ಕೇ ಬಂದಳು. ಮನ್ಮಥನ ಕೈಯಿಂದ ಹೊರಟು 'ಬರ್ದುಂಕಿದಲರಂಬು ಬರ್ಪಂತೆ ಬಂದು' ಭೀಮನ ಪಕ್ಕದಲ್ಲಿಯೇ ಕುಳಿತಳು. ಆಗ ಭೀಮ ಬಹಳ ನಯವಾಗಿ 'ನೀನಾರ್ಗೆ, ಏಕೆ ಬಂದೆ?' ಎಂದು ಕೇಳಿದನು. ಅವಳು ನಿಶಾಚರಿಯಾದರೂ ಭೀಮನಿಗೆ ಒಲಿದವಳು. ಆದ್ದರಿಂದ ಅವಳು ಕಾಪಟ್ಯವಿಲ್ಲದೆ ತಾನು ಹಿಡಿಂಬೆಯೆಂಬ ರಕ್ಕಸಿಯೆಂದೂ ತನ್ನ ಅಣ್ಣನ ಇಷ್ಟದಂತೆ ಅವರನ್ನು ಕೊಲ್ಲುವ ಭರದಿಂದ ಬಂದಳೆಂದೂ ಆದರೆ ಮನ್ಮಥ ತನ್ನನ್ನು ಕೊಲ್ಲುತ್ತಿರುವನೆಂದೂ ತಿಳಿಸಿ

ಪಡೆನೋಡಲ್ ಬಂದವರಂ

ಗುಡಿವೊಜಿಸಿದರೆಂಬುದಾಯ್ತು ನಿನ್ನನ್ನಡೆಯೊಳ್

ಎಂದು ಒಂದು ಸುಂದರವಾದ ನಾಡಗಾದೆಯನ್ನು ಹೇಳಿ ತನ್ನ ಪ್ರೇಮವನ್ನು ಸೂಚಿಸಿದಳು.

ಆಮೇಲೆ ಹಿಡಿಂಬೆ ಅಲ್ಲಿ ಮಲಗಿದ್ದವರ ಪರಿಚಯವನ್ನು ಭೀಮನಿಂದ ಕೇಳಿ ತಿಳಿದುಕೊಂಡು 'ಹಿಡಿಂಬಂ ಬಂದವರಂ ತಿಂದೊಡಂ ತಿನ್ಗೆ ನೀನೆನ್ನ ಪೆಗಲನೇಱು. ಗಗನತಳಕ್ಕೊಯ್ವೆನ್' ಎಂದು ರಕ್ಕಸಿಯ ಸ್ವಭಾವಕ್ಕೆ ತಕ್ಕಂತೆ ನುಡಿದಳು. ನನ್ನಯಭಟ್ಟ ಈ ಸನ್ನಿವೇಶದಲ್ಲಿ ಭೀಮ ಹಿಡಿಂಬೆಯರ ನಡುವೆ ಕೊಂಚಹೊತ್ತು ಧರ್ಮಜಿಜ್ಞಾಸೆಯನ್ನು ನಡೆಸಿದ್ದಾನೆ; ಅದಕ್ಕಾಗಿ ಹತ್ತು ಪದ್ಯಗಳನ್ನು ವಿನಿಯೋಗಿಸಿದ್ದಾನೆ. ಪಂಪನಿಗೆ ಜಿಜ್ಞಾಸೆಗೆ ವಿರಾಮವಿಲ್ಲ. ಅವನ ಭೀಮನೂ ಹೆಚ್ಚು ಮಾತಿನವನಲ್ಲ. ಹಿಡಿಂಬೆಯ ಈ ಸಲಹೆಗೆ ಅವನು 'ಮುಗುಳ್ನಗೆ ನಕ್ಕಂ'! ಅಷ್ಟು ಹೊತ್ತಿಗೆ ಹಿಡಿಂಬಾಸುರನೇ ಅಲ್ಲಿಗೆ ಧುಮ್ಮಿಕ್ಕಿ 'ಕಣ್ಗಳಿಂ ಕಿಡಿಯ ತಂಡಂಗಳು ಮುರಿಯ ತಂಡಂಗಳುಂ ಸೂಸೆ ನೀನೊರ್ವನೆಯೆನ್ನೊಳಗೇಂ ಕಾದುವೆ ಈ ಮಱುವುದಿದರನೆತ್ತು. ಇನಿಬರುಮನ್ ಒರ್ಮೆಯೆ ಪೊಸೆದು ಮುಕ್ಕುವೆನ್' ಎಂದು ಮೂದಲಿಸಿದನು. ಭೀಮನಿಗೇನು ಮಾತು ಬಾರದೆ? ಅವನೂ ಹಿಡಿಂಬನನ್ನು ಅಪಹಾಸ್ಯ ಮಾಡಿದನು. ಇಬ್ಬರಿಗೂ ಕಾಳಗ ತೊಡಗಿತು. ಆ ರಭಸದ ಕಾಳಗವನ್ನು ಕನ್ನಡಕವಿ ಪಂಪನು ಒಂದು ಚಂಪಕಮಾಲಾವೃತ್ತದಲ್ಲಿ ವರ್ಣನೆ ಮಾಡಿ ಮುಗಿಸಿಬಿಟ್ಟಿದ್ದಾನೆ. ನನ್ನಯನಿಗೆ ಅಷ್ಟು ಆತುರವಿಲ್ಲ. ಅವನಿಗೆ ಮಾತಿನ ಕಾರ್ಪಣ್ಯವಿಲ್ಲ; ಭೀಮ ಹಿಡಿಂಬರು ಮಾಡಿದ ದ್ವಂದ್ವಯುದ್ಧವನ್ನು ಸಾವಕಾಶವಾಗಿ ವರ್ಣಿಸುತ್ತಾನೆ. ಅವರ ಕಾಳಗದ ಮಧ್ಯೆ ಕುಂತಿಗೂ ಅವಳ ಮಕ್ಕಳಿಗೂ ಎಚ್ಚರವಾಯಿತು. ಅವರು 'ಅತಿಮಾನುಷ ರೂಪ ಸೌಂದರ್ಯವತಿ' ಯಾದ ಹಿಡಿಂಬೆಯನ್ನು ನೋಡಿ 'ಇವಳು ವನದೇವತೆಯೋ ಸುರಕನ್ಯೆಯೋ' ಎಂದು ಆಶ್ಚರ್ಯಪಟ್ಟರಂತೆ. ಆಗ ಕುಂತಿ ಅವಳ ಪರಿಚಯವನ್ನು ಕೇಳಿ ತಿಳಿದುಕೊಂಡಳು. ಅವಳ 'ಮನ್ಮಥಾರ್ತಿ'ಯೂ ಕುಂತಿಗೆ ತಿಳಿಯಿತು.

ಇವರ ಸಂಭಾಷಣೆ ನಡೆಯುತ್ತಿರುವಾಗ ಪಕ್ಕದಲ್ಲಿಯೇ ಭೀಮ ಹಿಡಿಂಬರು ಘೋರವಾದ ಕಾಳಗ ನಡೆಸುತ್ತಿದ್ದರು! ಕಡೆಗೆ ಭೀಮ ಹಿಡಿಂಬನನ್ನು ಚಿತ್ರವಧೆ ಮಾಡಿ ಅವನ ದೇಹನನ್ನು ತುಂಡು ತುಂಡಾಗಿ ಮುರಿದು ಬಿಸಾಡಿಬಿಟ್ಟನು. ಇಷ್ಟು ಕಥೆ ನಡೆದರೂ ಹಿಡಿಂಬೆ ರೋಷಪಡದೆ ನೊಂದುಕೊಳ್ಳದೆ ಭೀಮನ ವಿಜಯವನ್ನೇ ಕಾಂಕ್ಷಿಸುತ್ತ ಕುಂತಿಯ ಜತೆಯಲ್ಲಿ ತಾನೂ ಒಬ್ಬ ಪ್ರೇಕ್ಷಕಿಯಾಗಿದ್ದಳು. ಹಿಡಿಂಬ ವಧೆಯ ತರುವಾಯ ಪಾಂಡವರು ತಮ್ಮ ದಾರಿ ಹಿಡಿದು ಹೊರಟರು. ಹಿಡಿಂಬೆಯೂ ಅವರನ್ನು ಅನುಸರಿಸತೊಡಗಿದಳು. ಆದರೆ ಭೀಮ 'ರಾಕ್ಷಸರು ಮಾಯಾವಿಗಳು, ನಿಮ್ಮನ್ನು ನಂಬುವಂತಿಲ್ಲ. ನಿಮ್ಮಣ್ಣ ಹೋದ ದಾರಿಯಲ್ಲಿ ನೀನೂ ಹೋಗು' ಎಂದು ಕ್ರೂರ ವಾಕ್ಯವನ್ನಾಡಿದನು. ಆಗ ಧರ್ಮರಾಯನೇ ಭೀಮನಿಗೆ ಸಮಾಧಾನ ಹೇಳಿ ದನು. ಹಿಡಿಂಬೆ ಧರ್ಮಜನಿಗೂ ಕುಂತಿಗೂ ನಮಸ್ಕರಿಸಿ ತನ್ನ ಮನೋದಯವನ್ನು ಸ್ಪಷ್ಟವಾಗಿ ಹೇಳಿಧಳಲ್ಲದೆ ತನ್ನ ಅನಾಗತಜ್ಞಾನವನ್ನು ಮೆರೆದು ಅವರ ಮನವೊಲಿಸಿ ಕೊಂಡು ಅವರ ಕರುಣೆಗೆ ಪಾತ್ರಳಾಗಿ ಕಡೆಗೆ ಭೀಮನನ್ನು ವರಿಸಿದಳು.

ಪಂಪ ಈ ಕಥೆಯನ್ನು ಇಷ್ಟು ದೀರ್ಘವಾಗಿ ಲಂಬಿಸಿಲ್ಲ. ಪಂಪನ ಭೀಮ ಹಿಡಿಂಬಾಸುರನನ್ನು ಕೊಂದನಾದರೂ ಹಿಡಿಂಬೆಯ ವಿಚಾರದಲ್ಲಿ ಇಷ್ಟು ಒರಟುತನ ದಿಂದ ನಡೆದುಕೊಳ್ಳಲಿಲ್ಲ. ಧರ್ಮಪುತ್ರ ಕುಂತಿಯರೂ ಹಿಡಿಂಬೆಯನ್ನು ಮೆಚ್ಚಿ 'ಇವಳ್ ರಾಕ್ಷಸ ಸ್ತ್ರೀಯೆಂದು ಭಾವಿಸಲ್ವೇಡ. ಈಕೆಯಂ ಕೈಕೊಳ್ವುದೆ ಕಜ್ಜಂ' ಎಂದು ಹೇಳಿ ಅವಳಿಗೂ ಭೀಮನಿಗೂ ಗಾಂಧರ್ವವಿವಾಹವನ್ನು ಮಾಡಿದರು. ಹಿಡಿಂಬೆ ಪಾಂಡವರೆಲ್ಲರನ್ನೂ ಹತ್ತಿರದಲ್ಲಿಯೇ ಇದ್ದ ಹಿಡಿಂಬಪುರಕ್ಕೆ ಕರೆದುಕೊಂಡು ಹೋಗಿ ಅವರಿಗೆ ಬೇಕುಬೇಕಾದ ಉಪಚಾರಗಳನ್ನು ಮಾಡಿ 'ಪಥಪರಿಶ್ರಮ ಮೆಲ್ಲಮಂ ಕಳೆದು' ಆದರಿಸಿ ತಾನು ಭೀಮನೊಡನೆ ಸ್ವೇಚ್ಛೆಯಾಗಿ ರಮಿಸಿದಳು. ಆ ದಂಪತಿಗಳಿಗೆ ಘಟೋತ್ಕಚನೆಂಬ ಮಗ ಹುಟ್ಟಿದನು. 'ಕಾರಿರುಳ ತಿರುಳಬಣ್ಣ' ದವನಂತೆ ಆ ಭೀಮಪುತ್ರ! 'ಈಶ್ವರ ಕಲ್ಪಿತದಿಂದ ರಾಕ್ಷಸರ್ಗೆ ಸದ್ಯೋಗರ್ಭಮುಂ ಸದ್ಯಃ ಪ್ರಸೂತಿಯುಂ ಸದ್ಯೋಯೌವನಮುಮುಳ್ಳ ಕಾರಣದಿಂದಾಗಳೆ ಷೋಡಶ ವರ್ಷದ ಕುಮಾರ'ನಾದನು! ಅಲ್ಲಿ ಪಾಂಡವರು ಮೂರು ವರ್ಷಕಾಲ ನಿಂತರು!

ನನ್ನಯಭಟ್ಟನ ಭೀಮನು 'ಪುತ್ರಜನ್ಮವಾಗುವವರೆಗೆ ನಿಮ್ಮ ಮಾತಿನಂತೆ ಇವಳನ್ನು ಪರಿಗ್ರಹಿಸುತ್ತೇನೆ' ಎಂದು ತನ್ನ ತಾಯಿಗೆ ಹೇಳಿ ಹಿಡಿಂಬೆಯೊಡನೆ ಮದುವೆನಿಂದನಂತೆ! ಪಂಪ ಇಂಥ ಸಮಯವನ್ನೇನೂ ಹೇಳಿಲ್ಲ. ಅಲ್ಲದೆ ಮದುವೆ ಯಾದೊಡನೆ ಎಲ್ಲರೂ ಶಾಲಿಹೋತ್ರನೆಂಬ ಋಷಿಯ ಆಶ್ರಮಕ್ಕೆ ಹೋದರು. ಅಲ್ಲಿಗೆ ವ್ಯಾಸಮಹರ್ಷಿಗಳು ಬಂದು ಧೃತರಾಷ್ಟ್ರಾದಿಗಳ ದುರಾಲೋಚನೆಯ ವಿವರಗಳನ್ನೆಲ್ಲಾ ಧರ್ಮರಾಯನಿಗೆ ಹೇಳಿ ಅವರು ತಂಗಿದ್ದ ಶಾಲಿಹೋತ್ರನ ಆಶ್ರಮದ ಮಹಿಮೆಯನ್ನು ವಿವರಿಸಿ ಅಲ್ಲಿನ ಪದ್ಮಸರೋವರದ ಜಲವನ್ನು ಉಪಯೋಗಿಸಿದವರಿಗೆ ಹಸಿವು ನೀರಡಿಕೆಗಳು ತೋರವೆಂದು ತಿಳಿಸಿ ಮುಂದೆ ಏಕಚಕ್ರಪುರಕ್ಕೆ ಹೋಗಿ ಬ್ರಾಹ್ಮಣ

ವೇಷದಲ್ಲಿ ಬ್ರಾಹ್ಮಣ ಗೋಷ್ಠಿಯಲ್ಲಿ ಇದ್ದುಕೊಂಡು ತನ್ನ ಬರವನ್ನು ನಿರೀಕ್ಷಿಸ ಬೇಕೆಂದು ಹೇಳಿ ಪಾಂಡವರ ವಂದನೆಗಳನ್ನು ಸ್ವೀಕರಿಸಿ ಹೊರಟು ಹೋದರು. ಘಟೋತ್ಕಚನ ಜನನಾನಂತರ ಶಾಲಿಹೋತ್ರನ ಆಶ್ರಮ ಬಿಡುವ ಮುಂಚೆ 'ಅನೇಕ ಧರ್ಮಶಾಸ್ತ್ರ, ನೀತಿಶಾಸ್ತ್ರಗಳನ್ನು' ಪಾಂಡವರು ಅಭ್ಯಾಸ ಮಾಡಿದ ರೆಂಬುದನ್ನು ಹೇಳಲು ನನ್ನಯ ಮರೆತಿಲ್ಲ. ಪಂಪ ಈ ಪ್ರಕರಣವನ್ನು ಸಂಪೂರ್ಣ ವಾಗಿ ಕೈಬಿಟ್ಟದ್ದರೂ ಪಾಂಡವರು 'ಕೃಷ್ಣದ್ವೈಪಾಯನೋಪದೇಶದಿಂದೇಕಚಕ್ರ ಪುರಕ್ಕೆ ಪೋಪ ಕಜ್ಜಮನಾಳೋಚಿಸಿ'ದರೆಂದು ಒಂದು ಮಾತು ಹೇಳಿದ್ದಾನೆ. ಶಾಲಿಹೋತ್ರನ ಪ್ರಸ್ತಾಪವಾಗಲಿ ಅವನ ಆಶ್ರಮದ ಪದ್ಮಸರೋವರ ಜಲ ಮಹಿಮೆಯ ಸುದ್ದಿಯಾಗಲಿ ಪಂಪನಿಗೆ ಬೇಕೆನಿಸಲಿಲ್ಲ.

## ಬಕವಧಪರ್ವ

ವ್ಯಾಸೋಪದೇಶಾನುಸಾರವಾಗಿ ಪಾಂಡವರು ಹಿಡಿಂಬೆಯನ್ನು ಬೀಳ್ಕೊಂಡು ಹಿಡಿಂಬವನವನ್ನು ಬಿಟ್ಟು ಹೊರಟು ವಿಪ್ರವೇಷ ಧರಿಸಿ ಪ್ರಯಾಣಮಾಡಿ ಏಕಚಕ್ರ ಪುರವನ್ನು ಸೇರಿ ಆ ನಗರ ಶೋಭೆಯನ್ನು ಮೆಚ್ಚಿಕೊಂಡು ಚತುರ್ವೇದ ಪಾರಗನಾದ ಒಬ್ಬ ಬ್ರಾಹ್ಮಣನ ಮನೆಯ ಚತುಶ್ಶಾಲೆಯಲ್ಲಿ ಬೀಡು ಬಿಟ್ಟು ಒಂದು ವರ್ಷಕಾಲ ವಾಸಮಾಡಿದರು. ಒಂದು ದಿನ ಸಂಜೆ ಧರ್ಮಪುತ್ರಾರ್ಜುನ ನಕುಲ ಸಹದೇವರು ಹೊರಗೆ ಹೋಗಿದ್ದಾಗ ಮನೆಯಲ್ಲಿ ಉಳಿದಿದ್ದ ಭೀಮ ಕುಂತಿಯರಿಗೆ ಪಕ್ಕದಲ್ಲಿಯೇ ವಿಪ್ರನಾರಿಯೊಬ್ಬಳ ಕರುಣಾಜನಕವಾದ ಆಕ್ರಂದನ ಕೇಳಿಸಿತು. ಅದರ ಕಾರಣ ತಿಳಿಯ ಬಯಸಿ ಕುಂತಿ ಭೀಮನನ್ನು ಹಿಂದೆ ಬಿಟ್ಟು ತಾನೊಬ್ಬಳೇ ಹೋಗಿ ವಿಚಾರಿಸಿದಳು. ಆ ನಗರದ ಬಳಿ ಬೀಡು ಬಿಟ್ಟಿರುವ ಬಕಾಸುರನಿಗೆ ಮಾರನೆಯ ದಿನ ಆ ಬ್ರಾಹ್ಮಣನ ಮನೆಯಿಂದ ಒಬ್ಬರು ಬಲಿಯಾಗಬೇಕಾಗಿತ್ತು. ಆ ಕುಟುಂಬದಲ್ಲಿ ಒಬ್ಬನೇ ಮಗ. ಅವನನ್ನು ಕಳಿಸಿದರೆ ಸಂತತಿಚ್ಛೇದ. ಹೆಣ್ಣು ಮಗಳನ್ನು ಈ ಕ್ರೂರಕರ್ಮಿಗೆ ಬಲಿಕೊಡುವುದೆ? ಆದ್ದರಿಂದ ಮನೆಯ ಯಜ ಮಾನನೇ ಬಲಿಯಾಗಲು ಸಿದ್ಧನಾಗಿದ್ದನು. ಅವನ ಹೆಂಡತಿ ದುಃಖ ತಡೆಯಲಾರದೆ ಗೋಳಿಟ್ಟಳು. ಕುಂತಿ ಈ ವಿವರಗಳನ್ನೆಲ್ಲ ಕೇಳಿ ತಿಳಿದು 'ನೀವು ಯಾರೂ ಹೋಗಬೇಡಿ. ನನಗೆ ಐವರು ಮಕ್ಕಳಿದ್ದಾರೆ. ನಾಳಿನ ಸರದಿಗೆ ನನ್ನ ಮಗನನ್ನೇ ಕಳಿಸುತ್ತೇನೆ!' ಎಂದು ಅಭಯ ಕೊಟ್ಟು ಅವರು ಪ್ರತಿಯಾಡದಂತೆ ಕಟ್ಟುಮಾಡಿ ಇತರ ಪರಿಕರಗಳನ್ನು ಸಿದ್ಧಪಡಿಸುವಂತೆ ಹೇಳಿ ಹೊರಟು ಬಂದು ಭೀಮನಿಗೆ ಇದ್ದ ಸಂಗತಿ ಹೇಳಲು ಅವನು 'ನಾಳಿನುಣಿಸನೆನಗೆ ದೊರೆಕೊಳಿಸಿ ಬಂದುದು ಕರ ಮೊಳ್ಳಿತ್ತಾಯ್ತು' ಎಂದು ವಿನೋದಪಟ್ಟುಕೊಂಡನಂತೆ! ಆ ರಾತ್ರಿ ಪಾಂಡವರು 'ಈ ಪೊಲಿಲೊಳೊಂದು ಪರೋಪಕಾರಾರ್ಥಂ ಸಯ್ಪಿನಿಂ ದೊರೆಕೊಂಡುದು' ಎಂದು ಬಕವೃತ್ತಾಂತವನ್ನೇ ಮಾತನಾಡಿಕೊಂಡು ನಿದ್ದೆಹೋದರು.

ಮರುದಿನ ಸೂರ್ಯೋದಯವಾಗಲು ಭೀಮಸೇನ ಆ ಬ್ರಾಹ್ಮಣನು ಸಿದ್ಧಪಡಿಸಿದ್ದ ಅನ್ನದ ಬಂಡಿಯನ್ನು ಹೊಡೆದುಕೊಂಡು ಹೊರಟು ರಕ್ಕಸನಿದ್ದ ಸ್ಥಳಕ್ಕೆ ಬಂದು ಅವನಿಗೆ ಕಾಣುವಂತೆಯೇ ಆ ಅನ್ನವನ್ನೆಲ್ಲಾ ತಿಂದು ಬಕನ ರೋಷವನ್ನು ಕೆರಳಿಸಿ ಅವನು ತನ್ನ ಮೇಲೆ ಬೀಳಲು ಬಕನನ್ನು ಬಲವಾಗಿ ಹಿಡಿದು ಅಗಸ ಬಟ್ಟೆಯನ್ನು ಒಗೆಯುವ ಹಾಗೆ ಬೀಸಿ ಬಂಡೆಯ ಮೇಲೆ ಕುಟ್ಟಿ ಕೆಡವಿ ಕೊಂದನು. ಆಮೇಲೆ ನೀಲಗಿರಿಯನ್ನೆಳೆವಂತೆ ಆ ಕರಿಯ ರಾಕ್ಷಸದೇಹವನ್ನೆಳೆದು ತಂದು ಏಕಚಕ್ರಪುರದ ಮಧ್ಯೆ ಇಟ್ಟನು. ಪುರಜನರು ಆನಂದಪರವಶರಾದರು; ಆ ಅಯ್ವರು ಬ್ರಾಹ್ಮಣರನ್ನು ತಮ್ಮ ಇಷ್ಟದೈವವನ್ನು ಕೊಂಡಾಡುವ ಹಾಗೆ ಕೊಂಡಾಡಿದರು.

ನನ್ನಯ ಈ ಪ್ರಕರಣವನ್ನು ಇಷ್ಟು ಸಂಕ್ಷೇಪಗೊಳಿಸಿಲ್ಲ. ಆತನಾದರೂ ಬಕಾಸುರ ವಧೆಯನ್ನು ಬೇರೆ ಯಾವ ರೀತಿಯಲ್ಲೂ ಹೇಳಿಲ್ಲ. ಭೀಮನೇ ಬಕವಧೆ ಮಾಡಿದವನು. ಆದರೆ ಈ ಸಂದರ್ಭದಲ್ಲಿ ದೀರ್ಘವಾದ ಧರ್ಮಜಿಜ್ಞಾಸೆಯನ್ನು ಬೆಳೆಸಿದ್ದಾನೆ. ಕುಂತಿ ತನ್ನ ಮಗನನ್ನೇ ಕಳುಹಿಸುವೆನೆಂದು ಹೇಳಿದಾಗ ಆ ಬ್ರಾಹ್ಮಣ ತಟ್ಟನೆ ಒಪ್ಪಲಿಲ್ಲ; ಒಪ್ಪುವುದು ಶಕ್ಯವಲ್ಲ. ಪುತ್ರಮೋಹ ಎಂಬುದು ಎಲ್ಲರಿಗೂ ಏಕರೀತಿಯಾದ್ದರಿಂದ ತನ್ನ ಮಗುವನ್ನು ಉಳಿಸಿಕೊಳ್ಳುವುದಕ್ಕಾಗಿ ಅನ್ಯರ ಮಗನನ್ನು ಬಲಿಕೊಡುವುದು ಧರ್ಮವಾದೀತೆ? ಕುಂತೀದೇವಿ ಆತನಿಗೆ ಬಗೆಬಗೆಯಾಗಿ ಸಮಾಧಾನ ಹೇಳುತ್ತಾಳೆ. ಆ ಬ್ರಾಹ್ಮಣನ ಹೆಂಡತಿ ಮಕ್ಕಳು ಅಹಮಹಮಿಕೆಯಿಂದ ಬಕಾಸುರನಲ್ಲಿಗೆ ಹೋಗಲು ಸಿದ್ಧರಾಗುತ್ತಾರೆ. ಕುಂತಿ ಅವರಿಗೆಲ್ಲಾ ಸಮಾಧಾನ ಹೇಳಿ ನಾಳೆ ತಾನು ಕಳುಹಿಸಿಕೊಡುವ ತನ್ನ ಮಗ ಸಾಮಾನ್ಯನಲ್ಲವೆಂದೂ ಬಾಲ್ಯದಿಂದಲೇ ಅವನು ಅನೇಕ ರಾಕ್ಷಸರನ್ನು ಕೊಂದವನೆಂದೂ ಈಗ ಬಕಾಸುರನನ್ನೂ ಕೊಲ್ಲಬಹುದೆಂದೂ ತಿಳಿಸಿ ಅವರನ್ನು ಒಪ್ಪಿಸುತ್ತಾಳೆ.

ಕುಂತೀದೇವಿ ಮನೆಗೆ ಬಂದು ಧರ್ಮಜನೊಡನೆ ಈ ಸುದ್ದಿಯನ್ನು ಹೇಳಿದಾಗ ಅವನು ಬಹಳ ದುಃಖಪಟ್ಟು ಕುಂತಿಯನ್ನು ಆಕ್ಷೇಪಿಸಿದನು. "ಇದಿ ಯೇಮಿ ಸಾಹಸಂಬು ಸೇಸಿತಿರೊಡ್ಲ ಕೊಡುಕುಲಕುಂಗಾ ದಮ ಕೊಡುಕುಲ ವಿಡುಚು ದುರ್ಬುದ್ಧುಲು ಗಲರೆ? ಇದಿ ಲೋಕಾಚಾರ ವಿರುದ್ಧಂಬು ಮಱಿ ಭೀಮಸೇನುಂಡು ಮೀಕು ವಿಡುವಂದಗಿಯೆಡಿ ಕೊಡುಕೇ?"[1] ಎಂದು ಪ್ರಶ್ನಿಸಿ ಅಲ್ಲಿಯತನಕ ಭೀಮನಿಂದಾದ ಉಪಕಾರಗಳನ್ನು ಜ್ಞಾಪಕಮಾಡಿಕೊಟ್ಟು ತಾಯಿಯನ್ನು ಈ ವಿಷಯಕ್ಕೆ ಧರ್ಮರಾಯ ಆಕ್ಷೇಪಿಸಿದನು. ಆದರೆ ಕುಂತಿ ಹಿಂದೆಗೆಯದೆ ಭೀಮನ ಅಸಾಧಾರಣ ಶಕ್ತಿ ಸಾಮರ್ಥ್ಯಗಳನ್ನು ಅವನಿಗೆ ಮತ್ತೆ ವರ್ಣಿಸಿ ಹೇಳಿ ಕ್ಷತ್ರಿಯಧರ್ಮ

---

[1] ಇದೇನು ಸಾಹಸಮಾಡಿದಿರಿ? ಕಂಡವರ ಮಕ್ಕಳಿಗಾಗಿ ತಮ್ಮ ಮಕ್ಕಳನ್ನು ಬಿಟ್ಟು ಕೊಡುವ ದುರ್ಬುದ್ಧಿಗಳುಂಟೆ? ಇದು ಲೋಕಾಚಾರ ವಿರುದ್ಧ. ಅಲ್ಲದೆ ಭೀಮಸೇನ ನಿಮಗೆ ಬಿಡಬಹುದಾದ ಮಗನೆ?

ವನ್ನು ವರ್ಣಿಸಿ ಬ್ರಾಹ್ಮಣಕಾರ್ಯ ಮಾಡಿದರೆ ಬ್ರಾಹ್ಮಣ ಪ್ರಸಾದದಿಂದ ಅವನಿಗೂ ಅವನ ತಮ್ಮಂದಿರಿಗೂ ಶ್ರೇಯಸ್ಸುಂಟಾಗುವುದೆಂದು ತಿಳಿಸಿ ಸಮಾಧಾನ ಮಾಡುತ್ತಾಳೆ. ಆಮೇಲೆ ಧರ್ಮಜನು ಕುಂತಿಯ 'ಕಾರುಣ್ಯಬುದ್ಧಿಗೆ ಬ್ರಾಹ್ಮಣ ಭಕ್ತಿಗೆ' ಮೆಚ್ಚಿ ಭೀಮನನ್ನು ಬಕವಧೆಗೆ ನಿಯಮಿಸುತ್ತಾನೆ!

ಈ ಎಲ್ಲ ಚರ್ಚೆಗಳಿಂದ ನನ್ನಯನ ಭಾರತದಲ್ಲಿ ಈ ಪ್ರಕರಣ ದೀರ್ಘವಾಗಿ ಬೆಳೆದಿದೆ. ಭೀಮ ಮರುದಿನ ಹೊರಟು ಆ ಬ್ರಾಹ್ಮಣನು ಸಿದ್ಧಪಡಿಸಿದ್ದ ಭಕ್ಷ್ಯ ಭೋಜ್ಯಗಳನ್ನೆಲ್ಲ ತಾನೇ ಭಕ್ಷಿಸಿ ಸಿಟ್ಟುಗೊಂಡ ರಾಕ್ಷಸನನ್ನು ಬಡಿದು ಕೊಂದುದಲ್ಲದೆ ಬಕನು ಸಾಯುವಾಗ ಅರಚಿದ ಸದ್ದಿಗೆ ಓಡಿಬಂದ ಅವನ ಬಾಂಧವರಿಗೆಲ್ಲ ಬಕನ ದೇಹ ವನ್ನು ತೋರಿಸಿ 'ಇನ್ನು ಮುಂದೆ ನರಭಕ್ಷಕರಿಗಾಗುವ ಗತಿ ಇದು! ಎಚ್ಚರ' ಎಂದು ಕೂಗಿ ಹೇಳಿದನು. ಆಗ ಅವರೆಲ್ಲ ಅಂಜಿ ಏಕಚಕ್ರಪುರದ ಪ್ರಜೆಗಳಿಗೆ ಯಾವ ತೊಂದರೆಯೂ ಇಲ್ಲದಂತೆ ದೂರ ಹೊರಟುಹೋದರು. ಭೀಮ ಆಮೇಲೆ ಬಕನ ಕಳೇಬರವನ್ನೆಳೆತಂದು ಏಕಚಕ್ರಪುರದ ಮಧ್ಯದಲ್ಲಿ ಕೆಡವಲು ಪುರಜನರು ಬಕಹಂತಕ ನಾದ ಭೀಮ ಯಾರೋ ಮಂತ್ರಸಿದ್ಧನಾದ ಬ್ರಾಹ್ಮಣನೆಂದು ಭಾವಿಸಿ ಗೌರವಿಸಿದರು!

ಲಾಕ್ಷಾಗೃಹದಿಂದ ತಪ್ಪಿಸಿಕೊಂಡು ಬಂದದ್ದು, ಹಿಡಿಂಬನನ್ನು ಕೊಂದದ್ದು, ಬಕನ ಸಂಹಾರ, ಇವೆಲ್ಲ ಭೀಮಮಹಿಮಾ ನಿರೂಪಣೆ ಮಾಡುವ ಘಟನೆಗಳು. ಇವನ್ನು ನನ್ನಯ ಹೇಳಿದಷ್ಟು ವಿಸ್ತಾರವಾಗಿ ಹೇಳುವ ಕುತೂಹಲ ಪಂಪನಿಗಿಲ್ಲ. ವಿಕ್ರಮಾರ್ಜುನನ ವಿಜಯಗಳನ್ನು ಹೊಗಳಲು ಇಲ್ಲಿ ಅವಕಾಶವಿಲ್ಲ. ಆದರೆ ಮಹಾಭಾರತ ಕಥೆಗೆ ಇವು ಅತ್ಯಂತ ಅಗತ್ಯ. ಮುಂದಿನ ಸನ್ನಿವೇಶಗಳಲ್ಲಿ ಪುನಃ ಪುನಃ ಈ ಘಟನೆಗಳ ಪ್ರಸ್ತಾಪ ಬರಬೇಕಾಗುತ್ತದೆ. ಘಟೋತ್ಕಚನ ಜನ್ಮ ಕಥೆಯಂತೂ ಅಗತ್ಯವಾಗಿ ಹೇಳಲೇಬೇಕಾದದ್ದು. ಆದ್ದರಿಂದ ಪಂಪನು ಈ ಘಟನೆ ಗಳನ್ನು ಆದಷ್ಟು ಸಂಕ್ಷೇಪವಾಗಿ ಹೇಳಿ ಮುಗಿಸಿದ್ದಾನೆ. ಆದರೆ ಈ ಸಂಕ್ಷಿಪ್ತ ನಿರೂಪಣೆಯೇ ಈ ಕಥಾಭಾಗಕ್ಕೆ ಹೆಚ್ಚಿನ ಸೊಬಗು ತಂದಿದೆ.

## ಚೈತ್ರರಥಪರ್ವ

ಪಾಂಡವರು ಹಿಡಿಂಬೆ ಘಟೋತ್ಕಚರನ್ನು ಬೀಳ್ಕೊಂಡು ಪ್ರಯಾಣಮಾಡಿ ಏಕಚಕ್ರಪುರವನ್ನು ಸೇರಿ ಅಲ್ಲಿ ಬ್ರಾಹ್ಮಣನೊಬ್ಬನ ಮನೆಯಲ್ಲಿದ್ದು ವಿಪ್ರವೇಷದಿಂದ ಹೊತ್ತು ಕಳೆಯುತ್ತಿದ್ದರಷ್ಟೆ! ಅವರ ಈ ಅಜ್ಞಾತವಾಸವೂ ಒಂದು ವರ್ಷ ಕಾಲ ನಡೆಯಿತು. ಆ ಕಾಲದಲ್ಲಿಯೇ ಭೀಮ ಲೋಕಕಂಟಕನಾಗಿದ್ದ ಬಕಾಸುರನನ್ನು ಕೊಂದು ಏಕಚಕ್ರಪುರದ ನಿವಾಸಿಗಳ ಕೃತಜ್ಞತೆಗೆ ಪಾತ್ರನಾದನು. ಆಮೇಲೆ ಒಂದು ದಿನ ಅಲ್ಲಿಗೆ ಪಾಂಚಾಲ ದೇಶದಿಂದ ಮಾರ್ಗಸ್ಥನಾಗಿ ಬಂದ ಬ್ರಾಹ್ಮಣ ನೊಬ್ಬನಿಂದ ಸದ್ಯದಲ್ಲಿಯೇ ದ್ರುಪದನು ತನ್ನ ಮಗಳಿಗೆ ಛತ್ರವತಿಯಲ್ಲಿ ಸ್ವಯಂವರ ನಡೆಸುವನೆಂಬ ವಾರ್ತೆ ತಿಳಿಯಿತು. ಆಗ ಯುಧಿಷ್ಠಿರನು ತಮ್ಮಂದಿರೊಡನೆ

ಆಲೋಚನೆ ಮಾಡಿ ತಮ್ಮ ಅಂದಿನ ಅಜ್ಞಾತವಾಸವನ್ನು ಅಂತ್ಯಗೊಳಿಸಲು ಅನುವಾದ ಸಮಯ ಬಂದಿತೆಂದು ನಿರ್ಧರಿಸಿ ಕೂಡಲೆ ದ್ರುಪದನ ಪಟ್ಟಣಕ್ಕೆ ಪ್ರಯಾಣ ಹೊರಡುವುದೆಂದು ನಿರ್ಧರಿಸಿದನು. ತಮ್ಮ ಸ್ನೇಹಿತರೂ ಶತ್ರುಗಳೂ ಒಟ್ಟಿಗೆ ಪಾಂಚಾಲನ ಪಟ್ಟಣದಲ್ಲಿ ಬಂದು ಸೇರಿರುವುದರಿಂದ ತಾವೂ ಅಲ್ಲಿ ಕಾಣಿಸಿಕೊಂಡು 'ವಿದ್ವಿಷ್ಟ ವಿಪ್ರಾವಣ'ನ ಬಾಣಕೌಶಲವನ್ನು ಮೆರೆಯುವುದು ಸಮುಚಿತವೆಂದು ನಿಶ್ಚಯಿಸಿ ಅವರು ತಮಗೆ ಸ್ಥಳ ಕೊಟ್ಟಿದ್ದ ಬ್ರಾಹ್ಮಣನನ್ನು ವಂದಿಸಿ ಅವನ ಅನುಜ್ಞೆಪಡೆದು ಏಕಚಕ್ರಪುರದಿಂದ ಹೊರಟರು.

ನನ್ನಯಭಟ್ಟನು ತನ್ನ ಭಾರತದ ಆದಿಪರ್ವದ ಏಳನೆಯ ಆಶ್ವಾಸದಲ್ಲಿ ಈ ವೃತ್ತಾಂತವನ್ನು ಹೇಳತೊಡಗಿ ಮೊದಲು ದ್ರೋಣ ದ್ರುಪದನಿಗೆ ಮಾಡಿದ ಅಪಮಾನ, ಆಗ ದ್ರುಪದ ಮಾಡಿದ ಪ್ರತಿಜ್ಞೆ, ಅದಕ್ಕಾಗಿ ಅವನು ಯಜ್ಞವನ್ನು ಕೈಕೊಂಡದ್ದು, ಆ ಯಜ್ಞಕ್ಕೆ ಯಾಜೋಪಯಾಜರನ್ನು ಒಲಿಸಿಕೊಂಡ ವೃತ್ತಾಂತ, ಇವನ್ನೆಲ್ಲ ಹೇಳಿ ಆಮೇಲೆ ದ್ರೌಪದಿ ಧೃಷ್ಟದ್ಯುಮ್ನರು ಹೋಮಕುಂಡದಲ್ಲಿ ಹುಟ್ಟಿ ಬಂದ ಕಥೆಯನ್ನು ಹೇಳಿದ್ದಾನೆ.

ಆ ತರುವಾಯ ದ್ರುಪದನು ಪಾಂಡವರ ಮರಣಕ್ಕಾಗಿ ಬಹಳ ದುಃಖಿಸಿ ವಿಧಿಯಿಲ್ಲದೆ ದ್ರೌಪದಿಗೆ ಸ್ವಯಂವರವನ್ನು ಏರ್ಪಡಿಸುವ ಯೋಚನೆ ಮಾಡಲು ಅವನ ಪುರೋಹಿತನು 'ನಾನು ಉಪಶ್ರುತಿಯನ್ನು ನೋಡಿದೆನು. ಪಾಂಡವರು ಪರಲೋಕಗತರಾಗಿಲ್ಲ. ಅವರು ಪರಮಾನಂದದಿಂದಿದ್ದಾರೆ. ಅವರು ಎಲ್ಲಿದ್ದರೂ ಸ್ವಯಂವರಕ್ಕೆ ಇಲ್ಲಿಗೆ ಬರುತ್ತಾರೆ. ನೀನು ಸುಚಿತ್ತನಾಗಿ ಈ ಪುರದಲ್ಲಿಯೇ ಸ್ವಯಂವರವನ್ನು ಘೋಷಿಸು'[1] ಎಂದು ಸಲಹೆಕೊಟ್ಟನು. ಅದರಂತೆ ದ್ರುಪದನು 'ಪೌಷಮಾಸದ ಶುದ್ಧ ಅಷ್ಟಮೀ ದಿನ ಸ್ವಯಂವರ'ವೆಂದು ಘೋಷಿಸಿದನು.

ಆ ಘೋಷಣೆಯ ವಿಷಯ ಕೇಳಿದ ಪಾಂಡುನಂದನರು ಪಾಂಚಾಲ ನಗರಕ್ಕೆ ಪ್ರಯಾಣ ಹೊರಟರು. ಇದಿಷ್ಟು ಕಥೆಯನ್ನು ಹೇಳಿ ನನ್ನಯಭಟ್ಟನು ವ್ಯಾಸರನ್ನು ಕರೆತಂದಿದ್ದಾನೆ. ವ್ಯಾಸರು ಬಂದು ಪಾಂಡವರಿಗೆ ಹಿತೋಪದೇಶ ಮಾಡುತ್ತಾರೆ.

ಅನಂತರ ಪಾಂಡವರು ಬಹಳ ದೂರ ಪ್ರಯಾಣಮಾಡಿ ಅಂಗದಪರ್ಣವೆಂಬ ಅಡವಿಯನ್ನು ಹೊಕ್ಕು ಸೂರ್ಯಾಸ್ತಮಯವಾದ ಮೇಲೆ ಯಮುನಾ ನದಿಯನ್ನು ದಾಟಬೇಕಾಯಿತು. ಆಗ ಅವರು 'ತಮೋಪಶಮನ ನಿಮಿತ್ತಮುರಿವ ಕೊಳ್ಳಿಯಂ ಪಿಡಿದು' ನದಿಗೆ ಇಳಿದರು. ಆಗ ಅಲ್ಲಿ ಜಲಕ್ರೀಡೆಯಾಡುತ್ತಿದ್ದ ಅಂಗದಪರ್ಣ[2]

---

[1] నేనుపశ్రుతిం జూచితినిది దప్పదు. పాండవులు పరలోకగతులుగారు. పరమానందంబున నున్నవారు వారలెందుండియునిందులకువత్తురు. నీవును సుచిత్తుండవయి స్వయంవరం బిప్పురమున ఘోషింపుము. —ಆದಿಪರ್ವ 7–25.

[2] ಇವನಿಗೆ ಅಂಗಾರಪರ್ಣನೆಂದೂ ಹೆಸರು.

ನೆಂಬ ಗಂಧರ್ವನು ಇವರನ್ನು ಕಂಡು ಕೋಪದಿಂದ ಮುನ್ನುಗ್ಗಿ ಬಂದು ಎಲ್ಲರಿಗಿಂತ ಮುಂದಿದ್ದ ಅರ್ಜುನನನ್ನು ತಾಕಿದನು. ಅರ್ಜುನನು ಹೆಚ್ಚು ಶ್ರಮಪಡದೆ ತನ್ನ ಕೈಲಿದ್ದ ಕೊಳ್ಳಿಯಿಂದಲೇ ಹೊಡೆದನು. ಅದು 'ಲಯಾಂತೋಗ್ರಾಗ್ನಿಯಂತೆ' ಸುಡ ತೊಡಗಲು ಗಂಧರ್ವನು ಸೋತು ಬಂದು ಅರ್ಜುನನಿಗೆ ಶರಣಾಗತನಾದನು. ಅವನ ಪ್ರಾರ್ಥನೆಯನ್ನು ಮನ್ನಿಸಿ ಪಾಂಡವರು ಅವನ ಬೀಡಿಗೆ ಹೋಗಿ ಅವನ ಔತಣದಲ್ಲಿ ಉಂಡು ಅವನು ಕಾಣಿಕೆಯಾಗಿ ಸಮರ್ಪಿಸಿದ ಐನೂರು ಗಿಳಿಯ ಬಣ್ಣದ ಕುದುರೆ ಗಳನ್ನು ಸ್ವೀಕರಿಸಿದರು. ಆದರೆ ಆಗಲೇ ಅವುಗಳನ್ನು ತಮ್ಮೊಡನೆ ಒಯ್ಯುವಂತಿರ ಲಿಲ್ಲ. ಅವರು ಇನ್ನೂ ಕೆಲವು ದಿನ ವಿಪ್ರವೇಷದಲ್ಲಿಯೇ ಇರಲು ಸಂಕಲ್ಪಿಸಿದ್ದರು! ಆದ್ದರಿಂದ ಅವರು 'ಈ ಕುದುರೆಗಳು ನಮ್ಮವಾಗಿ ನಿನ್ನಲ್ಲಿಯೇ ಇರಲಿ. ನಮಗೆ ಬೇಕಾದಾಗ ತರಿಸಿಕೊಳ್ಳುತ್ತೇವೆ' ಎಂದು ಹೇಳಿ ಅವನ ಸಲಹೆಯಂತೆ ಧೌಮ್ಯ ಮಹರ್ಷಿಗಳನ್ನು ತಮ್ಮ ಪುರೋಹಿತರನ್ನಾಗಿ ಮಾಡಿಕೊಂಡು ಮುಂದೆ ಪ್ರಯಾಣ ಮಾಡಿ ಗಂಗಾ ನದಿಯನ್ನು ದಾಟಿ ಪಾಂಚಾಲ ರಾಜ್ಯವನ್ನು ಪ್ರವೇಶಿಸಿದರು.

ಅಂಗದಪರ್ಣನ ಈ ವೃತ್ತಾಂತವನ್ನು ಪಂಪ ಒಂದು ವಚನಭಾಗ ಮತ್ತು ಒಂದು ಪದ್ಯವನ್ನು ಬಳಸಿಕೊಂಡು ಸಂಕ್ಷೇಪವಾಗಿ ಹೇಳಿ ಮುಗಿಸಿದ್ದಾನೆ. ಇದೇ ಕಥೆಯನ್ನು ತೆಲುಗು ಭಾರತದಲ್ಲಿ ನನ್ನಯಭಟ್ಟನು ಸುಮಾರು ನೂರಿಪ್ಪತ್ತು ಗದ್ಯ ಪದ್ಯಗಳಷ್ಟು ವಿಸ್ತಾರವಾಗಿ ಬೆಳೆಸಿದ್ದಾನೆ. ಅರ್ಜುನನಿಗೂ ಅಂಗಾರಪರ್ಣನಿಗೂ ನಡೆದ ಯುದ್ಧ ವನ್ನು ವರ್ಣಿಸಿ ಯುದ್ಧದಲ್ಲಿ ಪರಾಜಿತನಾದ ಗಂಧರ್ವನು ತನ್ನ ಹೆಸರನ್ನು ಬದಲಾಯಿಸಿ ಕೊಂಡು 'ಚಿತ್ರರಥ'ನಾದ ಕಥೆಯನ್ನು ಹೇಳಿ ಅವನು ಅರ್ಜುನನಿಗೆ 'ಚಾಕ್ಷುಷಿ' ಎಂಬ ವಿದ್ಯೆಯನ್ನು ಉಪದೇಶಿಸಿ ಅವನಿಂದ ಆಗ್ನೇಯಾಸ್ತ್ರದ ಉಪದೇಶ ಹೊಂದಿದುದು, ಅವನು ಪಾಂಡವರೈವರಿಗೂ ಅತ್ಯಂತ ಶ್ರೇಷ್ಠವಾದ ಕುದುರೆಗಳನ್ನು ಕಾಣಿಕೆಯಾಗಿ ಕೊಟ್ಟದ್ದು ಮೊದಲಾದ ಸಂಗತಿಗಳನ್ನೆಲ್ಲ ನನ್ನಯಭಟ್ಟ ವಿವರವಾಗಿ ನಿರೂಪಿಸಿದ್ದಾನೆ. ಅಲ್ಲದೆ ಈ ಸಂದರ್ಭದಲ್ಲಿ ಚಿತ್ರರಥನು ಅರ್ಜುನನಿಗೆ ತಪತೀ ಸಂವರಣದ ಕಥೆಯನ್ನೂ ವಸಿಷ್ಠನ ಮಹಿಮಾತಿಶಯವನ್ನೂ ಹೇಳಿದ್ದಾನೆ. ಕಲ್ಮಾಷ ಪಾದರಾಯನಿಗೆ ಶಕ್ತಿಮಹರ್ಷಿಯಿಂದ ಬಂದ ಶಾಪ, ವಸಿಷ್ಠನ ದಯೆಯಿಂದ ನಿವೃತ್ತಿಯಾದ ಕಥೆಯನ್ನೂ ಔರ್ವನ ಕಥೆಯನ್ನೂ ಅಂಗಾರಪರ್ಣ ಅರ್ಜುನನಿಗೆ ಹೇಳಿದನೆಂದು ನನ್ನಯಭಟ್ಟ ವರ್ಣಿಸಿದ್ದಾನೆ. ಇಷ್ಟೆಲ್ಲ ಪುರಾಣಕಥೆಗಳ ಶ್ರವಣ ಮಾಡುತ್ತ ಕುಳಿತುಕೊಳ್ಳುವ ವಿರಾಮ ಪಂಪನ ಅರ್ಜುನನಿಗೆ ಇರಲಿಲ್ಲ. ಅವುಗಳ ನ್ನೆಲ್ಲ ಜೋಡಿಸಿಕೊಂಡು ಹೇಳುವ ಅಗತ್ಯ ಪಂಪನಿಗೂ ಕಾಣಿಸಲಿಲ್ಲ. ಈ ಹಲವು ಉಪಕಥೆಗಳಿಂದ ಭಾರತ ಕಥಾ ನಿರೂಪಣೆಗೆ ಯಾವ ಪ್ರಯೋಜನವೂ ಇಲ್ಲ. ಆದ್ದರಿಂದಲೇ ಪಂಪನು ಅನಗತ್ಯವಾದ ಈ ಪುರಾಣಕಥೆಗಳನ್ನೆಲ್ಲ ಪರಿಹರಿಸಿ ವಿಕ್ರಮಾರ್ಜುನನ ವಿಜಯವನ್ನು ಕೊಂಡಾಡಿ ಅಂಗಾರಪರ್ಣ ಅಥವಾ ಚಿತ್ರರಥನ ಕಥೆಯನ್ನು ಮುಗಿಸಿದ್ದಾನೆ.

ಸಂಸ್ಕೃತ ಭಾರತದಲ್ಲಿ ಈ ಕಥೆ ಚೈತ್ರರಥಪರ್ವವೆಂಬ ಹೆಸರು ಪಡೆದು ಹತ್ತೊಂಬತ್ತು ಅಧ್ಯಾಯಗಳಲ್ಲಿ ಹರಡಿಕೊಂಡಿದೆ. ಅಂಗಾರಪರ್ಣನು ಅರ್ಜುನ ನೊಡನೆ ಕಾದಾಡಿ ಸೋತು ಅರ್ಜುನನ ಬಾಣಾಗ್ನಿಯಿಂದ ಸುಟ್ಟುಹೋದ ತನ್ನ ರಥವನ್ನು ಗಂಧರ್ವಮಹಿಮೆಯಿಂದ ಚಿತ್ರರತ್ನಮಯವಾಗಿ ಮಾಡಿಕೊಂಡು ಅಂದಿನಿಂದ ತನ್ನ ಹೆಸರನ್ನೂ ಚಿತ್ರರಥನೆಂದೇ ಇಟ್ಟುಕೊಂಡನಂತೆ! ಆದ್ದರಿಂದಲೇ ಭಾರತದ ಈ ಕಥಾಭಾಗಕ್ಕೆ 'ಚೈತ್ರರಥಪರ್ವ'ವೆಂಬ ಹೆಸರು ಬಂದಿದೆ. ಈ ವಿಸ್ತಾರವಾದ ಒಂದು ಇಡೀ ಉಪಪರ್ವದ ಕಥೆಯನ್ನು ಪಂಪಕವಿ ಒಂದು ಪದ್ಯ ಮತ್ತು ವಚನಭಾಗದಲ್ಲಿ ಅಡಕಮಾಡಿರುವುದರಿಂದ ಅವನು ಭಾರತದ 'ಕತೆಯ ಮೆಯ್ಗೆಡಲೀಯದೆ' ಹೇಳುವ ಪ್ರತಿಜ್ಞೆಯನ್ನು ಸಾಧಿಸುವ ಸಲುವಾಗಿ ಕಥೆಗೆ ಅನುಪಯುಕ್ತವೆನಿಸಬಹುದಾದ ಅಂಶಗಳನ್ನು ಎಷ್ಟು ನಿರ್ದಾಕ್ಷಿಣ್ಯವಾಗಿ ಕಿತ್ತು ಹಾಕಿರುವನೆಂಬುದನ್ನು ಊಹಿಸಿಕೊಳ್ಳಬಹುದಾಗಿದೆ. ನನ್ನಯನೂ ವ್ಯಾಸಭಾರತ ಕಥೆಯನ್ನು ಸಂಗ್ರಹಮಾಡುವನನಾದರೂ ಕೆಲವು ಉಪಾಖ್ಯಾನಗಳನ್ನು ಕೈಬಿಡಲಾರ ದವನಾಗಿದ್ದಾನೆ. ವರ್ಣಾಶ್ರಮಧರ್ಮನಿರೂಪಣೆ ಬ್ರಹ್ಮರ್ಷಿಗಳ ಮಹಿಮಾ ವರ್ಣನೆ ಮುಂತಾದುವುಗಳನ್ನೊಳಗೊಂಡ ಕಥೆಗಳನ್ನು ನನ್ನಯ ಸಂಪೂರ್ಣವಾಗಿ ಕೈಬಿಡಲಾರನು. ಆದಮಟ್ಟಿಗೂ 'ಕೃಷ್ಣದ್ವೈಪಾಯನ ಮುನಿ ವೃಷಭಾಭಿಹಿತ ಮಹಾಭಾರತಬದ್ಧ ನಿರೂಪಿತಾರ್ಥ'ವೇರ್ಪಡುವಂತೆ ಹೇಳುವುದು ನನ್ನಯನ ಮನೋರಥ.

## ದ್ರೌಪದೀ ಸ್ವಯಂವರ

ಪಾಂಡವರು ಚಿತ್ರರಥನನ್ನು ಬೀಳ್ಕೊಂಡು ಹೊರಟು ಪಾಂಚಾಲರಾಜ್ಯವನ್ನು ಸೇರಿದರು. ಆ 'ವಿಷಯವಿಲಾಸಿನಿಗೆ ಪಿಡಿದ ಕನಕಚ್ಛತ್ರದಂತೆ' ಶೋಭಿಸುತ್ತಿದ್ದ ಛತ್ರವತೀ ನಗರವನ್ನು ಸೇರಿ 'ಎಲ್ಲಿಯುಂ ಬೀಡು ಬಿಡಲೆಡೆವಡೆಯದೊಂದು ಭಾರ್ಗವ ಪರ್ಣಶಾಲೆ'ಯಲ್ಲಿ ತಂಗಿದ್ದು ಸಕಾಲದಲ್ಲಿ ಪಾಂಡವರು ಸ್ವಯಂವರ ಮಂಟಪವನ್ನು ಪ್ರವೇಶಿಸಿ ಅಲ್ಲಿ ಸೇರಿದ್ದ ಬ್ರಾಹ್ಮಣರ ನಡುವೆ ಕುಳಿತು 'ದೇವಬ್ರಾಹ್ಮಣ'ರಾಗಿದ್ದರು! ಅಲ್ಲಿ ನಾಡುನಾಡುಗಳಿಂದಲೂ ಬಂದ ಅರಸುಮಕ್ಕಳೆಲ್ಲ ಸಡಗರದಿಂದ ಅಲಂಕಾರ ಮಾಡಿ ಕೊಂಡು ದ್ರೌಪದಿಯ ಆಗಮನ ನಿರೀಕ್ಷಣೆ ಮಾಡುತ್ತ ಕಾದಿದ್ದರು. ಮಂಟಪದ ಒಂದು ಕಡೆಯಲ್ಲಿ ಮತ್ಸ್ಯಯಂತ್ರವು ಸ್ಥಾಪಿತವಾಗಿದ್ದು ಅದರ ಬಳಿಯಲ್ಲಿಯೇ ದಿವ್ಯ ಧನುಸ್ಸೂ ಐದು ಬಾಣಗಳೂ ಸಿದ್ಧವಾಗಿದ್ದುವು. ಅನಂತರ ದ್ರೌಪದಿಯು ಸಖೀಸಮೇತಳಾಗಿ ಸ್ವಯಂವರ ಮಂಟಪವನ್ನು ಪ್ರವೇಶಿಸಲು ಎಲ್ಲರೂ ಅವಳತ್ತಲೇ ಕಣ್ಣಾಗಿ ಆಸೆಯಿಂದ ನೋಡುತ್ತಿರಲು ಆ ಸಖಿಯು ಸ್ವಯಂವರ ಮಂಟಪದಲ್ಲಿ ಉಪಸ್ಥಿತರಾಗಿದ್ದ ರಾಜಪುತ್ರ ರೆಲ್ಲರ ಪರಿಚಯವನ್ನು ದ್ರೌಪದಿಗೆ ತಿಳಿಯಹೇಳಿದಳು. ದುರ್ಯೋಧನಾದಿ ಕೌರವರು ಕರ್ಣ ಬಲರಾಮ ನಾರಾಯಣಾದಿ ಯಾದವರು ಎಲ್ಲರನ್ನೂ ಸುಂದರಮಾಲೆಯೆಂಬ

ಚೀಟಿ ವರ್ಣಿಸಿದಳು. ಆದರೆ ದ್ರೌಪದಿಯು ಅವರಾರನ್ನೂ ಮೆಚ್ಚದಿರಲು ಮತ್ಸ್ಯ ಯಂತ್ರಭೇದನ ಅನಿವಾರ್ಯವಾಯಿತು. ಯಾವ ರಾಜಕುಮಾರನು ಅಲ್ಲಿ ಸಿದ್ಧವಾಗಿದ್ದ ಐದು ಬಾಣಗಳನ್ನು ಬಳಸಿಕೊಂಡು ಅಲ್ಲಿಟ್ಟಿದ್ದ ದಿವ್ಯ ಧನುಸ್ಸಿಗೆ ಹೆದೆಯೇರಿಸಿ ಮತ್ಸ್ಯಯಂತ್ರವನ್ನು ಭೇದಿಸುವನೋ ಅವನನ್ನು ದ್ರೌಪದಿಯು ವರಿಸುವಳೆಂದು ದ್ರುಪದರಾಜನು ಪ್ರಕಟಿಸಿದನು.

ಈ ಸನ್ನಿವೇಶವನ್ನು ಚಿತ್ರಿಸುತ್ತ ಪಂಪಕವಿಯು ಸ್ವಯಂವರ ಮಂಟಪವನ್ನು ಬಹಳ ಅಂದವಾಗಿ ವರ್ಣಿಸಿದ್ದಾನೆ. ಅದು ಮೂರು ಲೋಕಗಳನ್ನೂ ಹೋಲುವಂತೆ ಇದ್ದಿತಂತೆ! ದ್ರೌಪದಿಯ ಸ್ವಯಂವರ ವೈಭವವನ್ನು ನೋಡುವ ಕುತೂಹಲದಿಂದ ದೇವತೆಗಳೆಲ್ಲ ತಮ್ಮ ವಿಮಾನಗಳಲ್ಲಿ ಬಂದು ಅಂತರಿಕ್ಷದಲ್ಲಿ ನಿಂತಿದ್ದರು. ಆ ಮಂಟಪದ ಚೌಪಳಿಗೆಗಳಲ್ಲಿ ಅನೇಕ ರಾಜ ಮಹಾರಾಜರುಗಳು ಆಸೀನರಾಗಿದ್ದರು. ಕೆಳಗೆ ನೆಲದಮೇಲೆ ಹಲವರು ರಾಜರ ಪರಿವಾರದವರು, ಚತುರಂಗ ಸೈನ್ಯ, ಪ್ರೇಕ್ಷಕರಾದ ಪುರಜನರು ಸೇರಿದ್ದರು. ಹೀಗೆ ಮೂರು ನೆಲೆಗಳಲ್ಲಿ ನೋಟಕರು ನಿಂತಿದ್ದುದರಿಂದ ಆ ಸ್ವಯಂವರ ಮಂಟಪವು 'ಮೂಱುಂ ಲೋಕಮನೆ ಪೋಲ್ತುದು' ಎಂದು ಪಂಪ ವರ್ಣಿಸಿದ್ದಾನೆ.

ಮತ್ಸ್ಯಯಂತ್ರ ಭೇದನವೇ ಪಣವೆಂದು ದ್ರುಪದರಾಜನು ಘೋಷಣೆ ಮಾಡಿದ ಮೇಲೆ ಅನೇಕಾನೇಕ ಮಂದಿ ರಾಜಪುತ್ರರು ಬಂದು ಆ ಬಿಲ್ಲನ್ನು ಹಿಡಿದು ಅಲುಗಿಸುವುದಕ್ಕೂ ಶಕ್ತರಾಗದೆ ವಿಫಲಮನೋರಥರಾದರು. ಸ್ವಯಂ ಸುಯೋಧನನೇ ಸಾಹಸ ಮಾಡಿ ಪ್ರಯತ್ನಿಸಿ ಬಿಲ್ಲನ್ನು ಎತ್ತಲು ಅಶಕ್ತನಾಗಿ ನಾಚಿಕೆಪಟ್ಟುಕೊಂಡನು. ಕರ್ಣನಿಗೂ ಅದು ಸಾಧ್ಯವಾಗಲಿಲ್ಲ. ದ್ರುಪದನಿಗೆ ನಿರಾಶೆಯಾಯಿತು. ಯಾವ ಕ್ಷತ್ರಿಯನೂ ತಾನು ಒಡ್ಡಿದ ಮತ್ಸ್ಯಯಂತ್ರವನ್ನು ಭೇದಿಸಲು ಶಕ್ತನಾಗಲಿಲ್ಲ! ಆಗ ಅವನು 'ಈ ನೆರೆದರಸು ಮಕ್ಕಳೊಳಾರುಮಿೀ ಬಿಲ್ಲನೇಱಸಲಾರ್ತರಿಲ್ಲಂ ಈ ಜನವಡೆಯೊಳಾರಾನು ಮಿೀ ಬಿಲ್ಲನೇಱಸಲಾರ್ಪೊಡೆ ಬನ್ನಿಂ' ಎಂದು ಆಹ್ವಾನಿಸಿದನು!

ದ್ರುಪದನ ಈ ಕರೆಗೆ ಓಗೊಟ್ಟು ವಿಪ್ರವೇಷದಲ್ಲಿದ್ದ ಅರ್ಜುನನು ಎದ್ದು ನೇರವಾಗಿ ಮತ್ಸ್ಯಯಂತ್ರದ ಕಡೆಗೆ ಬರುತ್ತಿರಲು ಅವನನ್ನು ನೋಡಿದ ಜನ 'ಈ ಪಾರ್ವಂಗಕ್ಕಟ ವೈಯೊಳೊಂದು ಮರುಳುಂಟಕ್ಕುಂ' ಎಂದು ಹಾಸ್ಯ ಮಾಡಿದರಂತೆ! ಆದರೆ ಪಾರ್ಥನು ಯಾರ ಮಾತಿನಿಂದಲೂ ಚಲಿತನಾಗದೆ ನೆಟ್ಟಗೆ ಹೋಗಿ ಆ ಬಿಲ್ಲನ್ನು ಎಡಗೈಯಿಂದ ಹಿಡಿದೆತ್ತಿ ಹೆದೆಯನ್ನು ಕಟ್ಟಿ ಅಲ್ಲಿಟ್ಟಿದ್ದ ಐದು ಬಾಣಗಳಲ್ಲಿ ಒಂದನ್ನು ತೆಗೆದು ಬಿಲ್ಲಿಗೆ ಹೂಡಿ ಗುರಿಯಿಟ್ಟು ಮತ್ಸ್ಯಯಂತ್ರಕ್ಕೆ ಹೊಡೆದನು. ದೇವತೆಗಳೂ ಧನುರ್ಧರರೂ ಆ ಬ್ರಾಹ್ಮಣನ ಅಸ್ತ್ರಪಾಂಡಿತ್ಯವನ್ನು ಮೆಚ್ಚಿಕೊಂಡರು. ದ್ರೌಪದಿ ಒಡನೆಯೇ ಆ ಬ್ರಾಹ್ಮಣೋತ್ತಮನಿಗೆ ಮಾಲೆ ಹಾಕಿದಳು! ಸ್ವಯಂವರ ಮುಗಿಯಿತು!

ಆದರೆ ಬ್ರಾಹ್ಮಣನೊಬ್ಬನಿಗೆ ದ್ರೌಪದಿ ಲಭಿಸಿದುದು ಅಲ್ಲಿ ಸೇರಿದ್ದ ಕ್ಷತ್ರಿಯ ರಾಜೋತ್ತಮರಿಗೆ ಸ್ವಲ್ಪವೂ ಸಹಿಸಲಿಲ್ಲ. ದ್ರುಪದ ತಮ್ಮನ್ನು ಸ್ವಯಂವರಕ್ಕೆ ಆಹ್ವಾನಿಸಿ ತನ್ನ ಮಗಳನ್ನು ಯಾವನೋ ಒಬ್ಬ ಅಜ್ಞಾತ ಬ್ರಾಹ್ಮಣನಿಗೆ ಕೊಟ್ಟು ರಾಜ ಸಮೂಹಕ್ಕೇ ಅವಮಾನ ಮಾಡಿದನೆಂದು ಹೇಳಿ ಅವನೊಡನೆ ವ್ಯಾಜ್ಯ ಹೂಡಿದರು. ಕರ್ಣ ಶಲ್ಯ ದುರ್ಯೋಧನಾದಿಗಳೂ ಸೈನ್ಯ ಸಮೇತರಾಗಿ ನುಗ್ಗಿ ಕಾಳಗ ಹೂಡಲು ಅಂಜಿಕೊಂಡ ದ್ರುಪದನಿಗೆ ಧೈರ್ಯಹೇಳಿ ವಿಪ್ರವೇಷದ ಅರ್ಜುನ ಭೀಮಸೇನರುಗಳು ಧನುರ್ಧಾರಿಗಳಾಗಿ ಮುಂದೆ ನುಗ್ಗಿ ಬಾಣದ ಮಳೆಗರೆದು ಆ ಕ್ಷತ್ರಿಯರ ಪುಂಡಾಟವನ್ನು ಅಡಗಿಸಿದರು. ಆಗ ಕರ್ಣಾದಿಗಳು ಪ್ರಯತ್ನದಿಂದ ಹೋರಾಡಿದರೂ ಅದರಿಂದ ಏನೂ ಪ್ರಯೋಜನವಾಗಲಿಲ್ಲ. 'ಅರಿದು ಗೆಲಲ್ಕೆ ಪಾರ್ಥನ ಶರಾಸನ ವಿದ್ಯೆಯನ್' ಎಂಬ ಅರಿವು ಕರ್ಣನ ಮನಸ್ಸಿನಲ್ಲಿ ಮೂಡಲು ಬಹಳ ಹೊತ್ತು ಹಿಡಿಯಲಿಲ್ಲ. 'ಜಟ್ಟಿ ಬಿದ್ದರೂ ಮೀಸೆ ಮಣ್ಣಾಗಲಿಲ್ಲ' ಎಂಬ ಹಾಗೆ ಸೋತಿದ್ದ ಕರ್ಣ ತನ್ನ ಅಶಕ್ತತೆಯನ್ನು ಒಪ್ಪಿಕೊಳ್ಳಲು ಇಷ್ಟವಿಲ್ಲದೆ 'ಪಾರ್ಥನೊಳ್ ಕಲಹವಾಗದು' ಎಂಬ ಧರ್ಮಸೂಕ್ಷ್ಮವನ್ನು ಮುಂದೆ ಮಾಡಿ ಜಾರಿಕೊಂಡನಂತೆ! ಎಲ್ಲ ರಾಜರೂ ಅರ್ಜುನನ ಸಂಗಡ ಕಾದಲಾರದೆ ಸೋತು ಹಿಮ್ಮೆಟ್ಟಿದರು. ಆಗ ದ್ರುಪದನು ತನ್ನ ಅಳಿಯನು ಅರ್ಜುನನಲ್ಲದೆ ಬೇರಾರೂ ಅಲ್ಲವೆಂದು ಊಹಿಸಿ ಪಾಂಡವರನ್ನು ಆದರಿಸಿ 'ಮಹಾ ವಿಭೂತಿಯಿಂ ಪೊಟಲಂ ಪುಗಿಸಿ'ದನು.

ಯಾವ ಬ್ರಾಹ್ಮಣ ಸಭೆಯವರು ಅರ್ಜುನನು ಬಿಲ್ಲನ್ನೆತ್ತಲು ಎದ್ದಾಗ ಅವನನ್ನು ಅಪಹಾಸ್ಯ ಮಾಡಿದರೋ ಆ ಬ್ರಾಹ್ಮಣರೇ ಅರ್ಜುನ ಗೆದ್ದಾಗ ಬಹಳ ಸಂಭ್ರಮಪಟ್ಟರು. ನನ್ನಯಭಟ್ಟನು ಇಂಥ ಸುವರ್ಣಾವಕಾಶವನ್ನು ವ್ಯರ್ಥಮಾಡಲು ಮನಸ್ಸೊಪ್ಪದೆ ವಿಪ್ರಕುಲದ ಹಿರಿಮೆಯನ್ನು ಬಹಳ ಉತ್ಸಾಹದಿಂದ ಪ್ರತಿಪಾದಿಸಿದ್ದಾನೆ. ಅನೇಕ ಶುಭಕರ್ಮನಿರತರಾಗಿ ವ್ರತನಿಯಮಗಳಿಗೊಳಪಟ್ಟು 'ಫಲ ಪವನ ಅಂಬು' ಭೋಜನದಿಂದಲೇ ಸಂತುಷ್ಟರಾಗಿ ದುರ್ಬಲ ದೇಹಿಗಳಾಗಿದ್ದರೂ ಬ್ರಾಹ್ಮಣರು ಅಪಾರ ತಪೋಬಲ ಸಂಪತ್ತಿನಿಂದ ಮಹಾಬಲಯುತರು! ಅಂಥ ಭವ್ಯರಿಗೆ ಈ ಚರಾಚರ ಜಗತ್ತಿನಲ್ಲಿ ಅಸಾಧ್ಯವಾದುದೇನಿದೆ? ಸದ್ವಿಜರು ದೊಡ್ಡವರಲ್ಲವೆ?"[1] ಎಂದು ಅಲ್ಲಿ ಸೇರಿದ್ದ ಜನರೆಲ್ಲ ಮನಸ್ಸಿನಲ್ಲಿಯೇ ಭಾವಿಸಿಕೊಂಡರಂತೆ! ಅಷ್ಟೇ ಅಲ್ಲದೆ ಆ ಸಮಯದಲ್ಲಿ ಅಂಜಿಕೊಂಡ ದ್ರುಪದರಾಜನಿಗೆ ಆ ಬ್ರಾಹ್ಮಣೋತ್ತಮರು ಅಭಯ ನೀಡಿ ತಮ್ಮ ತಮ್ಮ ದಂಡಾಜಿನಗಳನ್ನು ಎತ್ತಿಕೊಂಡು ಪ್ರತಿಬಲಗಳ ಮೇಲೆ ಬೀಸತೊಡಗಿದರಂತೆ! ಆದರೆ ಅಷ್ಟರಲ್ಲಿ ಅರ್ಜುನನು ಅವರ ಅನಗತ್ಯಶ್ರಮವನ್ನು ಮಾಣಿಸಿ

---

[1] ಫಲಪವನಾಂಬು ಭೋಜನ ಶುಭವ್ರತ ವೃತ್ತುಲಜೇಸಿ ಚೂಡ ದುರ್ಬಲತನುಲಯ್ಯು, ಬ್ರಾಹ್ಮಣುಲಪಾರ ತಪೋಬಲಸಂಪದನ್ ಮಹಾಬಯುತುಲಟ್ಟಿವಾರಲಕು ಭವ್ಯುಲಕೆಂದುನಸಾಧ್ಯ, ಮದ್ಧಿಯುಂ ಗಲದೆ ಚರಾಚರಾಖಿಲಜಗಂಬುಲ ಬೆದ್ದಲೆ ಕಾರೆ ಸದ್ವಿಜುಲ್. —I–7–184

ತಾನೇ ಧನುರ್ಧಾರಿಯಾಗಿ ಶತ್ರುನಿಗ್ರಹ ಮಾಡಿದನು. ದ್ರೌಪದಿಯ ಸ್ವಯಂವರ ಕಲಹದಲ್ಲಿ ಮುಕ್ತಾಯಗೊಂಡಿತು.

ಮತ್ಸ್ಯಯಂತ್ರವನ್ನು ಭೇದಿಸಿದವನು ಅರ್ಜುನನೇ ಎಂಬ ಅಂಶ ದ್ರುಪದನಿಗೆ ತಿಳಿಯಿತು. ಅವನು ಪಾಂಡವರನ್ನು ಗುರುತಿಸಿ ಅವರು ಅಲ್ಲಿಗೆ ಬಂದುದಕ್ಕೆ ಬಹಳ ಸಂತೋಷಪಟ್ಟನು. ಅವನ ಹಾಗೆಯೇ ಪಾಂಡವರನ್ನು ಗುರುತಿಸಿದವನು ಶ್ರೀಕೃಷ್ಣ. ಬಲರಾಮನೊಡನೆ ಸ್ವಯಂವರಕ್ಕೆ ಬಂದಿದ್ದ ಆ ಯಾದವ ಶ್ರೇಷ್ಠನು ತನ್ನ ಅಣ್ಣನಿಗೆ ಪಾರ್ಥಾದಿಗಳನ್ನು ತೋರಿಸಿ ಅವರು ಬ್ರಾಹ್ಮಣ ವೇಷಧಾರಿಗಳೇ ಹೊರತು ನಿಜವಾದ ಬ್ರಾಹ್ಮಣರಲ್ಲವೆಂದು ಸ್ಪಷ್ಟಪಡಿಸಿದನು. ಆದರೆ ಬೇರೆ ಯಾರಿಗೂ ಅವರ ಪರಿಚಯ ಸಿಕ್ಕಲಿಲ್ಲ. ಅವರೆಲ್ಲ ದ್ರುಪದನ ಕುತಂತ್ರದಿಂದ ದ್ರೌಪದಿ ಬ್ರಾಹ್ಮಣನ ಕೈಗೆ ಬಿದ್ದಳೆಂದು ನಂಬಿ ತಮ್ಮ ತಮ್ಮ ಪಾಳೆಯಗಳಿಗೆ ಹೊರಟು ಹೋದರು.

ಇಲ್ಲಿಯವರೆಗಿನ ಕಥೆಯ ನಿರೂಪಣೆಯಲ್ಲಿ ಪಂಪ-ನನ್ನಯರಿಗಿಬ್ಬರಿಗೂ ಏನೂ ವ್ಯತ್ಯಾಸವಿಲ್ಲ. ಆದರೆ ಮುಂದೆ ಪಂಪನ ದಾರಿಯೇ ಬೇರೆ, ನನ್ನಯನ ದಾರಿಯೇ ಬೇರೆ. ಪಂಪನ ಪಾಂಚಾಲಿ ಪಾರ್ಥನ ಪತ್ನಿ, ಅವಳು ಪಾಂಡವರೈವರ ಹೆಂಡತಿಯಲ್ಲ! 'ಗುಣಾರ್ಣವನನಾ ದ್ರುಪದಜೆಯೊಡನೆ ಕುಳ್ಳಿರಿಸಿ ಹಿತಪುರೋಹಿತ ಪ್ರಾಜ್ಯಾಜ್ಯಾಹುತಿ ಹುತಹುತವಹಸಮಕ್ಷದೊಳ್ ಕೆಯ್ನೀರೆರೆದು ಪಾಣಿಗ್ರಹಣಂಗೆಯ್ಸಿ' ದನೆಂದು ಪಂಪ ಘೋಷಿಸಿದ್ದಾನೆ. ಮತ್ಸ್ಯಯಂತ್ರವನ್ನು ಭೇದಿಸಿ ದ್ರುಪದ ನಿಟ್ಟ ಪಣವನ್ನು ಗೆದ್ದು ದ್ರೌಪದಿಯನ್ನು ವೀರಶುಲ್ಕವಾಗಿ ಪಡೆದವನು ಪಾರ್ಥ. ದ್ರುಪದ ಅವನಿಗೆ ಹೆಣ್ಣು ಕೊಡಬೇಕೆಂದೇ ಮೊದಲಿನಿಂದ ಆಸೆಪಟ್ಟಿದ್ದದ್ದು! ಅವನು ತಡವಿಲ್ಲದೆ ಪಾರ್ಥ ಪಾಂಚಾಲಿಯರಿಗೆ ವಿವಾಹಮಹೋತ್ಸವವನ್ನು ವೈಭವದಿಂದ ಮಾಡಿ ಸಿದ್ಧಮನೋರಥನಾದನು. ವಿಕ್ರಮಾರ್ಜುನ ದ್ರೌಪದಿಯರ ಕಲ್ಯಾಣ ವರ್ಣನೆಯಲ್ಲಿಯೇ ಪಂಪ ಭಾರತದ ಮೂರನೆಯ ಆಶ್ವಾಸ ಮುಗಿದಿದೆ.

ಆದರೆ ನನ್ನಯಭಟ್ಟನ ಭಾರತದಲ್ಲಿ ದ್ರೌಪದಿಯ ವಿವಾಹ ಇಷ್ಟು ಬೇಗನೆ, ಇಷ್ಟು ಸರಳವಾಗಿ ಮುಗಿದಿಲ್ಲ. ಸ್ವಯಂವರದ ನಿಬಂಧನೆಯಂತೆ ಅರ್ಜುನನು ಮತ್ಸ್ಯಯಂತ್ರ ಭೇದನದಲ್ಲಿ ವಿಜಯಿಯಾದ ಕೂಡಲೆ ದ್ರೌಪದಿ ಬಂದು ತನ್ನ ಕೈಯಲ್ಲಿ ಹಿಡಿದಿದ್ದ ಪುಷ್ಪಮಾಲಿಕೆಯಿಂದ 'ಅಂಗಜರೂಪು ಧನಂಜಯ' ನನ್ನು ಪೂಜಿಸಿದಳು! ಅರ್ಜುನನ ಮೇಲೆ ಆ ಕ್ಷಣದಲ್ಲಿ ಪುಷ್ಪವೃಷ್ಟಿಯಾಯಿತು. ಅಂತರಿಕ್ಷದಲ್ಲಿ ದೇವದುಂದುಭಿಗಳು ಮೊಳಗಿದುವು. ಆದರೆ ದ್ರುಪದನು ಅರ್ಜುನನಿಗೆ ಆಗಲೇ ಕನ್ಯಾದಾನ ಮಾಡಿ ಧಾರೋದಕವನ್ನು ಎರೆಯಲು ಅವಕಾಶವಾಗಲಿಲ್ಲ.

ಯಾವನೋ ಒಬ್ಬ ಬ್ರಾಹ್ಮಣನಿಗೆ ದ್ರೌಪದಿ ಸಿಕ್ಕಿದಳೆಂಬ ಅಸೂಯೆಯಿಂದ ಪ್ರೇರಿತರಾದ ರಾಜಪುರುಷರೆಲ್ಲ ದ್ರುಪದ ತಮ್ಮನ್ನು ಈ ಸ್ವಯಂವರಕ್ಕೆ ಕರೆಯಿಸಿ ಅಪಮಾನ ಮಾಡಿದನೆಂದು ರಗಳೆ ಮಾಡಿ ಅವನಮೇಲೆ ಕಾಳಗಕ್ಕೆ ಸಿದ್ಧರಾದರು. "ಬ್ರಾಹ್ಮಣನು ಏನೇ ಮಾಡಿದರೂ ವಧ್ಯನಲ್ಲ. ನಮ್ಮ ರಾಜ್ಯವೂ ಅರ್ಥವೂ

ಬ್ರಾಹ್ಮಣಾರ್ಥವೇ ಅಲ್ಲವೆ ? ಆದ್ದರಿಂದ ಬ್ರಾಹ್ಮಣನ ಮೇಲೆ ಜಗಳ ಮಾಡುವುದೇ ?" ಎಂದು ಆ ಸಮಯದಲ್ಲಿಯೂ ಆ ರಾಜಪುರುಷರು ಯೋಚಿಸಿದರಂತೆ[1]. ಆಗ ದ್ರುಪದ ಅರ್ಜುನನ ಸಹಾಯವನ್ನು ಕೋರಲೇಬೇಕಾಯಿತು. ಆಗ ಭೀಮಾರ್ಜುನರು ಧನುರ್ಧಾರಿಗಳಾಗಿ ಕಣಕ್ಕಿಳಿಯಲು ಧಾಳಿಕಾರರ ಪುಂಡು ಹುಟ್ಟಡಗಿಹೋಯಿತು. ದ್ರುಪದನ ಮನಸ್ಸಿನಲ್ಲಿ ಈ ಇಬ್ಬರೂ 'ಬ್ರಾಹ್ಮಣರು' ಭೀಮಾರ್ಜುನರೇ ಇರಬಹುದೆ ಎಂಬ ಸಂಶಯ ಮೂಡಿತು. ಅಲ್ಲಿಗೆ ಬಂದಿದ್ದ ಶ್ರೀ ಕೃಷ್ಣನಿಗೆ ಯಾವ ಸಂದೇಹವೂ ಇರಲಿಲ್ಲ. ಅವನು ಆ ಇಬ್ಬರನ್ನು ಅಣ್ಣ ಬಲರಾಮನಿಗೆ ತೋರಿಸಿ ಪಾಂಡವರು ಪ್ರತ್ಯಕ್ಷರಾದರೆಂಬುದನ್ನು ಸಂತೋಷದಿಂದ ವಿವರಿಸುತ್ತಿದ್ದನು.

ಆ ಸನ್ನಿವೇಶದಲ್ಲಿ ಅಲ್ಲಿ ಹೆಚ್ಚು ಹೊತ್ತು ನಿಂತರೆ ತಮ್ಮ ರಹಸ್ಯ ಬಯಲಾದೀತೆಂಬ ಅಂಜಿಕೆಯಿಂದಲೋ ಏನೋ ಧರ್ಮರಾಯನು ನಕುಲ ಸಹದೇವರೊಡನೆ ತಮ್ಮ ಬಿಡಾರಕ್ಕೆ ಹೊರಟುಹೋದನು. ಇತ್ತ ಕರ್ಣಾರ್ಜುನರಿಗೆ ರೌದ್ರವಾದ ಕಾಳಗವೇ ತೊಡಗಿತಾದರೂ ಕಡೆಯಲ್ಲಿ ಅರ್ಜುನ ವಿಜಯಿಯಾದ. ಈ ಬ್ರಾಹ್ಮಣ ಯಾರಿರಬಹುದು ? ಎಂಬ ಸಂಶಯ ದುರ್ಯೋಧನಾದಿಗಳ ಮನಸ್ಸಿನಲ್ಲಿ ಮೂಡಿತಾದರೂ ಅಲ್ಲಿಯೇ ಇದ್ದ ಶ್ರೀಕೃಷ್ಣನು ದ್ರೌಪದಿಯನ್ನು ಸ್ವಯಂವರದಲ್ಲಿ ಪಡೆದ ಆ ಶೂರನು ಧರಣಿಸುರಾನ್ವಯೋತ್ತಮನೇ ಸರಿಯೆಂದು ಹೇಳಿ ಅವರ ಸಂಶಯವನ್ನು ನಿವಾರಿಸಿದನು. ಅಸಹಾಯರಾದ ಆ ರಾಜರು ತಮ್ಮತಮ್ಮ ದೇಶಗಳಿಗೇ ಹೊರಟು ಹೋದರು. ಅವರಿಗೆ ಅಲ್ಲಿ ಇನ್ನೇನು ಕೆಲಸ ?

ಇತ್ತ ತನ್ನ ಇಬ್ಬರು ಮಕ್ಕಳು ಬಿಡಾರಕ್ಕೆ ಬರುವುದು ತಡವಾಗಲು ಕುಂತಿ ಕಳವಳಪಡುತ್ತಿರಲು ಭೀಮಾರ್ಜುನರು ದ್ರೌಪದೀಸಮೇತರಾಗಿ ಬಂದು 'ನಾವೊಂದು ಭಿಕ್ಷೆ ತಂದಿದ್ದೇವೆ' ಎಂದು ನುಡಿದರು. ಒಡನೆಯೇ ಕುಂತಿಯು ನಿರ್ವಿಚಾರಳಾಗಿ 'ಅದನ್ನು ನೀವು ಐವರೂ ಉಪಯೋಗಿಸಿ' ಎಂದು ನುಡಿದುಬಿಟ್ಟಳು ! ಆದರೆ ಮರುಗಳಿಗೆಯಲ್ಲಿಯೇ ಅಲ್ಲಿ 'ಭುವನತ್ರಯ ರಾಜ್ಯಲಕ್ಷ್ಮಿ' ಯಂತೆ ನಿಂತಿದ್ದ ಕನ್ಯೆಯನ್ನು ಕಂಡು ಕುಂತಿ ಲಜ್ಜೆಪಟ್ಟಳು. ಅವಳಿಗೆ ಅಧರ್ಮ ಭೀತಿಯುಂಟಾಯಿತು ! 'ತನ್ನ ಮಾತು ಎಂದೂ ಸುಳ್ಳಾಗಲಿಲ್ಲ. ತನ್ನ ಮಕ್ಕಳು ಹಿಂದೆಂದೂ ತನ್ನ ಮಾತನ್ನು ಮೀರಿದವರಲ್ಲ. ಈಗ ಈ ಕನ್ಯೆಯ ವಿಚಾರದಲ್ಲಿ ತನ್ನ ಬಾಯಿಂದ ಇಂಥ ಮಾತು ಹೊರಟಿತಲ್ಲ ?' ಎಂದು ಆಕೆ ವ್ಯಥೆಪಟ್ಟಳು. ಬಹುಶಃ ಆ ಕಾಲಕ್ಕೆ ಬಹುಪತಿತ್ವ ಪದ್ಧತಿ ನಶಿಸಿ ಹೋಗಿದ್ದಿರಬಹುದು. ಆದ್ದರಿಂದಲೇ ಕುಂತಿಯ ಮನಸ್ಸಿನಲ್ಲಿ ಈ ಧರ್ಮಸಂದೇಹವುಂಟಾಯಿತು. ಆಗ ಅವಳು ಧರ್ಮಜನೊಡನೆ ತನ್ನ ಮನಸ್ಸಿನ ಆತಂಕವನ್ನು ತೋಡಿಕೊಂಡಳು. 'ಅನಘ ! ನೀವು ಯಾವಾಗಲೂ ನನ್ನ ಮಾತನ್ನು ಮೀರುವುದಿಲ್ಲ. ಆದರೆ

---

[1] 'ಏಮಿ ದೋಷಂಬು ಸೇಸಿಯು ಬ್ರಾಹ್ಮಣುಂಡು ವಧ್ಯುಂಡು ಗಾಡು ಮನ ರಾಜ್ಯಂಬು ನರ್ಥಂಬುನು ಬ್ರಾಹ್ಮಣಾರ್ಥಂಬು ಕಾವುನ ನವ್ವಿಪ್ರುತೋಡಿದೇಮಿ'—I-7-192

ಇದು ಲೋಕದಲ್ಲಿಲ್ಲದ್ದು ! (ಅನಘ ವಿೂರೆಪ್ಪಡು ಮದ್ವಚನಾತಿಕ್ರಮಂಬು ಸೇಯರು ಇದಿ ಲೋಕಮುನ ಲೇನಿಯದಿ) ಯಾರೂ ಆಚರಿಸದಂಥ ಒಂದು ಕೆಲಸವನ್ನು ಮಾಡುವಂತೆ ತಾನು ಮಕ್ಕಳಿಗೆ ಹೇಳಿದಂತಾಯಿತೆಂಬುದು ಆಕೆಯ ಪೇಚಾಟ.

ಆಗ ಧರ್ಮಜನು ತಾಯಿಗೆ ಸಮಾಧಾನ ಹೇಳಿ 'ಅರ್ಜುನಾ, ನೀನು ಸಂಪಾದಿಸಿದ ಈ ತರುಣಿಯನ್ನು ಅಗ್ನಿಸಾಕ್ಷಿಕವಾಗಿ ನೀನೇ ಪಾಣಿಗ್ರಹಣ ಮಾಡು' ಎಂದನು. ಆದರೆ ಅರ್ಜುನನು 'ದೊಡ್ಡವನಿರುವಾಗ ಕಿರಿಯನೊಬ್ಬನಿಗೆ ವಿವಾಹವಾಗುವುದು ಧರ್ಮವಿರುದ್ಧ' ಎಂದು ಧರ್ಮಸೂಕ್ಷ್ಮದ ಪ್ರಶ್ನೆಯನ್ನೆತ್ತಿ 'ಇವಳನ್ನು ನೀನು ಅಗ್ರಮಹಿಷಿಯಾಗಿ ಸ್ವೀಕರಿಸು. ನಮ್ಮ ನಾಲ್ವರ ಅಭಿಪ್ರಾಯವೂ ಇದೇ ಆಗಿದೆ' ಎಂದು ಉತ್ತರ ಹೇಳಿ ಆ ಧರ್ಮಸಂಶಯಕ್ಕೆ ಪರಿಹಾರವನ್ನೂ ಸೂಚಿಸಿದನು.

ದ್ರೌಪದಿಯನ್ನು ಯಾರು ಮದುವೆಯಾಗಬೇಕೆಂಬ ವಿಚಾರದಲ್ಲಿ ಪಾಂಡವರು ಚರ್ಚಿಸುತ್ತಿರುವಾಗಲೇ. ಆ ಪಂಚಪಾಂಡವರ ದೃಷ್ಟಿಗಳೂ ಹೃದಯಗಳೂ ವಿಧಿಪ್ರೇರಣೆಯಿಂದ ಆ ಲಲಿತಾಂಗಿಯಲ್ಲಿ ನಿಂತುವು ! ಪಾಂಡು ಭೂಪಾಲನ ತನೂಜ. ಪಂಚಕವು ಪಾಂಚಾಲಿಯ ದರ್ಶನದಿಂದ ಪಂಚಶರಾಹತಿಗೆಗುರಿಯಾಯಿತು. ಆಗ ಧರ್ಮರಾಯನು ಪಾಂಚಾಲಿಯಲ್ಲಿ ಬದ್ಧಾನುರಾಗರಾದ ತಮ್ಮಂದಿರ ಇಂಗಿತವನ್ನೂ ಗ್ರಹಿಸಿ ಅವರೊಡನೆ 'ಗುರುವಚನಾನುಸಾರವಾಗಿ ಇವಳು ನಮ್ಮೈವರಿಗೂ ಹೆಂಡತಿಯಾಗತಕ್ಕಳು. ಆದ್ದರಿಂದ ನಾವೈವರೂ ಅವಳನ್ನು ಸ್ವೀಕರಿಸೋಣ' ಎಂದು ಹೇಳುತ್ತಿದ್ದ ಕ್ಷಣದಲ್ಲಿಯೇ ಅಲ್ಲಿಗೆ ಬಲರಾಮ ವಾಸುದೇವರು ಬಂದರು. ಅವರು ಕುಂತೀದೇವಿಗೂ ಧರ್ಮರಾಯನಿಗೂ ನಮಸ್ಕಾರ ಮಾಡಿ ಭೀಮಾರ್ಜುನ ನಕುಲ ಸಹದೇವರನ್ನು ತಕ್ಕವಿಸಿಕೊಂಡು ಅವರ ಯೋಗಕ್ಷೇಮಗಳನ್ನು ವಿಚಾರಿಸಿ ತಿಳಿದುಕೊಂಡು 'ಅಧರ್ಮನಿರತನಾದ ಧೃತರಾಷ್ಟ್ರದುರ್ಯೋಧನರು ಮಾಡಿದ ಲಾಕ್ಷಾಗೇಹದಾಹದ ಪ್ರಯೋಗದಿಂದ ವಿಮುಕ್ತರಾದಿರಿ. ಇನ್ನು ನಿಮಗೆ ಒಳ್ಳೆಯದಾಗುತ್ತದೆ' ಎಂದಿಷ್ಟೇ ಹೇಳಿ ಆ ಸೋದರರು ಅಲ್ಲಿಂದ ತೆರಳಿದರು.

ಇತ್ತ ದ್ರುಪದನು ತನ್ನ ಮಗಳನ್ನು ವರಿಸಿದ ಆ ಧನುರ್ಧರನು ಯಾರೋ ಯಾವ ವಂಶದವನೋ ಎಂಬುದನ್ನು ತಿಳಿಯಬೇಕೆಂಬ ಆತುರದಿಂದ ಧೃಷ್ಟದ್ಯುಮ್ನನನ್ನು ಕಳುಹಿಸಲು ಅವನು ಭೀಮಾರ್ಜುನರ ಬಳಿವಿಡಿದು ಬಂದು ಆ ಕುಂಬಾರನ ಮನೆಯಲ್ಲಿ ನಡೆದ ವಿದ್ಯಮಾನಗಳನ್ನೆಲ್ಲ ಗಮನಿಸಿ ಬಂದು 'ಅವರು ಕ್ಷತ್ರಿಯರೋ ಬ್ರಾಹ್ಮಣರೋ ಇರಬಹುದೇ ಹೊರತು ಅನ್ಯಜಾತಿಯವರಲ್ಲ.' ಎಂದು ಹೇಳಲು ದ್ರುಪದ ಸಂತೋಷಪಟ್ಟು ತನ್ನ ಪುರೋಹಿತನನ್ನು ಕಳುಹಿಸಿದನು. ಅವನು ಧರ್ಮರಾಯನನ್ನು ಕಂಡು ಪ್ರಶ್ನಿಸಿದನಾದರೂ ಅವನಿಗೆ ಧರ್ಮರಾಯನಿಂದ ಸ್ಪಷ್ಟವಾದ ನೇರ ಉತ್ತರ ಲಭಿಸಲಿಲ್ಲ. ಕೊನೆಗೆ ತಂದೆಯ ಅಪ್ಪಣೆಯಂತೆ ಧೃಷ್ಟದ್ಯುಮ್ನನು ರಥಸಮೇತನಾಗಿ ಬಂದು ಪಾಂಡವರನ್ನೂ ಕುಂತೀ ದ್ರೌಪದಿಯರನ್ನೂ ರಾಜಯೋಗ್ಯವಾದ ರಥಗಳಲ್ಲಿ ಕುಳ್ಳಿರಿಸಿಕೊಂಡು ಅರಮನೆಗೆ ಕರೆತಂದನು. ಆಗ

ದ್ರುಪದನಿಂದ ಸತ್ಕೃತನಾದ ಧರ್ಮರಾಯನು ತನ್ನೆಲ್ಲರ ಪರಿಚಯವನ್ನು ಸ್ಪಷ್ಟೋಕ್ತಿಗಳಿಂದ ಹೇಳಲು ದ್ರುಪದ 'ಅತಿ ಹರ್ಷರಸಾವೇಶ ಪರವಶ' ನಾಗಿ ಕೊಂಚಹೊತ್ತಿನ ಮೇಲೆ 'ಸ್ವಯಂವರ ಲಬ್ಧಳಾದ ಈ ಕನ್ಯೆಯನ್ನು ಅರ್ಜುನನು ಧರ್ಮವಿಧಿಗನುಗುಣವಾಗಿ ಪಾಣಿಗ್ರಹಣ ಮಾಡಲಿ' ಎಂದು ಬಿನ್ನವಿಸಿದನು. ಆಗ ಧರ್ಮಜನು ತನಗೂ ಭೀಮನಿಗೂ ಮೊದಲು ಮದುವೆಯಾಗದೆ ಅರ್ಜುನನಿಗೆ ಮದುವೆ ಸಲ್ಲದೆನಲು,[1] ದ್ರುಪದನು 'ಹಾಗಾದರೆ ಇವಳನ್ನು ನೀನೇ ಮದುವೆಯಾಗು. ಧರ್ಮಮಾರ್ಗವನ್ನು ಯಾರೂ ತಪ್ಪತಕ್ಕುದಲ್ಲ' ಎಂದು ಉತ್ತರಕೊಟ್ಟನು. ಆಗ ಧರ್ಮರಾಯನು 'ಅಯ್ಯಾ, ನಾವು ಐವರೂ ಇವಳನ್ನು ವರಿಸುತ್ತೇವೆ. ಇದು ನಮ್ಮ ತಾಯಿಯ ಅಪ್ಪಣೆ. ಅದು ನಮಗೆ ಅಲಂಘನೀಯ' ಎನ್ನಲು, ದ್ರುಪದನಿಗೆ ಬಹಳ ಆಶ್ಚರ್ಯವಾಯಿತು. ಅವನು ಈ 'ಅಶ್ರುತಪೂರ್ವವಾದ ಸಲಹೆಯನ್ನು ಒಪ್ಪಲು ಸಿದ್ಧನಿರಲಿಲ್ಲ. ಇಂತಹ ವಿವಾಹದ ಯುಕ್ತಾಯುಕ್ತತೆಗಳ ವಿಮರ್ಶೆಗೆ ಆರಂಭಿಸುವ ಹೊತ್ತಿನಲ್ಲಿ ಅಲ್ಲಿಗೆ ಕೃಷ್ಣದ್ವೈಪಾಯನರೇ ದಯಮಾಡಿಸಿದರು!

ವ್ಯಾಸರು ದ್ರುಪದನ ಮನಸ್ಸಿನ ಸಂದೇಹ ನಿವಾರಣೆಗಾಗಿ ದ್ರೌಪದಿಯ ಭವಾಂತರ ಕಥೆಗಳನ್ನೂ, ಪಂಚೇಂದ್ರರ ಕಥೆಯನ್ನೂ ಹೇಳಿ ದ್ರೌಪದಿಯು ಪಾಂಡವರೈವರನ್ನೂ ವರಿಸುವುದು ದೇವಸಮ್ಮತವಾದುದೆಂದು ತಿಳಿಸಿದರು. ಅಲ್ಲದೆ ದ್ರುಪದನಿಗೆ ಅವರು ದಿವ್ಯದೃಷ್ಟಿಯನ್ನು ಕೊಡಲು, ಅವನು ಪಾಂಡವರ ಪೂರ್ವದೇಹಗಳನ್ನು ಕಂಡು ವಿಸ್ಮಯಪಟ್ಟನು. ಆಗ ವ್ಯಾಸರು ಅವನಿಗೆ ನಿತಂತನೆಂಬ ರಾಜರ್ಷಿಯ ಐವರು ಮಕ್ಕಳು ಸಾಲ್ವೇಯ, ಶೂರಸೇನ, ಶ್ರುತಸೇನ, ಬಿಂದುಸಾರ ಮತ್ತು ಅತಿಸಾರರೆಂಬವರು ಔಶೀನರಪತಿಯ ಮಗಳು ಅಜಿತೆಯೆಂಬವಳನ್ನು ಸ್ವಯಂವರದಲ್ಲಿ ಗ್ರಹಿಸಿ ಅವಳಲ್ಲಿ ಸಂತಾನ ಪಡೆದ ವೃತ್ತಾಂತವನ್ನು ವರ್ಣಿಸಿ 'ಹಿಂದಿನ ಮಹಾತ್ಮರಲ್ಲಿಯೂ ಇಂಥ ಚರಿತೆಯುಂಟಾದ್ದರಿಂದ ಪಾಂಡವರೈವರಿಗೂ ದ್ರೌಪದಿಯನ್ನು ಕ್ರಮವಾಗಿ ಪಾಣಿಗ್ರಹಣ ಮಾಡಿಸು. ಇದು ದೈವಾಧಿಷ್ಠಿತವಾದ ಘಟನೆ' ಎಂದು ನುಡಿದು ದ್ರುಪದನನ್ನು ಒಪ್ಪಿಸಿದರು.

ಅದರಂತೆ ದ್ರೌಪದಿ ಪಾಂಡವಪತ್ನಿಯಾದಳು! ಇಲ್ಲಿ ನನ್ನಯಭಟ್ಟ ವ್ಯಾಸ ಭಾರತ ಕಥಾಕ್ರಮವನ್ನೇ ಅನುಸರಿಸಿದ್ದಾನೆ. ಅವನ ಹಲವು ಪದ್ಯಗಳು ಮೂಲ ಭಾರತದ ಶ್ಲೋಕಗಳ ಯಥಾತಥವಾದ ಅನುವಾದಗಳಾಗಿವೆ. ಕುಂತಿ ದ್ರುಪದ

---

[1] ಭೀಮ ಹಿಡಿಂಬೆಯನ್ನು ಮದುವೆಯಾದ ಸಂಧರ್ಭದಲ್ಲಿ ಇಂಥ ಧರ್ಮಸಂದೇಹವೇನೂ ಹುಟ್ಟಲಿಲ್ಲ. ಹಿರಿಯನಾದ ಯುಧಿಷ್ಠಿರನಿಗೆ ಇನ್ನೂ ಮದುವೆಯಾಗದಿದ್ದರೂ ಆಗ ಭೀಮನಿಗೆ ಕುಂತಿಯೇ ಹೇಳಿ ಮದುವೆ ಮಾಡಿಸಿದಳು. ಬಹುಶಃ ಅವಳು ರಕ್ಕಸಿಯಾದುದರಿಂದ ಮತ್ತು ಅವಳು ಭೀಮನನ್ನು ಒಲಿದುಬಂದವಳಾದ್ದರಿಂದ ಹಾಗೆ ಆಗಬಹುದಾಯಿತೇನೊ!

ಮೊದಲಾದವರ ಮಾತುಗಳಿಂದಲೇ ಆ ಕಾಲಕ್ಕೆ ಬಹುಪತಿತ್ವವು ಅಸಂಭಾವ್ಯವಾಗಿದ್ದಿತೆಂದು ತಿಳಿಯುತ್ತದೆ.[1]

ವ್ಯಾಸರು ದ್ರುಪದನನ್ನು ಈಬಗೆಯ ಮದುವೆಗೆ ಒಪ್ಪಿಸಲು ಬಹಳ ಶ್ರಮಪಡಬೇಕಾಯಿತು. ಪಂಪನು ಪಾಂಚಾಲಿಯ ಪಂಚಪತಿತ್ವವನ್ನು ಪ್ರಸ್ತಾಪಿಸಲೇ ಇಲ್ಲವಾದ್ದರಿಂದ ಪಂಚೇಂದ್ರೋಪಾಖ್ಯಾನ, ನಾಲಾಯನಿಯ ಕಥೆ, ಯಾವುವೂ ಅಗತ್ಯವಾಗಲಿಲ್ಲ; ಬಹುಪತಿತ್ವದ ಔಚಿತ್ಯ ಅನೌಚಿತ್ಯಗಳನ್ನು ಕುರಿತ ಮಥನಕ್ಕೂ ಅವಕಾಶವಾಗಲಿಲ್ಲ. ಈ ಎಲ್ಲ ಉಪಾಖ್ಯಾನಗಳು, ಧರ್ಮೋಪದೇಶ ಮುಂತಾದುವನ್ನೆಲ್ಲ ಕೈಬಿಟ್ಟುದರಿಂದ ದ್ರೌಪದಿಯ ವಿವಾಹ ಕಥೆ 'ವಿಕ್ರಮಾರ್ಜುನ ವಿಜಯ'ದಲ್ಲಿ ಸಂಕ್ಷೇಪವೂ ಸರಳವೂ ಸುಂದರವೂ ಆಗಿದೆ.

## ಯುಧಿಷ್ಠಿರ ಪಟ್ಟಬಂಧನಂ

ದ್ರೌಪದಿಯ ಸ್ವಯಂವರ ಸಂದರ್ಭದಲ್ಲಿ ಸಂಭವಿಸಿದ ಯುದ್ಧಕೋಲಾಹಲದಲ್ಲಿ ದುರ್ಯೋಧನಾದಿಗಳಿಗೆ ಧನುರ್ವಿದ್ಯಾ ಪಾರಂಗತರಾದ ಆ ಬ್ರಾಹ್ಮಣರು ಯಾರಿರಬಹುದೆಂಬ ಕುತೂಹಲವುಂಟಾಯಿತಾದರೂ ಅವರು ಪಾಂಡವರೇ ಇರಬಹುದೆಂಬ ಊಹೆ ತೋರಲಿಲ್ಲ. ಇಷ್ಟಕ್ಕೂ ಪಾಂಡವರನ್ನು ವಾರಣಾವತದ ಬೆಂಕಿಯಲ್ಲಿ ಕೊಂದೆವೆಂದೇ ಅವರು ನಂಬಿದ್ದರು. ಅಲ್ಲದೆ ಆಗ ಶ್ರೀ ಕೃಷ್ಣವಚನದಿಂದ ಅವರ ಸಂಶಯ ನಿವಾರಣೆಯಾಗಿಹೋಯಿತು! ಯಾರೋ ಬ್ರಾಹ್ಮಣ ದ್ರೌಪದಿಯನ್ನು ಸ್ವಯಂವರದಲ್ಲಿ ಪಡೆದುಕೊಂಡನೆಂದೇ ನಂಬಿ ಅವರು ಹಸ್ತಿನಾವತಿಗೆ ಹೊರಟುಹೋದರು. ಆದರೆ ದ್ರೌಪದಿಯ ವಿವಾಹವನ್ನು ನೋಡಿ ಬಂದ ಧೃತರಾಷ್ಟ್ರನ ಆಪ್ತಭೃತ್ಯರು ಅವರು ಬ್ರಾಹ್ಮಣರಲ್ಲವೆಂದೂ, ಪಾಂಡವರೇ ಹೌದೆಂದೂ ಖಚಿತಪಡಿಸಿದರು. ಲಕ್ಷ್ಯಭೇದನ ಮಾಡಿದವನೇ ಅರ್ಜುನನೆಂದು ತಿಳಿಯಿತು. ಈ ವಾರ್ತೆ ಕೇಳಿ ಧೃತರಾಷ್ಟ್ರ ದುರ್ಯೋಧನಾದಿಗಳು 'ಬಿಲ್ಲುಂಬೆಜಿಗು' ಮಾದರು. 'ತಾವು ಅವರನ್ನು ಬೆಂಕಿಯಲ್ಲಿ ಸುಟ್ಟರೂ ಅವರು ಸಾಯದೆ ಬದುಕಿದರಲ್ಲ!' ಎಂಬುದೇ ಅವರ ವ್ಯಥೆಯಾಯಿತು.

---

1 ಪಶ್ಚಾಚ್ಚ ಕುಂತೀ ಪ್ರಸಮೀಕ್ಷ್ಯ ಕೃಷ್ಣಾಂ ;
ಕಷ್ಟಂ ಮಯಾಭಾಷಿತಮಿತ್ಯುವಾಚ — I-190-2
ಏಕಸ್ಯ ಬಹ್ವಯೋ ವಿಹಿತಾ ಮಹಿಷ್ಯಃ ಕುರುನಂದನ ; — I–194-27, 28
ನೈಕಸ್ಯಾಬಹವಃ ಪುಂಸಃ ಶ್ರೂಯಂತೇ ಪತಯಃ ಕ್ವಚಿತ್
ಲೋಕವೇದ ವಿರುದ್ಧಂ ತ್ವಂ ನಾ ಧರ್ಮಂ ಧರ್ಮವಿಚ್ಛುಚಿಃ
ಕರ್ತುಮರ್ಹಸಿ ಕೌಂತೇಯ ಕಸ್ಮಾತ್ ತೇ ಬುದ್ಧಿರೀದೃಶೀ

ಆದರೆ ಪಾಂಡವರ ಈ ಸುದ್ದಿ ಭೀಷ್ಮ ದ್ರೋಣಾದಿಗಳಿಗೆ ಬಹಳ ಸಂತೋಷ ವನ್ನೇ ಕೊಟ್ಟಿತು. ಅವರು ತಟ್ಟನೆ ತಮ್ಮಲ್ಲಿಯೇ ಮಂತ್ರಾಲೋಚನೆ ಮಾಡಿಕೊಂಡು ಧರ್ಮರಾಯನನ್ನು ಕರೆತರುವ ಕೆಲಸಕ್ಕೆ ವಿದುರನನ್ನು ನೇಮಿಸಿದರು. ಪಾಂಡವರು ವಿದುರನ ಆಗಮನದಿಂದ ಆನಂದಪಟ್ಟು ಅವನ ಮಾತಿನಂತೆ ಹಸ್ತಿನಾವತಿಗೆ ದ್ರೌಪದೀ ಸಮೇತರಾಗಿ ಬಂದು, ಹಿರಿಯರನ್ನು ವಂದಿಸಿ, ತಮಗಾಗಿ ಸಿದ್ಧಪಡಿಸಿದ್ದ ಬೀಡುಗಳಲ್ಲಿ ನೆಲಸಿದರು. ಹಲವು ದಿನ ಔತಣ ವಿನೋದ ವಿಹಾರಗಳಲ್ಲಿಯೇ ಕಳೆದುಹೋದವು. ಪಾಂಡವರು ಬದುಕಿ ಬಂದದ್ದೇ ಭೀಷ್ಮ ದ್ರೋಣ ಕೃಪ ವಿದುರರಿಗೆ ಬಹಳ ಸಂತೋಷದ ವಿಷಯವಾಗಿತ್ತು.

ಒಂದು ದಿನ ಭೀಷ್ಮನು 'ಎನ್ನ ನಡಪಿದುದರ್ಕಂ ಕೂರ್ತುದರ್ಕಂ ಪಾಂಡು ಪುತ್ರರ್ಗೆ ನೆಲನಂ ಪಚ್ಚುಕೊಟ್ಟು ಪಟ್ಟಮಂ ಕಟ್ಟುವೆನ್' ಎಂದು ತನ್ನ ನಿಶ್ಚಯ ವನ್ನು ಹೇಳಿದನು. ಆದರೆ ದುರ್ಯೋಧನನು ಈ ಸಲಹೆಗೆ ಸಮ್ಮತಿಸಲಿಲ್ಲ. ಭೀಷ್ಮನ ಸಿಟ್ಟು ಕೆರಳಿತು. 'ಸೊರ್ಕಿ ನೀಂ ನುಡಿಯದಿರಣ್ಣ. ನಿನ್ನ ನುಡಿಗಾಂ ತಡೆದಿರ್ಪೆನೆ ಪೇಟ್ ಸುಯೋಧನಾ?' ಎಂದು ಅವನು ಕೇಳಿದಾಗಲೂ ಕೌರವನಿಗೆ ಎಚ್ಚರ ಮೂಡ ಲಿಲ್ಲ. ವಿವೇಕ ಹುಟ್ಟಲಿಲ್ಲ. ಅವನು ಇನ್ನೂ ಹಟಹಿಡಿದಿರಲು ಭೀಷ್ಮನು ಉಗ್ರ ನಾಗಿ 'ಆನ್ ಅವರ್ಗೆ ಪಟ್ಟಮಂ ಕಟ್ಟುವಾಗಳ್ ಅಡ್ಡಂ ಬರ್ಪ ಗಂಡರಂ ನೋಟ್ಪೆಂ' ಎಂದು ಗರ್ಜಿಸಿದನು! ಇನ್ನು ದುರ್ಯೋಧನನು ತಾನೆ ಏನು ಮಾಡಬಹುದು? ಪರಶುರಾಮನಿಗೇ ಅಂಜದ ಆ ಕುರುಪ್ರವೀರನು ಈ ದುರ್ಯೋಧನನಿಗೆ ಹೆದರುವು ದುಂಟೆ? ಆಗ ವಿಧಿಯಿಲ್ಲದೆ ದುರ್ಯೋಧನನು 'ನೀಮ್ ಎಂದುದನ್ ಎಂದು ಬಾಟ್ವೆನ್' ಎಂದು ನುಡಿದು ಭೀಷ್ಮನ ಏರ್ಪಾಟಿಗೆ ಒಪ್ಪಿಕೊಂಡನು. ಯುಧಿಷ್ಠಿರನಿಗೆ ರಾಜ್ಯಾಭಿಷೇಕವಾಯಿತು.

ಧೃತರಾಷ್ಟ್ರನು ಆಗ ಉಪಾಯ ಹೂಡಿ ಪಾಂಡವರು ಹಸ್ತಿನಾವತಿಯಲ್ಲಿ ನಿಲ್ಲದ ಹಾಗೆ ತಂತ್ರಮಾಡಿದನು. ರಾಜ್ಯವನ್ನು ಎರಡಾಗಿ ಭಾಗಿಸಿ ಆಸೇತುಗಂಗಾಪರ್ಯಂತ ವಾದ ದಕ್ಷಿಣ ಮತ್ತು ಪಶ್ಚಿಮ ಭಾಗವನ್ನು ಪಾಂಡವರಿಗೂ, ಉತ್ತರ ಮತ್ತು ಪೂರ್ವ ಭೂಭಾಗವನ್ನು ಕೌರವರಿಗೂ ಹಂಚಿಕೊಟ್ಟು ಪಾಂಡವರು ಇಂದ್ರಪ್ರಸ್ಥದಲ್ಲಿದ್ದು ಕೊಂಡು ರಾಜ್ಯಭಾರ ಮಾಡುವುದಾದರೆ ದುರ್ಯೋಧನನೊಡನೆ ಕಲಹ ಕಿಸುರು ಇಲ್ಲದೆ ಪ್ರಶಸ್ತವಾಗಿರುವುದೆಂದು ಹೇಳಿ ಅವರನ್ನು ಆ ನಗರಕ್ಕೆ ಕಳುಹಿಸಿಬಿಟ್ಟನು.

ನನ್ನಯ ಈ ಸಂದರ್ಭದಲ್ಲಿ ದುರ್ಯೋಧನನು ತನ್ನ ಲಾಕ್ಷಾಗೇಹದ ತಂತ್ರ ಫಲಿಸದೆ ಪಾಂಡವರು ಬದುಕಿ ಮತ್ತೆ ಪ್ರಬಲರಾಗುತ್ತಿರುವರೆಂದು ಬಹಳವಾಗಿ ವ್ಯಥೆ ಪಟ್ಟು ಕರ್ಣಶಲ್ಯಾದಿಗಳೊಡನೆ ಯೋಚನೆಮಾಡಿ ಪಾಂಡವರನ್ನು ಪಾಂಚಾಲನಗರ ದಲ್ಲಿಯೇ ನಾಶಪಡಿಸಬೇಕೆಂದು ಸಂಕಲ್ಪಿಸಿದನೆಂದೂ ಅವರ ಈ ದುರುದ್ದೇಶವನ್ನು ತಿಳಿದ ಭೀಷ್ಮ ದ್ರೋಣ ವಿದುರರು ದುರ್ಯೋಧನ ಧೃತರಾಷ್ಟ್ರರಿಗೆ ವಿವೇಕ ಹೇಳಿ ಸುಮ್ಮನಾಗಿ ಸಿದರೆಂದೂ ಹೇಳಿದ್ದಾನೆ. 'ಪಾಂಡವ ಪಾಂಚಾಲ ವಿಭೇದನೋಪಾಯ' ವನ್ನೂ

ದುರ್ಯೋಧನ ಚಿಂತಿಸಿದನಂತೆ! ಪಾಂಚಾಲಿಯ ನಿಮಿತ್ತದಿಂದಲಾದರೂ ಪಾಂಡವರಲ್ಲಿಯೇ ಪರಸ್ಪರ ವೈರ ಹುಟ್ಟಬಹುದೆಂದು ಅವನು ಆಶಿಸಿದನು! ಆದರೆ ಧೃತರಾಷ್ಟ್ರ ವಿದುರನ ಹಿತವಾಕ್ಯಗಳಿಗೆ ಮಣಿದು ಧರ್ಮಜನಿಗೆ ಅರ್ಧ ರಾಜ್ಯವನ್ನು ಕೊಡುವುದಕ್ಕೆ ಸಮ್ಮತಿಸಿದನು. ಆಗ ವಿದುರನು ಪಾಂಚಾಲನಗರಕ್ಕೆ ಹೋಗಿ ಪಾಂಡವರನ್ನು ಕಂಡು ಅಭಿನಂದಿಸಿ ಭೀಷ್ಮಾದಿಗಳ ಸಂದೇಶವನ್ನು ತಿಳಿಸಿ ಅವರನ್ನು ಹಸ್ತಿನಾವತಿಗೆ ಕರೆತಂದನು. ಭೀಷ್ಮ ದುರ್ಯೋಧನನನ್ನು ಗದರಿಸಿದ ಪ್ರಸಂಗ ನನ್ನಯನ ಭಾರತದಲ್ಲಿಲ್ಲ. ಆದರೆ ದ್ರೋಣ ಪಾಂಡವರಿಗೆ ರಾಜ್ಯಭಾಗವನ್ನು ಕೊಡುವುದು ಉಚಿತವೆಂದು ಹೇಳಿದಾಗ ಕರ್ಣನು ಪ್ರತಿಭಟಿಸಿ ಅವರನ್ನು ಆಕ್ಷೇಪಿಸಿದನೆಂದೂ ಅವರಿಬ್ಬರಿಗೂ ಜಗಳವೇ ಒದಗಲು ವಿದುರನು ಅವರನ್ನು ತಡೆದು ತಾನು ಧೃತರಾಷ್ಟ್ರನಿಗೆ ವಿವೇಕ ಹೇಳಿ ಪಾಂಡವರಿಗೆ ರಾಜ್ಯಾರ್ಧವನ್ನು ಕೊಡಲು ಒಪ್ಪಿಸಿದನೆಂದೂ ನನ್ನಯಭಟ್ಟ ವರ್ಣಿಸಿದ್ದಾನೆ.

ಧರ್ಮರಾಯನು ವಿದುರನ ಸಂದೇಶ ಕೇಳಿ ಶ್ರೀಕೃಷ್ಣನ ಅಭಿಪ್ರಾಯ ಪಡೆದು ಗಜಪುರಿಗೆ ಪ್ರಯಾಣಮಾಡಲು ಒಪ್ಪಿದನು. ವಿದುರನು ಕುಂತೀ ದ್ರೌಪದೀ ಸಮೇತರಾದ ಪಾಂಡವರನ್ನೂ ವಾಸುದೇವ ಧೃಷ್ಟದ್ಯುಮ್ನರನ್ನೂ ಜತೆಯಲ್ಲಿ ಕರೆದುಕೊಂಡು ಸೈನ್ಯಸಮೇತನಾಗಿ ಗಜಪುರಕ್ಕೆ ಬರಲು ಭೀಷ್ಮದ್ರೋಣರೇ ಇದಿರುಬಂದು ಸ್ವಾಗತಿಸಿ ಪಾಂಡವರನ್ನು ಹರಸಿ ಪುರಪ್ರವೇಶ ಮಾಡಿಸಿದರು. ಐದು ವರ್ಷಗಳ ಕಾಲ ಪಾಂಡವರು ಹಸ್ತಿನಾಪುರದಲ್ಲಿ ಆನಂದದಿಂದ ಇದ್ದಮೇಲೆ ಒಂದು ದಿನ ಧೃತರಾಷ್ಟ್ರನು ಭೀಷ್ಮ ದ್ರೋಣ ವಿದುರ ದುರ್ಯೋಧನಾದಿಗಳೆಲ್ಲರ ಸಮಕ್ಷದಲ್ಲಿ ಪಾಂಡವರಿಗೆ ಅರ್ಧ ರಾಜ್ಯವನ್ನು ಕೊಟ್ಟು ಅವರಿಗೆ ಖಾಂಡವಪ್ರಸ್ಥ ನಗರವು ನಿವಾಸವಾಗತಕ್ಕದ್ದೆಂದು ಏರ್ಪಡಿಸಿದನಂತೆ! ಅದರಂತೆ ಪಾಂಡವರು ಖಾಂಡವಪ್ರಸ್ಥಕ್ಕೆ ಹೊರಟುಹೋದರು. ಆಮೇಲೆ ಶ್ರೀಕೃಷ್ಣನ ಸೂಚನೆಯಂತೆ ದೇವೇಂದ್ರನು ವಿಶ್ವಕರ್ಮನನ್ನು ಬರಮಾಡಿ ಅವನಿಂದ ಇಂದ್ರಪ್ರಸ್ಥವೆಂಬ ಒಂದು ದಿವ್ಯಸುಂದರ ನಗರವನ್ನು ಪಾಂಡವರಿಗಾಗಿ ನಿರ್ಮಾಣಮಾಡಿಸಿದನು. ವ್ಯಾಸ ಧೌಮ್ಯರು ಶಾಂತಿವಿಧಿಗಳನ್ನು ನೆರವೇರಿಸಿ ಸುಪ್ರಶಸ್ತವಾದ ರಮ್ಯಪ್ರದೇಶದಲ್ಲಿ ವಿಶ್ವಕರ್ಮನು ಕಾರ್ಯಾರಂಭಮಾಡಿ ನಗರವನ್ನು ನಿರ್ಮಿಸಿಕೊಟ್ಟನು.

ಅಮರಾವತಿಯಂತೆ ಶೋಭಿಸುತ್ತಿದ್ದ ಆ ಇಂದ್ರಪ್ರಸ್ಥದಲ್ಲಿ ಪಾಂಡವರು ಧರ್ಮಾನುರಾಗಿಗಳಾಗಿ ರಾಜ್ಯಭಾರ ಮಾಡುತ್ತಿರುವಾಗ ಒಂದುದಿನ ನಾರದಮಹರ್ಷಿ ಬಂದು ಪಾಂಡವರು ಮಾಡಿದ ಸತ್ಕಾರವನ್ನು ಸ್ವೀಕರಿಸಿ, ದ್ರೌಪದಿಯನ್ನು ಮರೆಗೆ ಕಳುಹಿಸಿಕೊಟ್ಟು ಏಕಾಂತದಲ್ಲಿ ಸರ್ವಧರ್ಮಜ್ಞರೂ ಅನ್ಯೋನ್ಯ ನಿತ್ಯ ಸಹಾಯಯುತರೂ ಆದ ಆ ಸಹೋದರರಿಗೆ ಹಿತಬೋಧೆ ಮಾಡುತ್ತ 'ಈ ದ್ರುಪದ ಸುತೆಯು ನಿಮ್ಮೈವರಿಗೂ ಧರ್ಮಪತ್ನಿಯಾಗಿದ್ದಾಳೆ. ಇದು ಲೋಕಾಗಮ ವಿರುದ್ಧವಾದ ಕ್ರಮ: ಈ ಸುಂದರಿಯ ಕಾರಣದಿಂದ ನಿಮ್ಮ ನಿಮ್ಮಲ್ಲಿ ವಿಪ್ರೀತಿ ಹುಟ್ಟದಿರಬೇಕು' ಎಂದು ಹೇಳಿ ಹಿಂದೆ ಏಕ ಸ್ತ್ರೀಯ ಮೇಲೆ ಅಪೇಕ್ಷೆ ಹುಟ್ಟಿದ ಸುಂದೋಪಸುಂದರೆಂಬ

ಸೋದರರು ಆ ನಿಮಿತ್ತದಿಂದಲೇ ಹೊಡೆದಾಡಿ ಸತ್ತ ಕಥೆಯನ್ನು ನಿರೂಪಿಸಿದನು. 'ಸ್ತ್ರೀನಿಮಿತ್ತದಿಂದ ಧೃತಿಮಂತರಿಗೂ ಭೇದವುಂಟಾಗುತ್ತದೆ. ಆದ್ದರಿಂದ ನೀವು ಸರಿಯಾಗಿ ವಿವೇಚಿಸಿ ನಿಮ್ಮಲ್ಲಿಯೇ ಒಂದು ವ್ಯವಸ್ಥೆ ಮಾಡಿಕೊಳ್ಳಿ' ಎಂದು ನಾರದ ತನ್ನ ಮಾತನ್ನು ಮುಗಿಸಿದನು. ಪಾಂಡವರು ಆ ದಿವ್ಯಮುನಿಯ ಹಿತವಾಕ್ಯವನ್ನು ಮನ್ನಿಸಿ ದ್ರೌಪದಿಯು ಒಬ್ಬೊಬ್ಬ ಗಂಡನ ಮನೆಯಲ್ಲಿಯೂ ಒಂದೊಂದು ವರ್ಷ ಇದ್ದು ಸಂಸಾರ ಮಾಡತಕ್ಕುದೆಂದೂ ಅವಳು ಒಬ್ಬನ ಮನೆಯಲ್ಲಿರುವಾಗ ಉಳಿದವರು ಯಾರಾದರೂ ತಿಳಿಯದೆ ಒಳಹೊಕ್ಕರೆ ಅಂಥವರು ಒಂದು ವರ್ಷಕಾಲ ತೀರ್ಥ ಯಾತ್ರೆ ಮಾಡುತ್ತ ನಿಯಮಸ್ಥರಾಗಿರಬೇಕೆಂದೂ ನಾರದನ ಇದಿರಿನಲ್ಲಿಯೇ ಪ್ರತಿಜ್ಞೆ ಮಾಡಿದರು! ನಾರದ ದೇವಲೋಕಕ್ಕೆ ಹೊರಟನು.

## ಅರ್ಜುನನ ತೀರ್ಥಯಾತ್ರೆ

ಪಂಪಭಾರತದಲ್ಲಿ ಸುಂದೋಪಸುಂದರ ಕಥೆಗಾಗಲಿ ನಾರದನ ಉಪದೇಶದಂತೆ ಪಾಂಡವರು ತಮ್ಮಲ್ಲಿಯೇ ಮಾಡಿಕೊಂಡ ಒಪ್ಪಂದದ ಕಥೆಗಾಗಲಿ ಸ್ಥಾನವಿಲ್ಲ. ಆದರೆ ಮುಂದೆ ಅರ್ಜುನ ತೀರ್ಥಯಾತ್ರೆ ಹೊರಟ ಕಥೆ ಭಾರತದಲ್ಲಿ ಮುಖ್ಯವಾದ ಒಂದು ಭಾಗ. ಆ ಯಾತ್ರಾ ಪ್ರಸಂಗದಲ್ಲಿಯೇ ಅವನು ದ್ವಾರಕೆಗೆ ಹೋಗಿ ಸುಭದ್ರೆಯನ್ನು ಮದುವೆಯಾದದ್ದು! ಆ ಪ್ರವಾಸಕ್ಕೆ ಅವನು ಧರ್ಮರಾಯ ದ್ರೌಪದಿಯರು ಒಟ್ಟಿಗಿದ್ದುದನ್ನು ನೋಡಿದುದೇ ಕಾರಣ. ಆದ್ದರಿಂದ ಪಂಪನು ಅರ್ಜುನನ ಯಾತ್ರೆಗೆ ಬೇರೊಂದು ಕಾರಣವನ್ನು ಹೊಂದಿಸಬೇಕಾಯಿತು. ಭಾರತ ಕಥೆಯಲ್ಲಿ ಒಂದು ಮುಖ್ಯ ವ್ಯತ್ಯಾಸವನ್ನು ಮಾಡಿದುದರಿಂದ ನಮ್ಮ ಕವಿ ಅದಕ್ಕೆ ಪೋಷಕವಾಗಿ ಇನ್ನೂ ಕೆಲವು ಬದಲಾವಣೆಗಳನ್ನು ಅನಿವಾರ್ಯವಾಗಿ ಮಾಡಲೇ ಬೇಕಾಯಿತು. ಅರ್ಜುನ ಒಂದು ವರ್ಷಕಾಲ ದೇಶಸಂಚಾರ ಹೊರಟದ್ದು ಯಾವ ತಪ್ಪಿನ ಪ್ರಾಯಶ್ಚಿತ್ತಕ್ಕೂ ಅಲ್ಲ. ಅವನಿಗೆ ಒಂದೇ ಕಡೆ ಇದ್ದು ಬೇಸರವಾಯಿತಂತೆ! ಧರ್ಮರಾಯನು ಅರಸನಾಗಿರುವಾಗ ರಾಜ್ಯದಲ್ಲಿ ಯಾವ ಗಲಭೆಯೂ ಇರಲಿಲ್ಲ. ಬಹಿಶ್ಶತ್ರುಗಳಾಗಲಿ ಅಂತಶ್ಶತ್ರುಗಳಾಗಲಿ ಏನೂ ಕಷ್ಟ ಕೊಡುವಂತಿರಲಿಲ್ಲ. ಧರ್ಮಜನಿಗೆ 'ಶತ್ರುಪಕ್ಷಕ್ಷಯಕರ ಕರವಾಳ ದಂಷ್ಟ್ರಾಭೀಳಭುಜಂಗಮೂರ್ತಿ ವಿಶ್ವವಿಶ್ವಂಭರಾಧಾರಮಪ್ಪರಿಕೇಸರಿಯ ತೋಳಿನ' ಬೆಂಬಲವಿತ್ತು! 'ಅಜಾತಶತ್ರು' ವಿನ ರಾಜ್ಯದಲ್ಲಿ 'ಅರಿಕೇಸರಿ' ಗೆ ಏನು ಕೆಲಸ ತಾನೆ ಇದ್ದೀತು? ಅರ್ಜುನ ನಿರುದ್ಯೋಗಿಯಾದನು. ಅವನಿಗೆ ಬಹಳ ಬೇಸರವಾಯಿತು. 'ಉಂಡು ಪಟ್ಟಿರ್ಪನನಣಮೆ ನಿರುದ್ಯೋಗಿಯಂ ಭೂಪನೆಂಬರ್' ಎಂದು ಅವನು ರಾಜಪುರುಷರಿಗೆ ಲಭಿಸುವ ಭೋಗಜೀವನವನ್ನು ಮೆಚ್ಚಲಾರದಾದನು. ಆದ್ದರಿಂದ ಪಾರ್ಥನು 'ದಿಗಂಗನಾಮುಖಾವಲೋಕನಂಗೆಯ್ಯಲ್ಬಗೆದು' ಬಿಲ್ಲು ಬತ್ತಳಿಕೆಗಳನ್ನು ತೆಗೆದುಕೊಂಡು ಪ್ರಯಾಣ ಹೊರಟನು.

ಪಂಪನ ಅರ್ಜುನ ಹೀಗೆ ದಿಗ್ವಿಜಯಕ್ಕಾಗಿ ಪ್ರಯಾಣ ಹೊರಟು ಸಮಸ್ತ ಭರತಖಂಡವನ್ನೂ ಒಂದು ಸುತ್ತುಹಾಕಿ ಹಲವು ಕ್ಷೇತ್ರಗಳನ್ನು ಕಂಡನಂತೆ! ಮೊದಲು ಅವನು ಉತ್ತರದಿಕ್ಕಿಗೆ ಪ್ರಯಾಣಮಾಡಿ ಕಾಮ್ಯಕವನವನ್ನು ಹೊಕ್ಕು ನೀಲಪರ್ವತವನ್ನೇರಿ ಹಿಮಾಚಲವನ್ನು ಕಂಡು ಆ ಮಹಾಪರ್ವತದ ಮೇಲೆ ಸಂಚರಿಸಿ ಗಂಗಾದ್ವಾರವನ್ನು ಕಂಡು ಅಲ್ಲಿ ತಪಸ್ಸು ಮಾಡುತ್ತಿದ್ದ ಮುನಿಗಳಿಗೆ ಕಂಟಕರಾಗಿದ್ದ ಅನೇಕ ರಾಕ್ಷಸರನ್ನು ನಿಗ್ರಹಿಸಿ ಕೆಲವು ದಿವಸ ಅಲ್ಲಿ ನಿಂತನು. ಆಗ ಮದನಲತೆಯೆಂಬ ನಾಗಕನ್ಯೆ ಅವನನ್ನು ಮೋಹಿಸಿ ನಾಗಲೋಕಕ್ಕೆ ಕರೆದೊಯ್ದಳು. ಅಲ್ಲಿ ಅರ್ಜುನ ಆನಂದದಿಂದ ವಿಹರಿಸುತ್ತಿರಲು ಆ ನಾಗಕನ್ಯೆ ತೇಜೋವಂತನಾದ ಮಗನನ್ನು ಹೆತ್ತಳು. ಅಲ್ಲಿ ಕೆಲವು ದಿನ ನಿಂತು ಮಗನ ಬಾಲಕ್ರೀಡೆಯನ್ನು ನೋಡಿ ನಲಿದು ಪಾರ್ಥ ನಾಗಲೋಕದಿಂದ ಹೊರಟು ಅಗಸ್ತ್ಯವಟ ವಸಿಷ್ಠ ಪರ್ವತ ಮೊದಲಾದ ಹಲವು ತೀರ್ಥಗಳಲ್ಲಿ ಸಂಚರಿಸುತ್ತ ಆ ದೇಶಭಾಗಗಳನ್ನೆಲ್ಲ 'ಆತ್ಮೀಯ ಶಾಸನಾಯತ್ತ' ವಾಗಿಸಿದನು. ಆಮೇಲೆ ಪೂರ್ವ ದೇಶವನ್ನು ಸೇರಿ ಅಲ್ಲಿ ಹಲವರು ರಾಜರನ್ನು ಕಾಳಗದಲ್ಲಿ ಗೆದ್ದು ಅರ್ಜುನ ಸೇತು ಬಂಧುರವಾದ ದಕ್ಷಿಣ ಸಮುದ್ರದ ತಡಿಯನ್ನು ಸೇರಿದನು.

ದಕ್ಷಿಣ ಸಮುದ್ರ ತೀರದಲ್ಲಿ ಶ್ರೀರಾಮನು ವಿಹರಿಸಿದ ಸ್ಥಳಗಳನ್ನೆಲ್ಲ ಕಂಡು ಅಕಳಂಕರಾಮನು ' ತನ್ನ ಹಿಂದಿನ ಜನ್ಮವಾದ ರಾಮಾವತಾರದ ಕಥೆಯನ್ನೆಲ್ಲ ಸ್ಮರಿಸಿಕೊಂಡನಂತೆ[1]. ಆಮೇಲೆ ಅವನು ಅಗಸ್ತ್ಯ ತೀರ್ಥವನ್ನು ಸೇರಿ ಆ ಮಹಾಮುನಿಯು ವಾತಾಪಿಯೆಂಬ ರಕ್ಕಸನನ್ನು ಕೊಂದ ಕಥೆಯನ್ನು ಸ್ಮರಿಸಿಕೊಂಡನು. ಅಲ್ಲಿ ಅರ್ಜುನನು 'ವರ್ಧಮಾನನೆಂಬ ಋಷಿಯ ಶಾಪದೊಳುಗ್ರಗ್ರಾಹ ಸ್ವರೂಪದೊಳಿರ್ದಪ್ಸರಸೆಯರಂ ವಿಶಾಪೆಯರ್ಮಾಡಿ' ಆಮೇಲೆ ಮಲಯ ಪರ್ವತವನ್ನು ಸೇರಿದನು. ಆ ಪರ್ವತದ ಭವ್ಯತೆಯನ್ನು ನೋಡಿ ಮೆಚ್ಚಿಕೊಳ್ಳುತ್ತ ವಿಹರಿಸಿದ ಗುಣಾರ್ಣವನಿಗೆ ದೂರದಲ್ಲಿ ' ಚಳದನಿಳಾಹತಕ್ಷುಭಿತ ಭಂಗುರ ತುಂಗ ತರಂಗ ಮಾಳಿಕಾ ' ಯುತವಾದ ಅರ್ಣವವೇ ಕಾಣಿಸಿತು! ಆ ಮಹಾಸಾಗರವನ್ನು ಅವನು ' ಮನಂ ಬಯಸಿ ' ನೋಡಿದನಂತೆ. ಸಮುದ್ರ ದರ್ಶನ ಮಾಡುತ್ತ ಮುಂದೆ ಹೊರಟ ಅರಿಕೇಸರಿಗೆ ಹಿಂದೆ ಜೀಮೂತವಾಹನನು ಶಂಖಚೂಡನೆಂಬ ನಾಗನನ್ನು ಸಂರಕ್ಷಿಸಿ ' ನಾಗಾನಂದಮಂ ಮಾಡಿದ ' ಪರ್ವತಶಿಖರ ಕಾಣಿಸಿತು. ಅಭಿನವಜೀಮೂತವಾಹನನು ಅವನ ಪರೋಪಕಾರ ಬುದ್ಧಿಯನ್ನು ಮೆಚ್ಚಿ ಮುಂದೆ ನಡೆದು ಗೋಕರ್ಣನಾಥನನ್ನು ಕಂಡು ' ಆ

---

[1] ಪಂಪನ ಪ್ರಕಾರ ಅರ್ಜುನನೇ ಅರಿಕೇಸರಿ, ಅರಿಕೇಸರಿಯು ಅಕಳಂಕರಾಮ! ಅವನೇ ಹಿಂದೆ ತ್ರೇತಾಯುಗದಲ್ಲಿ ಶ್ರೀರಾಮನಾಗಿದ್ದವನು!

ತ್ರಿಲೋಕೈಕ ಸಂಗೀತ. ಕೀರ್ತಿ'ಗೆ ಕೈಮುಗಿದು ಭಕ್ತಿಯಿಂದ ಸ್ತೋತ್ರಮಾಡಿದನು.[1]

ಗೋಕರ್ಣದಿಂದ ಹೊರಟು ಅರ್ಜುನನು ಬನವಾಸಿ ದೇಶದಲ್ಲಿ ಸಂಚರಿಸಿ ಅಲ್ಲಿ ಜನರ ಚಾಗ ಭೋಗ ಗೇಯ ಗೊಟ್ಟಿಗಳ ವೈಭವವನ್ನು ವಿಶೇಷವಾಗಿ ಮೆಚ್ಚಿಕೊಂಡು ದಲ್ಲದೆ ಆ ನಾಡಿನ ಸೌಂದರ್ಯದಿಂದ ಆಕರ್ಷಿತನಾದನು. ನಂದನವನದಂತೆ ಶೋಭಿಸುವ ಆ ದಿವ್ಯ ಸುಂದರ ಪ್ರದೇಶದಲ್ಲಿ ಮರಿದುಂಬಿಯಾಗಿ ಕೋಗಿಲೆಯಾಗಿ ಹುಟ್ಟುವುದೂ ಒಂದು ಭಾಗ್ಯವೆಂದು ಭಾವಿಸಿ, ಆ ನಾಡಿನ ಹೆಚ್ಚುಗಳವನ್ನು ಹೊಗಳಿದನು. 'ತೆಂಕನಾಡ ಮಱೆಯಲ್ಕಿನ್ನೇಂ ಮನಂ ಬರ್ಕುಮೇ' ಎಂದು ಪಾರ್ಥ ಪ್ರಶ್ನಿಸಿದ್ದಾನೆ! ಇಂದ್ರಪ್ರಸ್ಥಪುರದ ಪಾರ್ಥ ಬನವಾಸಿ ದೇಶದ ಪ್ರಕೃತಿಸೌಂದರ್ಯವನ್ನೂ ಜನರ ನಯ ನಾಗರಿಕತೆಗಳನ್ನೂ ಬಹಳವಾಗಿ ಮೆಚ್ಚಿ ಮಾರುಹೋದನೆಂದು ಪಂಪ ಬಹಳ ಉತ್ಸಾಹದಿಂದ ವರ್ಣಿಸಿದ್ದಾನೆ. ಉರಿ ಬಿಸಿಲಿನ ಲೆಂಬುಳವಾಟಕದಲ್ಲಿದ್ದ ಕವಿಗೆ ತೆಂಕನಾಡು ಮಲಯಾಚಲ ಬನವಾಸಿಗಳ ಸ್ಮರಣೆಯೇ ಮಹಾ ಮಧುರವಾಗುವುದರಲ್ಲಿ ಆಶ್ಚರ್ಯವೇನಿದೆ ?

ಅರ್ಜುನನು ತೆಂಕನಾಡನ್ನು 'ಒಂದೆ ಬಿಲ್ಲೊಳುಂಡಿಗೆ ಸಾಧ್ಯಂ ಮಾಡಿ ಪಶ್ಚಿಮ ದಿಗ್ವಿಭಾಗಾಭಿಮುಖನಾಗಿ' ಹೊರಟು ದ್ವಾರವತಿಯನ್ನು ಸೇರಿದನು.

ನನ್ನಯ ಅರ್ಜುನನ ತೀರ್ಥಯಾತ್ರೆಯನ್ನು ಬಣ್ಣಿಸಿರುವನಾದರೂ ಅವನು ಬನವಾಸಿ ಮೊದಲಾದುವನ್ನು ಹೇಳಿಲ್ಲ. ಮೂಲಭಾರತದಲ್ಲಿ ಪ್ರಸ್ತಾಪಿತವಾಗಿರುವ ಗಂಗಾದ್ವಾರ, ಅಗಸ್ತ್ಯತೀರ್ಥ ಮುಂತಾದುವನ್ನು ಹೇಳಿ ಅಲ್ಲೆಲ್ಲಾ ಪಾಂಡವ ಮಧ್ಯಮನಾದ ಪಾರ್ಥನು ದೇವರ್ಷಿ ಪಿತೃತರ್ಪಣಗಳನ್ನು ಮಾಡಿದುದನ್ನು ಮರೆಯದೆ ಹೇಳಿದ್ದಾನೆ. ಅವನಿಗೆ 'ಅಖಿಲ ವೇದ ವೇದಾಂಗ ಪಾರಗರಾದ' ಬ್ರಾಹ್ಮಣರು ನೀಡಿದ ಸಹಾಯ ಸಹಕಾರಗಳನ್ನು ನನ್ನಯ ಉಲ್ಲೇಖಿಸಿದ್ದಾನೆ. ನಾಗಲೋಕದಿಂದ ಹಿಂತಿರುಗಿ ಬಂದು ಅರ್ಜುನ ಹಿರಣ್ಯಬಿಂದು ತೀರ್ಥದಲ್ಲಿ 'ಗೋದಾನ ಭೂದಾನ ಹಿರಣ್ಯದಾನ' ಗಳನ್ನು ಮಾಡಿದನಂತೆ! ಅನಂತರ ನನ್ನಯನ ಪಾರ್ಥ ಕಳಿಂಗ ದೇಶವನ್ನು ಪ್ರವೇಶಿಸಿ ಮಹೇಂದ್ರಪರ್ವತವನ್ನು ಸೇರಿ ಗೋದಾವರೀ ನದಿ, ಭೀಮೇಶ್ವರ,[2] ಶ್ರೀಶೈಲ ಮೊದಲಾದ ಪುಣ್ಯಕ್ಷೇತ್ರ ತೀರ್ಥಗಳನ್ನು ಸಂದರ್ಶಿಸಿ, ವೇಗಿದೇಶದಲ್ಲಿ

---

[1] ಈ ಸನ್ನಿವೇಶದಲ್ಲಿ ಪಂಪನು ಶಿವಮಹಿಮೆಯನ್ನು ಮನಃಪೂರ್ವಕವಾಗಿ ಹೊಗಳುತ್ತಾ, ಸುಂದರವಾದ ಒಂದು ಸಂಸ್ಕೃತ ಶ್ಲೋಕವನ್ನೇ ರಚಿಸಿದ್ದಾನೆ. ಪಂಪನು ಜೈನನಾಗಿದ್ದರೂ ಶಿವಕಥೆಯನ್ನು ಹಾರ್ದಿಕವಾಗಿ ಮೆಚ್ಚಿದ್ದನೆಂದೂ ಬಹುಶಃ ಜೈನನಾಗುವ ಮುನ್ನ ಶಿವಭಕ್ತನಾದ ಬ್ರಾಹ್ಮಣನಾಗಿದ್ದನೆಂದೂ ತೋರುತ್ತದೆ.

[2] ಪಂಪನು ತನಗೆ ಪ್ರಿಯವಾದ ಕನ್ನಡ ನಾಡಿನ ಸ್ಥಳಗಳಿಗೆ ಪಾರ್ಥನನ್ನು ಕರೆದೊಯ್ದಂತೆ ನನ್ನಯ ತನಗೆ ಪ್ರಿಯವಾದ ಗೋದಾವರಿ ಮತ್ತು ಭೀಮೇಶ್ವರಗಳಲ್ಲಿಗೆ ಪಾರ್ಥನನ್ನು ಕರೆದೊಯ್ದಿದ್ದಾನೆ! ವೇಗಿ ದೇಶದ ಯಜ್ಞಶಾಲೆಗಳನ್ನು ನನ್ನಯನ ಪಾರ್ಥ ಮೆಚ್ಚಿಕೊಂಡನು—ಅವು ನನ್ನಯನಿಗೆ ಮೆಚ್ಚುಗೆಯಾದ್ದರಿಂದ!

ಭೂಸುರೋತ್ತಮರು ಮಾಡುತ್ತಿದ್ದ ಅಧ್ವರಗಳನ್ನು ಸಂದರ್ಶಿಸಿ ಮುಂದುವರಿದು 'ಕಾವೇರೀ ಮಹಾ ಸಮುದ್ರ ಸಂಗಮ'ದಲ್ಲಿ ಭೂಸುರೇಶ್ವರರಿಗೆ ಅಭಿಮತಾರ್ಥ ದಾನ ಗಳನ್ನು ಮಾಡಿ ಕೃತಾರ್ಥನಾದನು. ಆಮೇಲೆ ಅವನು ಮಣಿಪುರಕ್ಕೆ ಹೋಗಿ ಚಿತ್ರಾಂಗದೆಯನ್ನು ಮದುವೆಯಾದ ಕಥೆ ಬಂದಿದೆ.

ಮಣಿಪುರದಲ್ಲಿ ತಂಗಿದ್ದ ಕಾಲದಲ್ಲಿ ಒಂದು ದಿನ ಅರ್ಜುನನು 'ತಪೋಧನ ಬ್ರಾಹ್ಮಣ ಸಮೇತ' ನಾಗಿ ಹೊರಟು ಸಮೀಪದಲ್ಲಿದ್ದ ಸಮುದ್ರ ತೀರ ತೀರ್ಥಗಳನ್ನು ನೋಡುತ್ತ ಸೌಭದ್ರವೆಂಬ ಒಂದು ತೀರ್ಥವನ್ನು ಕಂಡು ಅದರಲ್ಲಿ ಸ್ನಾನಮಾಡಲು ಸಿದ್ಧ ನಾದನು. ಆಗ ಜತೆಯಲ್ಲಿದ್ದ ಬ್ರಾಹ್ಮಣನು ಅಲ್ಲಿ ಸ್ನಾನ ಮಾಡಬಾರದೆಂದೂ ಅದರಲ್ಲಿಯೂ ಇನ್ನುಳಿದ ನಾಲ್ಕು ತೀರ್ಥಗಳಲ್ಲಿಯೂ ಉಗ್ರವಾದ ಮೊಸಳೆಗಳು ಸೇರಿ ಕೊಂಡಿರುವುದರಿಂದ ಅಲ್ಲಿ ಯಾರೂ ಪ್ರವೇಶಿಸಿ ಒದುಕುವಂತಿಲ್ಲವೆಂದೂ ಹೇಳಿದನು. ಅವು 'ದುರ್ಜನ ಗೃಹೀತಗಳಾದ ರಾಜರ ವಿಭವಗಳಂತೆ ಸಾಧುಜನ ವರ್ಜಿತಗಳು'! ಇದನ್ನು ಕೇಳಿದ ಪಾರ್ಥನು 'ಅಶೇಷ ತೀರ್ಥ ಸೇವಾರ್ಥಿಯಾಗಿ ಬಂದ ನಾನು ಈ ತೀರ್ಥದಲ್ಲಿ ಸ್ನಾನಮಾಡದಿರುವುದು ಪೌರುಷವಲ್ಲ' ವೆಂದು ಬಗೆದು ಸಾಹಸಿಕನಾಗಿ ನೀರಿನಲ್ಲಿ ಧುಮ್ಮಿಕ್ಕಿದನು. ಒಡನೆಯೇ ಒಂದು ಭೀಭತ್ಸವಾದ ದೊಡ್ಡ ಮೊಸಳೆ ಬಂದು ಅವನನ್ನು ಹಿಡಿದುಕೊಂಡಿತು. ಆದರೆ ಪಾರ್ಥನು ಅಂಜದೆ ಅದನ್ನು ಸುಲಭವಾಗಿ ನೀರಿನಿಂದ ಹೊರಕ್ಕೆ ಹೊರಡಿಸಿದನು. ಒಡನೆಯೇ ಆ ಮೊಸಳೆ ಒಂದು ಮಹಾ ಸುಂದರಾಂಗಿಯಾಗಿ ನಿಂತಿತು! ಪಾರ್ಥ ಆಶ್ಚರ್ಯಮಗ್ನನಾದನು. ಆ ಹೆಣ್ಣು ತನ್ನ ಜತೆಗಾತಿಯರು ನಾಲ್ವರೂ ತನ್ನಂತೆ ಮೊಸಳೆಯ ರೂಪದಲ್ಲಿರುವರೆಂದೂ ಅವರನ್ನೂ ಹೀಗೆಯೇ ನೀರಿನಿಂದ ಹೊರಕ್ಕೆ ಅಟ್ಟದರೆ ಅವರಿಗೂ ಸ್ವಸ್ವರೂಪ ಬರುವುದೆಂದೂ ಹೇಳಿ ತಮಗೆ ಶಾಪ ಬಂದ ವೃತ್ತಾಂತವನ್ನೂ ಶಾಪಕೊಟ್ಟ ಮಹಾಮುನಿಯೇ ಅದಕ್ಕೆ ಮೋಕ್ಷೋಪಾಯವನ್ನೂ ಸೂಚಿಸಿದುದನ್ನೂ ವಿವರವಾಗಿ ಹೇಳುತ್ತಾಳೆ. ಅರ್ಜುನ ಉಳಿದ ನಾಲ್ಕು ತೀರ್ಥಗಳನ್ನೂ ಹೊಕ್ಕು ಅಲ್ಲಿನ ಮೊಸಳೆಗಳನ್ನೂ ಹೊರಡಿಸಿ ಶಾಪ ವಿಮೋಚನೆ ಮಾಡಿಸಿ ಆ ಪುಣ್ಯ ತೀರ್ಥಗಳು ಸಕಲರಿಗೂ ಪ್ರವೇಶ ಯೋಗ್ಯವಾಗು ವಂತೆ ಮಾಡಿದನು. ಆ ಐದು ಮಂದಿ ರಮಣಿಯರೂ ಶಾಪಗ್ರಸ್ತರಾಗಿದ್ದ ಅಪ್ಸರೆಯರು. ಅವರು ಅರ್ಜುನನಿಗೆ ಕೃತಜ್ಞತೆಯ ವಂದನೆ ಹೇಳಿ ಸ್ವರಾಜ್ಯಕ್ಕೆ ಹೊರಟುಹೋದರು.

ಈ ಅಪ್ಸರೆಯರ ಶಾಪ ಮೋಕ್ಷಣ ವಿಚಾರವನ್ನು ವ್ಯಾಸರು ಸುಮಾರು ಐವತ್ತೆಂಟು ಶ್ಲೋಕಗಳಲ್ಲಿ ವರ್ಣಿಸಿದ್ದಾರೆ. ನನ್ನಯಭಟ್ಟನು ಋಷಿಯೊಬ್ಬನ ಶಾಪಾನುಗ್ರಹ ಶಕ್ತಿಯ ವರ್ಣನೆಯನ್ನೊಳಗೊಂಡ ಈ ಕಥೆಗೆ ಹದಿನಾರು ಗದ್ಯ ಪದ್ಯಗಳನ್ನು ವಿನಿಯೋಗಿಸಿದ್ದಾನೆ. ಅರ್ಜುನನು ಪುಣ್ಯತೀರ್ಥಗಳಿಗೆ ಒದಗಿದ್ದ ದುಸ್ಥಿತಿಯನ್ನು ಹೋಗಲಾಡಿಸಿದ ಈ ವೃತ್ತಾಂತವನ್ನು ಅತ್ಯಂತ ಸಂಕ್ಷೇಪವಾಗಿ 'ಅಗಸ್ತ್ಯತೀರ್ಥ ಸೌಭದ್ರ ಪೌಲೋಮ ಕಾಂಭೋಜ ಭಾರದ್ವಾಜಮೆಂಬಯ್ದು ತೀರ್ಥಂಗಳೊಳ್ ವರ್ಧಮಾನನೆಂಬ ಋಷಿಯ ಶಾಪದೊಳುಗ್ರಗ್ರಾಹ ಸ್ವರೂಪ

ದೊಳಿರ್ದಪ್ಪರಸೆಯಂ ವಿಶಾಪೆಯೆನ್ಮಾಡಿ' ಎಂದು ಪಂಪ ಒಂದು ವಾಕ್ಯಾರ್ಥದಲ್ಲಿ ಹೇಳಿ ಮುಗಿಸಿದ್ದಾನೆ. ಅರಿಕೇಸರಿಯ ಮಹಿಮೆಯ ನಿರೂಪಣೆಗೆ ಅನುಕೂಲವಾದ ಈ ವೃತ್ತಾಂತವನ್ನು ಪಂಪ ಅದೇಕೆ ಇಷ್ಟು ಸಂಗ್ರಹ ಮಾಡಿದನೊ ! ಹಿಂದೆ ದ್ರೋಣರು ಶಿಷ್ಯನ ಶಕ್ತಿ ಪರೀಕ್ಷೆಗಾಗಿ ಒಮ್ಮೆ ನದಿಯಲ್ಲಿ ಮೊಸಳೆಗೆ ಸಿಕ್ಕಿದರು ! ಆಗ ಪಾರ್ಥ ಅದನ್ನು ಕೊಂದು ಗುರುಗಳನ್ನು ರಕ್ಷಿಸಿದನು. ಆ ಕಥೆಯನ್ನು ಪಂಪ ಹೇಳಿದ್ದಾನೆ. ಈಗ ಮತ್ತೆ ಈ ಮೊಸಳೆಗಳನ್ನು ಗೆದ್ದನೆಂದು ಹೇಳುವುದು ಪುನರುಕ್ತಿಯೆಂದು ಕವಿ ಬಗೆದನಾದೀತು ! ಆದರೆ ಹಾಗೆಂದು ಆ ಕಥೆಯನ್ನು ಸೂಚಿಸದೆ ಬಿಟ್ಟುಬಿಡಲು ಅವನ ಮನಸ್ಸು ಒಪ್ಪಲಿಲ್ಲ. ಹೀಗಾಗಿ 'ಹಿತಮಿತವಚನ' ನಾದ ಪಂಪನು ಈ ಕಥೆಗೆ ಅರ್ಧವಾಕ್ಯದ ಮರ್ಯಾದೆ ಸಲ್ಲಿಸಿದ್ದಾನೆ ! ಪಂಪ ಅಪ್ಸರಸೆಯರಿಗೆ ಶಾಪಕೊಟ್ಟ ಮುನಿಯ ಹೆಸರು ವರ್ಧಮಾನನೆಂದು ಹೇಳಿದ್ದಾನೆ. ಆದರೆ ಈ ಹೆಸರು ನನ್ನಯನಲ್ಲಿ ಯಾಗಲಿ ವ್ಯಾಸಭಾರತದಲ್ಲಾಗಲಿ ಇಲ್ಲ; ವರ್ಧಮಾನನೆಂಬ ಹೆಸರಾಗಲಿ ಬೇರೆ ಇನ್ನೊಂದು ಹೆಸರಾಗಲಿ ಇಲ್ಲ. ಅವನು ಯಾರೋ ಒಬ್ಬ ಋಷಿ, ಬ್ರಾಹ್ಮಣ ಋಷಿ. ಅವನ ಹೆಸರು ವ್ಯಾಸ ನನ್ನಯರಿಬ್ಬರಿಗೂ ಮುಖ್ಯವೆನಿಸಲಿಲ್ಲ. ಅವನ ಹೆಸರೇನಾದ ರೇನು ? ಅವನು ಕೊಟ್ಟ ಶಾಪ ಮತ್ತು ಅದರ ಪರಿಹಾರಗಳ ಕಥೆ ಅವರಿಗೆ ಪ್ರಕೃತ ವಾಗಿತ್ತು.

## ಸುಭದ್ರಾ ಹರಣ

ಅರ್ಜುನನ ಪ್ರಭಾವದಿಂದ ಆ ತೀರ್ಥಗಳಲ್ಲಿದ್ದ ಐವರು ನಾರಿಯರು ಶಾಪ ವಿಮುಕ್ತಿ ಹೊಂದಿ ಮತ್ತೆ ನಾರೀರೂಪವನ್ನು ಪಡೆದ ಕಾರಣ ಅಂದಿನಿಂದ ಆ ತೀರ್ಥಗಳಿಗೆ ನಾರೀತೀರ್ಥಗಳೆಂದೇ ಹೆಸರಾಯಿತು ! ಅಲ್ಲಿಂದ ಅರ್ಜುನ ಮಣಿಪುರಕ್ಕೆ ಹಿಂತಿರುಗಿ ಚಿತ್ರಾಂಗದೆಯಲ್ಲಿ ಬಭ್ರುವಾಹನನೆಂಬ ಮಗ ಹುಟ್ಟಿದ ಮೇಲೆ ಅಲ್ಲಿಂದ ಹೊರಟು ಪ್ರಭಾಸತೀರ್ಥಕ್ಕೆ ಹೋದನು. ಅಲ್ಲಿಗೆ ದ್ವಾರಕಿ ಬಹಳ ಹತ್ತಿರವೆಂದು ತಿಳಿಯಲು ಅಲ್ಲಿಗೆ ಹೋಗುವ ಅಪೇಕ್ಷೆಯಾಯಿತು. ಅರವಿಂದನಾಭನ ಸಂದರ್ಶನ ಮೊದಲನೆಯ ಕಾರಣ. ನನ್ನಯನ ಪ್ರಕಾರ ಇನ್ನೂ ಒಂದು ಕಾರಣವಿತ್ತು. ಕೃಷ್ಣನ ತಂಗಿ ಸುಭದ್ರೆಯೆಂಬವಳು ಮಹಾ ರೂಪವತಿಯೆಂದು ಅವನು ಕೇಳಿದ್ದುದರಿಂದ ಅವಳನ್ನು ನೋಡುವ ಕುತೂಹಲವೂ ಅರ್ಜುನನಿಗಿತ್ತು. ದ್ವಾರಕಿಯ ಜನರಿಗೆ ತಿಳಿಯದಂತೆ ನಗರ ಪ್ರವೇಶಮಾಡಿ ಅವಳನ್ನು ನೋಡಬಯಸಿ 'ಕೃತಕ ಯತಿ ವೇಷಧರ' ನಾಗಿ ಜಗದ್ಗುರುವಾದ ಗರುಡಧ್ವಜನನ್ನು ಏಕಾಗ್ರ ಸ್ಥಿತಮತಿಯಾಗಿ ಧ್ಯಾನಿಸಲು ಕೃಷ್ಣ ತಾನೊಬ್ಬನೇ ಪ್ರಭಾಸಕ್ಕೇ ಬಂದು ದರ್ಶನಕೊಟ್ಟನು. ಅರ್ಜುನನ ಮನೋದಯವನ್ನೆಲ್ಲ ಬಲ್ಲವನಾದ ಶ್ರೀಕೃಷ್ಣನು ಅವನನ್ನು ತನ್ನೊಡನೆ ದ್ವಾರಕಾ ಪಟ್ಟಣಕ್ಕೆ ಕರೆದೊಯ್ದು ಅಲ್ಲಿ ರೈವತಕ ಪರ್ವತದ ಮೇಲೆ ಬಿಡಾರಮಾಡಿ ಆ ನರ ನಾರಾಯಣರು 'ತಮ್ಮ ಪೂರ್ವಜನ್ಮ ಸಹವಾಸ' ಮಹಿಮೆಯಿಂದ ಆ ರಾತ್ರಿಯೆಲ್ಲ

ಮಧುರ ಸಂಭಾಷಣೆಯಲ್ಲಿ ಹೊತ್ತು ಕಳೆದು ಬೆಳಗಾದ ಮೇಲೆ ಕೃಷ್ಣನೊಬ್ಬನೇ ಊರೊಳಕ್ಕೆ ಹೋಗಿ ಆ ದಿನ ರೈವತಕ ಮಹೋತ್ಸವವನ್ನು ಮಾಡಲು ಏರ್ಪಡಿಸಿದನು. ಊರವರೆಲ್ಲ ಬೆಟ್ಟಕ್ಕೆ ಹೋಗಿ ನಾನಾ ಉತ್ಸವಗಳನ್ನು ಮಾಡುತ್ತಿರಲು ಕೃಷ್ಣನು ಅರ್ಜುನನ ಕ್ಷೇಮವಾರ್ತೆಯನ್ನು ವೇಗಚಾರರ ಮೂಲಕ ಇಂದ್ರಪ್ರಸ್ಥಕ್ಕೆ ಕಳುಹಿಸಿ ಅರ್ಜುನನಿಗೆ ಸುಭದ್ರೆಯನ್ನು ಕೊಡಿಸುವುದಾಗಿ ಅವನಿಗೆ ಏಕಾಂತದಲ್ಲಿ ಹೇಳಿದನು. ಈ ಮಧ್ಯೆ ಬಲರಾಮಾದಿಗಳು ಅರ್ಜುನನನ್ನು ಯತಿಯೆಂದೇ ಭಾವಿಸಿ ವಂದನಾದಿಗಳನ್ನಾಚರಿಸಿ ಚಾತುರ್ಮಾಸ್ಯ ದೀಕ್ಷೆಗೆ ತಮ್ಮ ಅರಮನೆಯಲ್ಲಿಯೇ ನಿಲ್ಲಬೇಕೆಂದು ಬೇಡಿ ಕರೆದೊಯ್ದು ಅವನ ಪರಿಚರ್ಯೆಗೆ ಸುಭದ್ರೆಯನ್ನೇ ನೇಮಿಸಿದರು. ಆಗ ಅರ್ಜುನ ಸುಭದ್ರೆಯರಲ್ಲಿ ಪರಸ್ಪರ ಪ್ರಣಯವೃದ್ಧಿಯಾಗಿ ಅರ್ಜುನನು ಅವಳನ್ನು ಗಾಂಧರ್ವ ವಿವಾಹ ಮಾಡಿಕೊಳ್ಳಲು ಆತುರಪಟ್ಟನು. ಆದರೆ ಸುಭದ್ರೆ ಲಜ್ಜೆಪಟ್ಟು ಕನ್ಯಾಂತಃಪುರವನ್ನು ಪ್ರವೇಶಿಸಿದಳು. ಇದನ್ನೆಲ್ಲ ದಿವ್ಯದೃಷ್ಟಿಯಿಂದ ತಿಳಿದ ಶ್ರೀಕೃಷ್ಣನು ಏಕಾಂತದಲ್ಲಿ ಒಂದು ದಿನ 'ದೇವಕೀ ವಸುದೇವ ಪ್ರದ್ಯುಮ್ನ ಸಾಂಬ ಸಂಕರ್ಷಣ ಸಾರಣ ಸಾತ್ಯಕಿ' ಗಳಿಗೆ ಅರ್ಜುನ ಸುಭದ್ರೆಯರ ಪ್ರಣಯ ವೃತ್ತಾಂತವನ್ನು ಹೇಳಿ ಅವರಿಗೆ ಮದುವೆ ಮಾಡಲು ನಿಶ್ಚಯಿಸಿ ಅದು ಬಲರಾಮನಿಗೆ ತಿಳಿಯದಂತೆ ನಡೆಯಬೇಕಾದ್ದರಿಂದ ಅವನನ್ನೂ ಜತೆಯಲ್ಲಿ ಕರೆದುಕೊಂಡು 'ಪಶುಪತಿ ಪೂಜಾ ಮಹೋತ್ಸವ ವ್ಯಾಜದಿಂದ ಸಮಸ್ತ ಯಾದವರೊಡನೆ ಸಮುದ್ರ ಮಧ್ಯದ ಒಂದು ದ್ವೀಪಕ್ಕೆ ಹೋದನಂತೆ! ಅಲ್ಲಿ ಎಲ್ಲರೂ ಭಗವದಾರಾಧನ ಕಾರ್ಯಮಗ್ನರಾಗಿರುವಾಗ ವಾಸುದೇವನು ತನ್ನ ತಂದೆ ತಾಯಿಗಳನ್ನು ರಹಸ್ಯವಾಗಿ ಕರೆತಂದು ಸುಭದ್ರಾರ್ಜುನರಿಗೆ ವಿಧಿವತ್ತಾಗಿ ಮದುವೆ ಮಾಡಿಸಿದನು. ಆ ಮದುವೆಗೆ ಬೃಹಸ್ಪತಿ ಸಮೇತನಾಗಿ ಅಮರೇಂದ್ರನೇ ಬಂದಿದ್ದನು! ಪ್ರಜಾಪತಿಯೇ ಹೋಮಕರ್ತ. ಅರುಂಧತಿ ಶಚಿ ಸತ್ಯಭಾಮೆ ರುಕ್ಮಿಣಿ ಮತ್ತು ಅಪ್ಸರ ಸಮೂಹವೂ ಸೇರಿ ಪುರಂಧ್ರೀ ಕಾರ್ಯ್ಯಗಳನ್ನು ನೆರವೇರಿಸಿದರು[1]. ಮದುವೆ ಶಾಸ್ತ್ರೀಯವಾಗಿ ನಡೆಯಿತು. ಅನಂತರ ಕೃಷ್ಣನು ತಕ್ಕ ರಥ ರಥ್ಯಾಶ್ವಗಳನ್ನೂ ಕೊಟ್ಟು ಅರ್ಜುನನನ್ನು ಸುಭದ್ರೆಯೊಡನೆ ಇಂದ್ರಪ್ರಸ್ಥಕ್ಕೆ ಕಳುಹಿಸಿಕೊಟ್ಟನು.

ನನ್ನಯಭಟ್ಟನ ಹೇಳಿಕೆಯಂತೆ ಬಲರಾಮನೊಬ್ಬನ ಹೊರತು ಉಳಿದವರಿಗೆಲ್ಲ ಸುಭದ್ರಾರ್ಜುನರ ವಿವಾಹ ಸಮ್ಮತವಾಗಿದ್ದುದೇ ಅಲ್ಲದೆ ಹಿರಿಯರಾದ ವಸುದೇವಾದಿಗಳಿಗೆಲ್ಲ ಕೃಷ್ಣನ ತಂತ್ರ ತಿಳಿದಿತ್ತೆಂದು ಅರ್ಥವಾಗುತ್ತದೆ.

ಪಂಪಭಾರತದಲ್ಲಿ ಅರ್ಜುನ ಯತಿವೇಷಧಾರಿಯಾಗಲಿಲ್ಲ. ಅವನು ಬನವಾಸಿಯಲ್ಲಿ ಸಂಚರಿಸಿ ದ್ವಾರವತಿಯನ್ನು ಸೇರುವ ವೇಳೆಗೆ ಕೃಷ್ಣನು ಕೆಲವು ನಿಮಿತ್ತಗಳಿಂದ ಅವನ ಬರವನ್ನು ಮುಂದಾಗಿ ತಿಳಿದು ಬಲದೇವ ಸಾತ್ಯಕಿ ಕೃತವರ್ಮಾದಿ ಬಾಂಧವಜನ

---

1 ನನ್ನಯ ಭಾರತ–ಆದಿಪರ್ವ 8–194

ಸಮೇತನಾಗಿ ಹೋಗಿ ಇದಿರುಗೊಂಡು ಪುರಪ್ರವೇಶ ಮಾಡಿಸಿದನು. ಆಗ ಸುಭದ್ರೆಗೂ ಅರ್ಜುನನಿಗೂ ಪರಸ್ಪರ ಅನುರಾಗವುಂಟಾಯಿ.ತು. ಅವರ ಪ್ರೇಮಾತಿಶಯವನ್ನು ಗಮನಿಸಿದ ಶ್ರೀಕೃಷ್ಣನು ಅವರನ್ನು ಒಂದುಗೂಡಿಸುವ ಸಂಕಲ್ಪವುಳ್ಳವನಾಗಿ ಸುಭದ್ರೆಯನ್ನು 'ಈ ಪೋಟ್ರೆ ಪೊಟ್ಟಾಗೆ ನೀನೊಡಗೊಂಡುಯ್ಪುದು' ಎಂದು ಅರ್ಜುನನಿಗೆ ಸಲಹೆ ನೀಡಿ ಅದಕ್ಕೆ ಬೇಕಾದ ಸಹಾಯ ಮಾಡಿದನು. ಇಲ್ಲಿ ದೇವಕೀ ವಸುದೇವರ ಪೂರ್ವಸಮ್ಮತಿಯ ಪ್ರಸ್ತಾಪವಾಗಲಿ ಅರ್ಜುನ ಯತಿವೇಷದಿಂದ ಬಂದು ಬಲರಾಮನ ಆದರಕ್ಕೆ ಪಾತ್ರನಾಗಿ ಕನ್ಯಾಂತಃಪುರದಲ್ಲಿ ಸೇರುವ ಪ್ರಸ್ತಾಪವಾಗಲಿ ಇಲ್ಲ. ಧರ್ಮರಾಯನ ಅನುಮತಿ ಪಡೆದ ಸುದ್ದಿಯೂ ಇಲ್ಲ!

ವ್ಯಾಸಭಾರತದ ಒಂದು ಪಾಠದಲ್ಲಿ[1] ಅರ್ಜುನನ ಯತಿವೇಷದ ಪ್ರಸ್ತಾಪ ವಿಲ್ಲ. ಪ್ರಭಾಸಕ್ಕೆ ಅರ್ಜುನ ಬಂದನೆಂಬುದನ್ನು ಕೇಳಿದ ಕೃಷ್ಣನು ಅಲ್ಲಿಗೆ ಹೋಗಿ ಅವನನ್ನು ಕರೆತಂದು ತನ್ನ ಅರಮನೆಯಲ್ಲಿ ಬಿಡಾರ ಮಾಡಿಸಿ ಔತಣ ಮಾಡಿ ಸರಸ ಸಲ್ಲಾಪಗಳಲ್ಲಿ ತೊಡಗಿ ಹಲವು ದಿನಗಳನ್ನೇ ಕಳೆದನಂತೆ! ಆಮೇಲೆ ರೈವತಕಪರ್ವತ ದಲ್ಲಿ ದೊಡ್ಡ ಉತ್ಸವ ನಡೆಯಿತು. ಅದಕ್ಕೆ ಕೃಷ್ಣಾರ್ಜುನರೂ ಹೋದರು. ಅಲ್ಲಿ ಸಖೀ ಮಧ್ಯದಲ್ಲಿದ್ದ ಸುಭದ್ರೆಯನ್ನು ನೋಡಿ ಅರ್ಜುನ ಸಮ್ಮೋಹಿತನಾದುದನ್ನು ಕಂಡು ಕೃಷ್ಣನು ಸಂತೋಷಪಟ್ಟು ತನ್ನ ತಂಗಿಯನ್ನು ಅವನಿಗೆ ಕೊಡಬಯಸಿ ಕ್ಷತ್ರಿಯರಿಗೆ ಪ್ರಶಸ್ತವಾದ ಸ್ವಯಂವರದ ಪರಿಣಾಮ ಅನಿಶ್ಚಿತವಾದುದರಿಂದ ಇಲ್ಲಿ ಕನ್ಯಾಹರಣವೇ ಸೂಕ್ತಮಾರ್ಗವೆಂದು ಅರ್ಜುನನಿಗೆ ಸೂಚಿಸಿ ಅದಕ್ಕೆ ಬೇಕಾದ ನೆರವು ನೀಡಿದನು. ಅಷ್ಟೇ ಅಲ್ಲದೆ ಶೀಘ್ರಚಾರಿಗಳ ಮೂಲಕ ಇಂದ್ರಪ್ರಸ್ಥದಲ್ಲಿದ್ದ ಧರ್ಮರಾಯನಿಗೆ ಹೇಳಿ ಕಳುಹಿಸಿ ಅವನ ಅನುಮತಿಯನ್ನು ಪಡೆದನಂತೆ![2] ಅರ್ಜುನ ಕೃಷ್ಣನ ಸಲಹೆಯಂತೆ ಸನ್ನದ್ಧನಾಗಿ ಬೇಟೆಗೆ ಹೋಗುವವನಂತೆ ಕವಚಧರಿಸಿ ಖಡ್ಗ ಬಿಲ್ಲು ಬಾಣಗಳನ್ನು ಹಿಡಿದು ರಥಾರೂಢನಾಗಿ ಹೊರಟು ದ್ವಾರಕಿಗೆ ಹೋಗುತ್ತಿದ್ದ ಸುಭದ್ರೆಯನ್ನು ಬಲವಂತ ವಾಗಿ ಎತ್ತಿ ತನ್ನ ರಥದಲ್ಲಿ ಕೂಡಿಸಿಕೊಂಡು ಇಂದ್ರಪ್ರಸ್ಥ ಪುರಕ್ಕೆ ಹೊರಟು ಹೋದನು. ಪಂಪ ಈ ಔತ್ತರೇಯ ಪಾಠವನ್ನು ಅವಲಂಬಿಸಿದಂತೆ ತೋರುತ್ತದೆ. ಅರಿಕೇಸರಿ ಕಳ್ಳನಂತೆ ವೇಷ ಮರೆಸಿಕೊಂಡು ದ್ವಾರಕಿಯನ್ನು ಪ್ರವೇಶಿಸಿದನೆಂದು ಹೇಳುವುದು ಪಂಪನಿಗೆ ಇಷ್ಟವೆನಿಸೀತೆ? ಅರ್ಜುನ ಸುಭದ್ರೆಯನ್ನು ಹರಣ ಮಾಡಿದ ವಾರ್ತೆ ಕೇಳಿ ಬಲರಾಮ ಸಿಟ್ಟುಗೊಂಡು ಕೂಗಾಡಿದ್ದು, ಕೃಷ್ಣ ಅವನಿಗೆ ಸಮಾಧಾನ ಹೇಳಿದ್ದು, ಆಮೇಲೆ ಯಾದವರೆಲ್ಲ ಇಂದ್ರಪ್ರಸ್ಥಕ್ಕೆ ಹೋಗಿ ಸುಭದ್ರಾರ್ಜುನರ ಮದುವೆ ಮಾಡಿದ್ದು, ಇವೆಲ್ಲ ಎಲ್ಲ ಭಾರತಗಳಲ್ಲಿಯೂ ಬರುವ ಕಥೆ.

---

1 ಗೋರಖಪುರದ ಗೀತಾ ಪ್ರೆಸ್ಸಿನವರ ಪ್ರಕಟಣೆ,

2 I 218–24.

ಪಂಪಕವಿ ಇದುವರೆಗಿನ ಭಾರತದ ಕಥೆಯನ್ನು ಅತ್ಯಂತ ಸಂಕ್ಷೇಪವಾಗಿ ಹೇಳಿ ತನ್ನ ಮಿತಭಾಷಿತ್ವವನ್ನು ಮೆರೆದು ಸುಭದ್ರಾಕಲ್ಯಾಣ ಪ್ರಸಂಗದಲ್ಲಿ ಮಾತ್ರ ಆ ನೀತಿಯನ್ನು ಗಾಳಿಗೆ ತೂರಿಬಿಟ್ಟಿದ್ದಾನೆ. ಸುಭದ್ರೆಯ ವಿರಹವರ್ಣನೆ ಮಾಡುವಲ್ಲಿ ಕವಿ ನೈಮರೆತಿದ್ದಾನೆ. ಪಂಪ ತನ್ನ ವಿಕ್ರಮಾರ್ಜುನವಿಜಯದ ನಾಲ್ಕನೆಯ ಆಶ್ವಾಸದ ಬಹು ಭಾಗವನ್ನು ಸುಭದ್ರಾರ್ಜುನರ ಪ್ರಣಯವರ್ಣನೆಗೆ ಮೀಸಲು ಮಾಡಿದ್ದಾನೆ! ಅರ್ಜುನನು ಸುಭದ್ರೆಯ ರೂಪ ಲಾವಣ್ಯಗಳನ್ನು ನೋಡಿ ಸಮ್ಮೋಹನಗೊಂಡು ಅನ್ಯ ವಿಷಯಾಸಕ್ತಿಯೇ ಇಲ್ಲದೆ ದಿಕ್ಕೆಟ್ಟವನಂತೆ ತೊಳಲಾಡಿದನಂತೆ!

ಒದವಿದ ಬೇಟವಪ್ಪೊಡೆನಗತ್ತಳಗಂ ಬಗೆವೇಟ್ಟೊಡೆನ್ನಮೋ
ಳದ ಕೆಳೆಯಕ್ಕಳಿಲ್ಲವಳುಮಪ್ಪೊಡೆ ಜವ್ವನ ಮತ್ತ ನಾಣ ಕಾ
ಪದು ಪಿರಿದೋತು ಮಾತಡಕಲೊಂದಿದ ದೂದವರಿಲ್ಲ ನೆಟ್ಟನ
ಪ್ಪುದಜನದಿಂತರಣ್ಯರುದಿತಂ ವಲವೆನ್ನೊಲವಿಂದುವಕ್ಕೆಯಾ

(4–79)

ಅರ್ಜುನನು ತನ್ನ ಒಲವು ಫಲಿಸುವ ದಾರಿಕಾಣದೆ ಚಿತ್ತಕ್ಷೋಭೆಗೊಂಡು ಒಂದು ಬೆಳದಿಂಗಳ ರಾತ್ರಿ ರಾಜಮಂದಿರದಿಂದ ಹೊರಗೆ ಹೊರಟು ದ್ವಾರಕಾಪಟ್ಟಣದಲ್ಲಿ ಸಂಚಾರ ಮಾಡಿದನೆಂದು ಕಲ್ಪಿಸಿಕೊಂಡು ಪಂಪನು ವಿಸ್ತಾರವಾದ ನಗರ ವರ್ಣನೆಗೆ ಅದರಲ್ಲೂ ಮುಖ್ಯವಾಗಿ 'ಕಾಮದೇವನ ಓಲಗ' ದಂತಿದ್ದ ಸೂಳೆಗೇರಿಯ ವರ್ಣನೆಗೆ ತೊಡಗಿದ್ದಾನೆ. ಬಹುಶಃ ಕಾವ್ಯದ ಒಂದು ಮುಖ್ಯ ಅಂಗವೆನಿಸಿಕೊಂಡ ಚಂದ್ರಿಕಾವಿಹಾರ ವರ್ಣನೆಗೆ ಇದೇ ಅನುಕೂಲವಾದ ಸಂದರ್ಭ ಎಂದು ಕವಿ ಭಾವಿಸಿದನಾದೀತು. ಇದು ಕೇವಲ ಅರ್ಜುನನ ಪ್ರಣಯ ಕಥೆಯಾಗಿರದೆ 'ಪ್ರಿಯಗಳ್ಳ'ನೆಂಬ ಬಿರುದು ಹೊಂದಿದ ಅರಿಕೇಸರಿಯ ಪ್ರಣಯ ಕಥೆಯೂ ಆಗಿಸ್ತುದರಿಂದ ಇದು ಇಷ್ಟು ದೀರ್ಘವಾಗಿರಬಹುದೆಂಬ ಊಹೆಯೂ ಇಲ್ಲದೆ ಹೋಗಿಲ್ಲ. ಅದೆಲ್ಲ ಹೇಗೇ ಇದ್ದರೂ ಪಂಪಕವಿ 'ಸಮಸ್ತ ಭಾರತ' ರಚನೆಗೆ ತೊಡಗಿ ಬೇರೆ ಅನೇಕ ಪ್ರಸಂಗಗಳನ್ನು ಸೂಚ್ಯವಾಗಿ ಹೇಳಿ ಮುಗಿಸಿ ಈ ಪ್ರಕರಣವನ್ನು ಮಾತ್ರ ಅತಿಯಾಗಿ ಬೆಳಸಿ ಕಥೆಗೆ ಯಾವ ವಿಧದಲ್ಲಿಯೂ ಅಗತ್ಯವಾಗದ ಸೂಳೆಗೇರಿಯ ವರ್ಣನೆಗೇ ಮೂವತ್ತು ಪದ್ಯಗಳನ್ನು ವಿನಿಯೋಗಿಸಿರುವುದು ಪಂಪನ ಔಚಿತ್ಯಪ್ರಜ್ಞೆಗೆ ಭೂಷಣವೆನಿಸಲಾರದು. ಇದು ಆಶ್ರಯದಾತನಾದ ಅರಿಕೇಸರಿ ಮಹಾರಾಜನ ಮನೋಲ್ಲಾಸಕ್ಕಾಗಿ ಮಾಡಿದ ವರ್ಣನೆಯೇ ಇರಬಹುದು!

ಸುಭದ್ರೆಯ ವಿವಾಹಾನಂತರ ಧರ್ಮರಾಯನು ಇಂದ್ರಪ್ರಸ್ಥಕ್ಕೆ ಬಂದಿದ್ದ ಬಲದೇವಾದಿ ಯಾದವರನ್ನೆಲ್ಲ ಯಥೋಚಿತವಾಗಿ ಸತ್ಕರಿಸಿ ದ್ವಾರಾವತಿಗೆ ಕಳುಹಿಸಿದನು.

## ಖಾಂಡವ ದಹನ

ಮಹಾಭಾರತದ ಆದಿಪರ್ವದ ಕೊನೆಯ ಘಟ್ಟ ಅರ್ಜುನನು ಇಂದ್ರನ ಇಷ್ಟಕ್ಕೆ ವಿರೋಧವಾಗಿ ಖಾಂಡವ ವನವನ್ನು ಅಗ್ನಿಗೆ ಆಹುತಿಯಾಗಿ ಕೊಟ್ಟ

ಇಂದ್ರನು ತನ್ನ ಮೇಲೆ ಕಾಳಗ ಹೂಡಿದಾಗ ಶ್ರೀಕೃಷ್ಣ ಸಹಾಯದಿಂದ ಕಾದಿ ಗೆದ್ದ ಕಥೆ. ಮಾನವ ಮಾತ್ರನಾದವನು ದೇವೇಂದ್ರನನ್ನು ಪ್ರತಿಭಟಿಸಿ ಅವನೊಡನೆ ಕಾದಿ ಗೆಲ್ಲುವುದು ಸಾಮಾನ್ಯ ವಿಷಯವೆ? ಇದು ಪಾರ್ಥಪರಾಕ್ರಮದ ಒಂದು ಶ್ರೇಷ್ಠ ನಿದರ್ಶನ. ಕವಿಪಂಪ ಇಂಥ ವಿಷಯವನ್ನು ಸಾಕಷ್ಟು ವಿಪುಲವಾಗಿ ವರ್ಣಿಸದಿರುವುದು ಸಾಧ್ಯವೆ? ವಿಕ್ರಮಾರ್ಜುನ ವಿಜಯದ ಪಂಚಮಾಶ್ವಾಸದ ಬಹುಭಾಗವನ್ನು ಈ ಕಥೆಯ ನಿರೂಪಣೆಗೆ ಬಳಸಿದ್ದಾನೆ. ಖಾಂಡವವನ ದಹನದಲ್ಲಿಯೇ ಅರ್ಜುನನಿಗೆ ದಾನವ ವಿಶ್ವಕರ್ಮನಾದ ಮಯನ ಸ್ನೇಹ ಒದಗಿದುದು. ಆ ಸ್ನೇಹದಿಂದಲೇ ಧರ್ಮ ರಾಯನಿಗೆ ಮಯನಿರ್ಮಿತವಾದ ಲೋಕೋತ್ತರ ಸೌಂದರ್ಯದಿಂದ ಕೂಡಿದ ಸಭಾ ಮಂಟಪ ದೊರೆತದ್ದು! ಭೀಮಾರ್ಜುನರಿಗೆ ಕೆಲವು ದಿವ್ಯಾಸ್ತ್ರಗಳು ಲಭಿಸಿದುದೂ ಆ ಪ್ರಸಂಗದಲ್ಲಿಯೇ. ಖಾಂಡವವನ ದಹನದಲ್ಲಿ ನೊಂದ ಅಶ್ವಸೇನನೆಂಬ ಸರ್ಪ ಅರ್ಜುನನ ಮೇಲೆ ಸೇಡು ತೀರಿಸಿಕೊಳ್ಳುವ ಛಲದಿಂದ 'ಅರ್ಧಾವಲಿಕ' ವೆಂಬ ಅಮೋಘಾಸ್ತ್ರವಾಗಿ ಕರ್ಣನ ಬತ್ತಳಿಕೆಯನ್ನು ಸೇರಿತು! ಹೀಗೆ ಭಾರತದ ಮುಂದಿನ ಕಥೆಗೆ ಖಾಂಡವದಹನ ಪ್ರಸಂಗ ಬಹಳ ಮುಖ್ಯವಾಗಿದ್ದು ಪಂಪ ನನ್ನಯರಿಬ್ಬರೂ ಇದನ್ನು ತಕ್ಕಮಟ್ಟಿಗೆ ವಿಸ್ತಾರವಾಗಿಯೇ ಚಿತ್ರಿಸಿದ್ದಾರೆ.

ಸುಭದ್ರೆಯ ವಿವಾಹಕ್ಕೆ ಬಂದಿದ್ದ ಯಾದವ ಪ್ರಮುಖರೆಲ್ಲ ದ್ವಾರವತಿಗೆ ಪ್ರಯಾಣಮಾಡಿದ ಮೇಲೆ ಶ್ರೀಕೃಷ್ಣನು ಕೆಲವು ದಿನ ಪಾಂಡವರೊಡನೆ ಉಳಿದು ಕೊಂಡು ಅರ್ಜುನನೊಡನೆ ಇಷ್ಟವಿನೋದಗಳನ್ನು ಅನುಭವಿಸುತ್ತ ಇರುತ್ತಿರಲು ಸುಭದ್ರೆ ಗರ್ಭವತಿಯಾಗಿ ಪುತ್ರನನ್ನು ಹೆತ್ತಳು. 'ಪುಟ್ಟಿದನಭಿಮನ್ಯುಕಲಿತನಂ ಪುಟ್ಟಿದವೋಲ್' ಎಂದು ಪಂಪ ಒಂದು ಮಾತಿನಲ್ಲಿ ಅಭಿಮನ್ಯುವಿನ ಹಿರಿತನ ವನ್ನು ಸೂಚಿಸಿದ್ದರೆ ನನ್ನಯನು ಅಭಿಮನ್ಯುವಿನ ಜನನ ವೃತ್ತಾಂತವನ್ನು ಎರಡು ವೃತ್ತಗಳಷ್ಟು ವಿಸ್ತಾರವಾಗಿ ಹೇಳಿ ಆ ಕುಮಾರನ ರಣಶೌರ್ಯವನ್ನು ಹೊಗಳಿದ್ದಾನೆ. ಈ ಸಂದರ್ಭದಲ್ಲಿಯೇ ನನ್ನಯಭಟ್ಟ ದ್ರೌಪದಿ ಪಂಚಪುತ್ರರನ್ನು ಪಡೆದ ಕಥೆಯನ್ನೂ ಹೇಳಿದ್ದಾನೆ. ಪುತ್ರೋತ್ಸವದ ಸಡಗರದಲ್ಲಿದ್ದಾಗಲೇ ವಸಂತಕಾಲ ಬಂದಿತೆಂದು ಹೇಳಿ ಪಂಪನು ಆ ಋತು ವರ್ಣನೆಗೆ ಆರು ಪದ್ಯಗಳನ್ನು ವಿನಿಯೋಗಿಸಿ ಒಂದು ದಿನ ಭೋಜನಶಾಲೆಯಲ್ಲಿ ಕುಳಿತಿದ್ದ ನರನಾರಾಯಣರಲ್ಲಿಗೆ ಒಬ್ಬ ಬೇಟೆಗಾರ ಬಂದು ಕಾಡುಮೇಡುಗಳಲ್ಲಿ ಮೃಗಗಳ ಕಾಟ ಹೆಚ್ಚಾಗಿರುವುದರಿಂದ ಬೇಟೆಗೆ ಅದು ಸಕಾಲ ವಾಗಿದೆಯೆಂದು ಬಿನ್ನವಿಸಿ ಬೇಟೆಯ ಉಪಯುಕ್ತತೆಯನ್ನು ಬಣ್ಣಿಸಿ ಹೊಗಳುತ್ತಾನೆ. 'ಬೇಂಟೆಯೆ ಬಿನದಂಗಳರಸಲ್ತೇ?' ಎಂದು ಪ್ರಶ್ನಿಸಿ ಬೇಟೆಯ ಆಕರ್ಷಣೆಗಳನ್ನೆಲ್ಲ ಹೇಳಿ ಆ ಬೇಟೆಗಾರ ಆಹ್ವಾನಿಸಿದಾಗ ಅರ್ಜುನ ಮೃಗಯಾವಿಹಾರಕ್ಕೆ ಮನಸ್ಸು ಮಾಡಿ ಶ್ರೀಕೃಷ್ಣನೊಡನೆ ಸಮಸ್ತ ಪರಿವಾರ ಸಮಾಯುಕ್ತನಾಗಿ ಕಾಡಿಗೆ ಹೊರಟ ನೆಂದು ಪಂಪ ಬಣ್ಣಿಸಿದ್ದಾನೆ. ನನ್ನಯನಲ್ಲಿ ಈ ಬೇಟೆಗಾರನ ಪ್ರಸ್ತಾಪವಿಲ್ಲ; ಮೃಗಯಾ ಪ್ರಸ್ತಾಪವೂ ಇಲ್ಲ. ನಿದಾಘದ ಬೇಗೆ ಸಹಿಸಲಾಗದೆ ಪಾರ್ಥನು

ಪುರುಷೋತ್ತಮನೊಡನೆ ಯಮುನಾತೀರ ವಿಹಾರಮಾಡಲು ಹೊರಟನೆಂದು ನನ್ನಯನ ಹೇಳಿಕೆ. ಅಂತು ಪಂಪ ನನ್ನಯರಿಬ್ಬರೂ ಶ್ರೀಕೃಷ್ಣಾರ್ಜುನರು ಯಮುನಾ ತೀರ ಪ್ರದೇಶ ಸೇರಿ ಅಲ್ಲಿ ವಿಹರಿಸುತ್ತಿದ್ದರೆಂದು ಹೇಳಿ ಅಲ್ಲಿಗೆ ವೇಷಧಾರಿಯಾದ ಅಗ್ನಿ ಬಂದು ಅನ್ನಭಿಕ್ಷೆ ಕೇಳಿದನೆಂದು ವರ್ಣಿಸಿದ್ದಾರೆ.

ಪಂಪಕವಿ ಈ ಸಂದರ್ಭವನ್ನು ಉಪಯೋಗಿಸಿಕೊಂಡು ಶ್ರೀಕೃಷ್ಣನ ಬಾಲ ಲೀಲೆಯ ವರ್ಣನೆ ನಡೆಸಿದ್ದಾನೆ. ಯಮುನಾ ಪ್ರವಾಹವನ್ನು ಕಾಣುತ್ತಲೇ ವಾಸುದೇವನಿಗೆ ತನ್ನ ಬಾಲ್ಯವೃತ್ತಾಂತವೆಲ್ಲ ನೆನಪಿಗೆ ಬಂದು ಕೆಲವು ಘಟನೆಗಳನ್ನು ಅವನು ಅರ್ಜುನನಿಗೆ ಹೇಳಿದನಂತೆ ! ಕಾಳಿಂಗಮರ್ದನದ ಕಥೆ ಇಲ್ಲಿ ಬಂದಿದೆ.

> ಕೊಂದೆನವುಂಕಿ ಸಂದ ಖರಧೇನುಕರಂ ಮುಳಿಸಿಂದಮಿಲ್ಲಿ ಕಾ
> ಳಿಂದಿಯ ಪಾವನಪ್ಪಳಿಸಿದೆಂ ಪಿಡಿದೀ ಸಿಲೆಯಲ್ಲಿ ಮತ್ತಮಾ
> ಟಂದರನುಗ್ರ ದೈತ್ಯರನುಳುರ್ಕೆಯಿನಿಕ್ಕಿದೆನಿಲ್ಲಿ ಮುನ್ನಮೆಂ
> ದಂದು ಗುಣಾರ್ಣವಂಗೆ ಮಧುಕೈಟಭಹಾರಿ ತೊಟಲ್ದು ತೋಱದಂ
>
> (5-68)

ಇಲ್ಲಿ ಪಂಪ ಸಿಂಹಾವಲೋಕನ ಕ್ರಮದಿಂದ ಭಾಗವತದಲ್ಲಿನ ಕೃಷ್ಣನ ಬಾಲ್ಯದ ಕಥೆಯನ್ನು ಕೊಂಚಮಟ್ಟಿಗೆ ರೂಪಿಸಿದ್ದಾನೆ !

ಕೃಷ್ಣಾರ್ಜುನರು ಯಮುನಾತೀರಸಂಚಾರಿಗಳಾಗಿ ಸುಖಸಂಕಥಾಸಲ್ಲಾಪನುಗ್ನರಾಗಿದ್ದ ಮುಹೂರ್ತ ಸಾಧಿಸಿ ಅಗ್ನಿ ಅವರಲ್ಲಿಗೆ ಬ್ರಾಹ್ಮಣವೇಷ ಧರಿಸಿ ಬಂದನಂತೆ. ಆ ಬ್ರಾಹ್ಮಣನ 'ಮಸೃಣಕಪಿಲ ಕೇಶಶ್ಮಶ್ರುಗಳನ್ನೂ' ವಿಶೇಷವಾದ ತೇಜಸ್ಸನ್ನೂ ನನ್ನಯಭಟ್ಟ ಹೊಗಳಿದರೆ ಪಂಪನು ಆ ಬ್ರಾಹ್ಮಣನ ಸ್ವರೂಪವನ್ನು ಒಂದು ಪದ್ಯದಲ್ಲಿ ಸುಂದರವಾಗಿ ಚಿತ್ರಿಸಿದ್ದಾನೆ !

> ಉರಿವುರಿಯನೆ ತಲೆನವಿರನು
> ಕರಿಸಿರೆ ಸುತಪ್ತ ಕನಕ ವರ್ಣಮುಮುರಿಯೊಂ
> ದುರುಳಿವೊಲಿರೆ ಜಠರಾನಳ
> ನುರಿವಿನಮಂತೊರ್ವನುರಿಯ ಬಣ್ಣದ ಪಾರ್ವಂ
>
> (5-69)

ಇಂಥ ಅಪೂರ್ವ ತೇಜೋಮೂರ್ತಿಯಾದ ವಿಪ್ರಶ್ರೇಷ್ಠನನ್ನು ಕಂಡ ಪಾರ್ಥನು ತನ್ನ ಮನಸ್ಸಿನಲ್ಲಿಯೇ ಮೆಚ್ಚಿಕೊಂಡು ಅವನು ಬೇಡಿದುದನ್ನು ಕೊಟ್ಟು ಪುಣ್ಯ ಪಡೆಯಬೇಕೆಂದು ನಿರ್ಧರಿಸಿಕೊಂಡನಂತೆ !

> ತಪನ ಸಮನೀತನೀ ಬ
> ರ್ಪ ಪಾರ್ವನೇನಟಿಪಿ ತನಗದಂ ಬೇಡಿದೊಡಿ
> ನ್ನಪಗತ ದುರಿತರ್ ಸಂಪೂ
> ರ್ಣ ಪುಣ್ಯರಾನಲ್ಲದಿಲ್ಲ ಪೆಟರ್ ಪೆಱರೊಳರೇ
>
> (5-70)

ಅರ್ಜುನ ಹೀಗೆ ಯೋಚಿಸುತ್ತಿರುವಾಗಲೆ ಆ ಬ್ರಾಹ್ಮಣ ಅವನನ್ನು ಸಮೀಪಿಸಿ ನಾಲ್ಕು ವೇದ ಋಕ್ಕುಗಳನ್ನು ಹೇಳಿ ಶೇಷಾಕ್ಷತೆ ನೀಡಿದನು. ಇನ್ನು ಆ ಅನೂನ ದಾನಿಯು ಸುಮ್ಮನಿರುವುದುಂಟೆ ? 'ನಿಮಗೆ ಬಾಜ್ಸಿತಿಯಪ್ಪುದಂ ಬೇಡಿಕೊಳ್ಳಿಂ' ಎಂದು ಪಾರ್ಥ ಹೇಳಲು ಆ ಉರಿಯ ಬಣ್ಣದ ವಿಪ್ರ ಧನಕನಕಾದಿಗಳೇನನ್ನೂ ಕೇಳದೆ ತನಗೆ ತೃಪ್ತಿಯಾಗುವಂಥ ಊಟ ಬೇಕೆಂದು ಬೇಡಿದನು ! 'ಇದು ಯಾವ ದೊಡ್ಡ ಸಂಗತಿ ?' ಎಂದು ಭಾವಿಸಿದ ಪಾರ್ಥ 'ಕೊಟ್ಟೆ' ಎಂದು ನುಡಿದು 'ಆವುದು ನೀನು ಬೇಡುವ ಉಣಿಸು?' ಎಂದು ಪ್ರಶ್ನಿಸಿದನು. ಆದರೆ ಆ ಬ್ರಾಹ್ಮಣ ಉತ್ತರ ಹೇಳುವಷ್ಟ ರಲ್ಲಿಯೇ ಕೃಷ್ಣ ಮಧ್ಯೆ ಪ್ರವೇಶಿಸಿ 'ಈತನಜಮುಖವ್ಯಾಪ್ತಂ, ಶ್ವೇತ ಕೃಷ್ಣಕಾರಕ ನೀತನ ಮಾತು ಮಾತಲ್ಲ' ಎಂದು ಗರ್ಜಿಸಿದನು. ಆದರೆ ವಿಕ್ರಮಾರ್ಜುನ ಮಾತಿಗೆ ತಪ್ಪುವುದುಂಟೆ ? ಕೊಟ್ಟ ಮಾತಿಗೆ ತಪ್ಪುವವನು 'ಅಜಾಂಡ ಮೆಂಬುದೊಂದತ್ತಿಯ ಪಣ್ಣೊಳಿರ್ಪ ಪುಟು'ವೇ ಹೊರತು ಮನುಷ್ಯನೆನಿಸುವನೆ ? ವೇಷಧಾರಿ ಅಗ್ನಿ ಖಾಂಡವವನವೇ ಬೇಕೆಂದು ಬೇಡಿದ ; ಅರ್ಜುನ ಕೊಟ್ಟ !

ಅರ್ಜುನನ ಔದಾರ್ಯ ಮತ್ತು ಸಾಹಸಗಳನ್ನು ಮೆಚ್ಚಿಕೊಂಡು ಅಗ್ನಿ ದೇವನು ಬೇಗನೆ ಹೋಗಿ ಕ್ಷೀರಸಾಗರದಲ್ಲಿ ಬಚ್ಚಿಟ್ಟಿದ್ದ ಶ್ವೇತಾಶ್ವಗಳನ್ನು ಹೂಡಿದ ದಿವ್ಯರಥವನ್ನೂ ಗಾಂಡೀವ ಧನುಸ್ಸನ್ನೂ ದಿವ್ಯಶರಗಳಿಂದ ತುಂಬಿದ ಅಕ್ಷಯತೂಣೀರ ವನ್ನೂ ತೆಗೆದುಕೊಂಡು ಬಂದು ಪಾರ್ಥನಿಗೆ ಕೊಟ್ಟು ಅವನನ್ನು ಹರಸಿ ಯಮುನಾ ತೀರದಲ್ಲಿ ನೂರು ಯೋಜನದ ಉದ್ದಕ್ಕೂ ಹಬ್ಬಿದ್ದ ಖಾಂಡವ ವನವನ್ನು ಸುಡಲು ಮೊದಲು ಮಾಡಿದನು. ಅದು ಇಂದ್ರರಕ್ಷಿತವಾದ ವನ. ಅದನ್ನು ಸುಡಲು ಇಂದ್ರ ಅಡಿಯಾಳಾದ ಅಗ್ನಿಗೆ ಧೈರ್ಯವಿರಲಿಲ್ಲ. ಅರ್ಜುನನ ಸಹಾಯದಿಂದ ಈಗ ಅವನು ಖಾಂಡವವನ್ನು ಪ್ರವೇಶಿಸಿದನು.

ನನ್ನಯಭಟ್ಟ ಈ ಪ್ರಸಂಗವನ್ನು ಚಿತ್ರಿಸುತ್ತ ಅರ್ಜುನನು ತನಗೂ ಕೃಷ್ಣ ನಿಗೂ ರಥ ರಥ್ಯಗಳೂ ಶಸ್ತ್ರಗಳೂ ಬೇಕೆಂದು ಅಗ್ನಿಯನ್ನು ಕೇಳಿದನೆಂದು ಹೇಳಿ ದ್ದಾನೆ. ಪಂಪ ಈ ಪ್ರಾರ್ಥನೆಯನ್ನು ಪ್ರಸ್ತಾಪಿಸಿಲ್ಲ. ಅರಿಕೇಸರಿ ಅನೂನದಾನಿ ! ಅವನಿಗೆ ಪ್ರತಿಗ್ರಹಾಕಾಂಕ್ಷೆ ಎಲ್ಲಿಂದ ಬರಬೇಕು ? ಪಂಪನ ಅಗ್ನಿ ಪಾರ್ಥನಿಂದ ಕೇಳಿಸಿ ಕೊಳ್ಳದೆಯೇ ರಥ ಮುಂತಾದುವನ್ನು ತಂದುಕೊಟ್ಟಿದ್ದಾನೆ. ನನ್ನಯನ ಪ್ರಕಾರ ಅಗ್ನಿ ಈ ಸನ್ನಿವೇಶದಲ್ಲಿ ಅರ್ಜುನನಿಗೆ ಮಾತ್ರವಲ್ಲದೆ ಶ್ರೀಕೃಷ್ಣನಿಗೂ ಆಯುಧಗಳನ್ನು ಕೊಟ್ಟನಂತೆ. ಶ್ರೀಕೃಷ್ಣನ ಚಕ್ರಾಯುಧ ಈ ಸಂದರ್ಭದಲ್ಲಿ ಅಗ್ನಿ ಕೊಟ್ಟದ್ದು– ವರುಣನಿಂದ ಕೊಡಿಸಿದ್ದು.[1] ಕೃಷ್ಣಾರ್ಜುನರಿಬ್ಬರನ್ನೂ ಹೀಗೆ ಶಸ್ತ್ರಸನ್ನದ್ಧರನ್ನಾಗಿಸಿ ಅಗ್ನಿ ಅವರ ಅನುಮತಿ ಹೊಂದಿ ಖಾಂಡವವನವನ್ನು ಭಕ್ಷಿಸತೊಡಗಿದನು.

---

[1] ಅಗ್ನಿದೇವುಂಡುನು ನಪ್ಪುಡ ವರುಣಂ ದಲಂಚಿ ವಾನಿಂ ದನಕು ಸನ್ನಿಹಿತುಂ ಜೇಸಿಕೊನಿ ತೊಲ್ಲಿ ನೀಕು ಸೋಮುಂ ಡಿಚ್ಚಿನ ಬ್ರಹ್ಮನಿರ್ಮಿತ ಕಾರ್ಮುಕಂಬುನಕ್ಷಯ ಬಾಣತೂಣೀರಯುಗಳಂಬುನು ಗಂಧ ರ್ವಜ ಹಯಂಬುಲಂ ಬೂನಿನ ರಥಂಬು ನಿಯ್ಯ್ಕತಿರಥುಂಡಯಿನ ಯರ್ಜುನನುಕಿಮ್ಮು ಮಱಿ ಚಕ್ರಂಬುನು ಗದಯುನು ವಾಸುದೇವ ನಿಕಿಮ್ಮನಿ ಪಂಚಿನ I—VIII—252

ಈ ಘಟ್ಟದಲ್ಲಿ ನನ್ನಯಭಟ್ಟ ಜನಮೇಜಯನ ಕೈಲಿ ಒಂದು ಪ್ರಶ್ನೆ ಕೇಳಿಸಿದ್ದಾನೆ. ಅಗ್ನಿಗೆ ಖಾಂಡವವನದ ಮೇಲೆ ಇಷ್ಟು ಆಸೆ ಏಕೆ ಹುಟ್ಟಿತು? ಈ ಪ್ರಶ್ನೆಗೆ ಉತ್ತರ ಹೇಳಹೊರಟ ವೈಶಂಪಾಯನಮುನಿ ಶ್ವೇತಕಿ ಮಹಾರಾಜನು ದುರ್ವಾಸಮುನಿಯ ಯಾಜಕತ್ವದಲ್ಲಿ ಮಾಡಿದ ಹನ್ನೆರಡು ವರ್ಷದ ಯಜ್ಞದಲ್ಲಿ ನಿರಂತರ ಘೃತ ವಸುಧಾರೆಯನ್ನು ಕುಡಿದುದರಿಂದ ಅಗ್ನಿಗೆ ಅಜೀರ್ಣವಾದ ಕಥೆಯನ್ನೂ ಆ ಅಜೀರ್ಣಪರಿಹಾರಕ್ಕೆ ಖಾಂಡವಭಕ್ಷಣವೇ ಸರಿಯಾದ ಮದ್ದೆಂದು ಚತುರ್ಮುಖ ಬ್ರಹ್ಮ ಹೇಳಿದ ವೃತ್ತಾಂತವನ್ನೂ ಆ ಮದ್ದು ಮಾಡಿಕೊಳ್ಳಲು ಏಳು ಸಲ ಪ್ರಯತ್ನಿಸಿ ಆ ವನರಕ್ಷಕರ ದೆಸೆಯಿಂದ ಪರಾಜಿತನಾಗಿ ಹಿಂತಿರುಗಿದ ಸುದ್ದಿಯನ್ನೂ ಆಗ ಮತ್ತೆ ಅವನು ಬ್ರಹ್ಮನಲ್ಲಿಗೆ ಹೋಗಿ ತನ್ನ ದುಃಖ ಹೇಳಿಕೊಳ್ಳಲು ಅವನು ಶ್ರೀಕೃಷ್ಣಾರ್ಜುನರು ಯಮುನಾ ತೀರದಲ್ಲಿರುವಾಗ ಹೋಗಿ ಕೇಳಿದರೆ ಅವನ ಕೆಲಸ ಈಡೇರುವುದೆಂದು ಹೇಳಿದುದನ್ನೂ ನಿರೂಪಿಸುತ್ತಾನೆ. ಪಂಪ ಸಹಜವಾಗಿಯೇ ಯಜ್ಞದ ಕಥೆಯನ್ನು ಕೈಬಿಟ್ಟಿದ್ದಾನೆ. ಈ ಪೂರ್ವಕಥೆಯ ಅಗತ್ಯ ಕಾಣಲಿಲ್ಲ ಪಂಪನಿಗೆ. ಆದ್ದರಿಂದಲೇ ಅವನು ನೇರವಾಗಿ ವೇಷಧಾರಿಯಾದ ಅಗ್ನಿಯನ್ನು ಪ್ರವೇಶ ಮಾಡಿಸಿದ್ದಾನೆ.

ಪಾರ್ಥನ ಅನುಮತಿಯಂತೆ ಅಗ್ನಿ ಖಾಂಡವವನ್ನು ಪ್ರವೇಶಿಸಿ ಸುಡತೊಡಗಲು ಅದರಲ್ಲಿ ನಾನಾವೃಕ್ಷಗಳು ಬೆಂದು ಬೀಳತೊಡಗಿದುವು. ಅವುಗಳಲ್ಲಿನ ಹಕ್ಕಿಗಳು ಗಗನಕ್ಕೆ ಹಾರಿದರೂ ಮರಗಳಿಗೆ ಹತ್ತಿದ ಬೆಂಕಿಯ ಜ್ವಾಲೆಗೆ ಸಿಕ್ಕಿ ಅವು ಮೇಲೆ ಹಾರಲಾರದೆ ಮತ್ತೆ ಬೆಂಕಿಯೊಳಕ್ಕೇ ಬಿದ್ದವು! ಆ ವನದೊಳಗಿನ ಅನೇಕ ಜಲಾಶಯಗಳ ನೀರು ಶಾಖದಿಂದ ಕುದಿಯಲು ಅವುಗಳೊಳಗಿನ ಜೀವಜಂತುಗಳು ಸತ್ತುಹೋದುವು! ವನಪಾಲಕರು ಬೆಂಕಿಯನ್ನು ಆರಿಸಲು ಯತ್ನಿಸುತ್ತಿರುವಾಗ ಪಾರ್ಥನ ನಿಶಿತಾಸ್ತ್ರಗಳಿಗೆ ಸಿಕ್ಕಿ ಹತರಾದರು. ಅವರಲ್ಲಿ ಸಾಯದೆ ಬದುಕಿ ಇಂದ್ರನಲ್ಲಿಗೆ ಓಡಿಹೋದ ಒಬ್ಬ ವನಚರನನ್ನು ಪಂಪ 'ಬಲೆಪಱಿದ ಕೋಕ' ನಿಗೆ ಹೋಲಿಸಿದ್ದಾನೆ.

ತನ್ನ ದೂತನು ಕೊಟ್ಟ ದೂರನ್ನು ಕೇಳಿ ತನ್ನ ಪ್ರೀತಿಯ ವನವನ್ನು ಸುಟ್ಟವರು ಪಾರ್ಥ ಪುರುಷೋತ್ತಮರೆಂಬುವನ್ನು ತಿಳಿದು ಇಂದ್ರನು ತನ್ನ ಸಮಸ್ತ ಮೇಘ ಸಮುದಾಯವನ್ನೂ ಖಾಂಡವಕ್ಕೆ ಕಳುಹಿಸಿಕೊಟ್ಟನು. ಆದರೆ ಅರ್ಜುನ ತನ್ನ ದಿವ್ಯಾಸ್ತ್ರಗಳಿಂದ ನೂರು ಯೋಜನಗಳಷ್ಟು ವಿಸ್ತಾರವಾದ ಆ 'ಖಾಂಡವ ವನಮೆಲ್ಲಮಂ ಕಟ್ಟಿ ಮೆಡಱಿ ಮಶಕ ಮಾತ್ರಮುಪ್ಪೊಡಂ ಮಿಸುಕಲ್ ಛಿದ್ರಮಿಲ್ಲದಂತಾಗೆ ಶರಪಂಜರದೊಳ್ ಮುಚ್ಚಿಮುಸುಕಲು' ಆ ಮೇಘಗಳೆಲ್ಲ ಹಾರಿಹೋದವು. 'ಅಗ್ನಿದೇವನಾವಗೆಯ ಕಿರ್ಚಿನಂತೊಳಗೊಳಗಳುರ್ದು' ಖಾಂಡವವನ್ನು ನಿಶ್ಶೇಷವಾಗಿ ಸುಟ್ಟು ಬೂದಿಮಾಡಿದನು. ಕುಂಬಾರನ ಆವುಗೆಯಲ್ಲಿನ ಬೆಂಕಿ ಹೇಗೆ ಏನೊಂದನ್ನೂ ಬಿಡದೆ ಸುಡುತ್ತದೆಯೋ ಹಾಗೆಯೇ ಇಲ್ಲಿ ಖಾಂಡವವನ್ನು ಹೊತ್ತಿ ಉರಿದ ಬೆಂಕಿ ಆ ವನದಲ್ಲಿನ ಯಾವ ಗಿಡ ಬಳ್ಳಿಗಳನ್ನೂ ಪ್ರಾಣಿಗಳನ್ನೂ ಬಿಡದೆ ಸುಟ್ಟುಹಾಕಿತು.

ಮೇಲೆ ಅರ್ಜುನ ತನ್ನ ಬಾಣಗಳಿಂದ ಹೆಣೆದ ಹಂದರವಿದ್ದುದರಿಂದ ಬೆಂಕಿ ಹೊರಗೆ ಕಾಣಲು ಅವಕಾಶವಿರಲಿಲ್ಲ.

ಎತ್ತೆತ್ತಲೂ ಬೆಂಕಿ ಆವರಿಸಿಕೊಂಡು ಉರಿಯುತ್ತಿರಲು ಆ ವನದಲ್ಲಿದ್ದ ಮಯನೆಂಬ ದನುಜಶಿಲ್ಪಿಯು ಹೊರಗೆ ಬರಲು ದಾರಿ ತಿಳಿಯದೆ ಸಂಕಟಪಟ್ಟು ಅರಿಕೇಸರಿಗೆ ಶರಣುಹೊಕ್ಕನಂತೆ! ಕೂಡಲೆ ಅವನ ಪಾಲಿಗೆ ಬೆಂಕಿ ಶೀತಲವಾಯಿತು. ಅವನು ಸುಖವಾಗಿ ಹೊರಗೆ ಬಂದು ಜೀವವುಳಿಸಿಕೊಂಡನು. ತಕ್ಷಕನ ಮಗನಾದ ಅಶ್ವಸೇನನು ತನ್ನ ತಾಯಿಯನ್ನು ಕರೆದುಕೊಂಡು ಹೊರ ಬರಲು ಪ್ರಯತ್ನ ಮಾಡುತ್ತಿದ್ದಾಗ ಅರ್ಜುನನ ಬಾಣದಿಂದ ಅವನ ಬಾಲ ಕತ್ತರಿಸಿ ಬಿತ್ತು. ಅವನ ಬಾಲವನ್ನು ಹಿಡಿದಿದ್ದ ಅವನ ತಾಯಿ ಸರ್ಪವೂ ಬೆಂಕಿಯಲ್ಲಿ ಬಿತ್ತು. ಅದನ್ನು ನೋಡಿ ಅಶ್ವಸೇನ ಸಂಕಟಪಟ್ಟು ಅರ್ಜುನನ ಮೇಲೆ ದ್ವೇಷತಾಳಿದನು. ಆ ಸಮಯದಲ್ಲಿ ಇಂದ್ರನು ಅರ್ಜುನನನ್ನು ಮೋಹಿನಿಯೆಂಬ ಮಾಯೆಗೆ ಗುರಿಮಾಡಿ ತಕ್ಷಕಪುತ್ರನನ್ನು ಬದುಕಿಸಿದನೆಂದು ನನ್ನಯ ಹೇಳಿದ್ದಾನೆ. ಪಂಪನು ಈ ಸುದ್ದಿ ಹೇಳಿಲ್ಲ. ಅಶ್ವಸೇನನು ಅರ್ಧಾವಲಿಕವೆಂಬ ಹೆಸರಿನ ಅಸ್ತ್ರವಾಗಿ ಅರ್ಜುನನನ್ನು ಕೊಲ್ಲುವ ಸಂಕಲ್ಪದಿಂದ ಕರ್ಣನ ಬತ್ತಳಿಕೆಯನ್ನು ಸೇರಿಕೊಂಡ ಸಂಗತಿಯನ್ನು ಪಂಪ ನನ್ನಯರಿಬ್ಬರೂ ಏಕರೀತಿಯಲ್ಲಿ ಹೇಳಿದ್ದಾರೆ.

ಮಂದಪಾಲೋಪಾಖ್ಯಾನವು ಮೂಲದಲ್ಲಿ ಐದು ಅಧ್ಯಾಯಗಳಷ್ಟು ದೀರ್ಘವಾಗಿ ಬೆಳೆದಿದೆ. ಮಂದಪಾಲನೆಂಬ ಮುನಿ ಉಗ್ರ ತಪಸ್ಸುಮಾಡಿದರೂ ಸಂತಾನವಿಲ್ಲದವನೆಂಬ ನಿಮಿತ್ತದಿಂದ ಊರ್ಧ್ವಲೋಕ ಪ್ರವೇಶಕ್ಕೆ ಅರ್ಹನಲ್ಲವೆಂದು ದೇವತೆಗಳು ಹೇಳಲು ಅವನು ಶೀಘ್ರವಾಗಿ ಸಂತಾನ ಪಡೆಯುವ ಪಕ್ಷಿಜಾತಿಯೇ ಉತ್ತಮವೆಂದು ಯೋಚಿಸಿ ಶಾರ್ಙ್ಗಪಕ್ಷಿಯಾಗಿ ಜರಿತೆಯೆಂಬ ಹೆಣ್ಣು ಹಕ್ಕಿಯಲ್ಲಿ ನಾಲ್ಕು ಮಕ್ಕಳನ್ನು ಪಡೆದು ಅವುಗಳನ್ನು ಖಾಂಡವವನದಲ್ಲಿರಿಸಿ ಹೊರಗೆ ಹೋಗಿದ್ದಾಗ ಬೆಂಕಿ ಹಬ್ಬಲು ಮಂದಪಾಲನು ಅಗ್ನಿದೇವನನ್ನು ಸ್ತುತಿಸಿ ತನ್ನ ಮಕ್ಕಳು ಉಳಿಯಬೇಕೆಂಬ ವರವನ್ನು ಪಡೆದನು. ಅದರಂತೆ ನಾಲ್ಕು ಹಕ್ಕಿಗಳು ಜೀವದಿಂದ ಉಳಿದುಕೊಂಡುವಂತೆ. ನನ್ನಯಭಟ್ಟ ಸುಮಾರು ಮೂವತ್ತು ಪದ್ಯಗಳಲ್ಲಿ ಈ ಕಥೆಯನ್ನು ಹೇಳಿದ್ದಾನೆ. ಆ ಮುನಿ ತನ್ನ ಮಕ್ಕಳಿಗೂ ಬ್ರಹ್ಮವಿದ್ಯೆಯನ್ನು ಕಲಿಸಿದ್ದನಂತೆ! ಆ ನಾಲ್ಕು ಹಕ್ಕಿಗಳಿದ್ದ ಮರವನ್ನೇ ಅಗ್ನಿ ಮುಟ್ಟಲಿಲ್ಲ.

ಪಂಪಕವಿ ಮಂದಪಾಲೋಪಾಖ್ಯಾನವನ್ನು 'ಮಂದಪಾಲನೆಂಬ ಮುನಿಗವೊಂದು ಲಾವಗೆಗಂ ಪುಟ್ಟಿದ ನಾಲ್ಕು ಲಾವಗೆಗಳಗ್ನಿ ಸೂಕ್ತಂಗಳನೋದುತ್ತುಮಧಿರದಿದಿರಂಬರೆ ಮೆಚ್ಚಿಬರವನಗ್ನಿದೇವಂ ಬೇಡಿಕೊಳ್ಳಿಮೆಂದಡೆಮ್ಮನ್ನವಯಕ್ಕೆನೀಂ ತಣ್ಣೆದೆಯಾಗೆಂದು ಬೇಡುವುದುಂ ತದಸ್ತುವೆಂದನ್' ಎಂಬ ಒಂದು ಮಾತಿನಲ್ಲಿ ಹೇಳಿದ್ದಾನೆ. ಇಲ್ಲಿ ಅಗ್ನಿಯನ್ನು ಸ್ತೋತ್ರಮಾಡಿ ಮೆಚ್ಚಿಸಿದ್ದು ಲಾವಗೆ ಹಕ್ಕಿಗಳೇ ಹೊರತು ಮಂದಪಾಲನಲ್ಲ!

ಮಯ, ಅಶ್ವಸೇನ, ಮಂದಪಾಲಸುತರಾದ ಆ ನಾಲ್ಕು ಲಾವಗೆಗಳು—ಒಟ್ಟು ಆರ್ವರು ಬೆಂಕಿಯಿಂದ ತಪ್ಪಿಸಿಕೊಂಡು ಜೀವದಿಂದ ಉಳಿದರು. ಆ ವಿಸ್ತಾರವಾದ ಖಾಂಡವವನದಲ್ಲಿ ಗಿಡಬಳ್ಳಿಗಳಾಗಲಿ ಪಶು ಪಕ್ಷಿಗಳಾಗಲಿ ಬೇರೆ ಯಾವುದೂ ಉಳಿಯ ಲಿಲ್ಲ. ಅಗ್ನಿ ಆ ವನವನ್ನು ತನ್ನ ಇಷ್ಟಾನುಸಾರವಾಗಿ ಭಕ್ಷಿಸಿ ತೃಪ್ತನಾದನು. ತಕ್ಷಕನು ಮಾತ್ರ ಅಗ್ನಿಪ್ರವೇಶವಾಗುವ ಮೊದಲೇ ಖಾಂಡವವನದಿಂದ ಹೊರಟು ಕುರುಕ್ಷೇತ್ರ ವನ್ನು ಸೇರಿಕೊಂಡಿದ್ದುದರಿಂದ ಅವನಿಗೆ ಏನೂ ಹಾನಿಯಾಗಲಿಲ್ಲ !

ಇಂದ್ರನು ಪಾರ್ಥನ ಮೇಲೆ ಕುಪಿತನಾಗಿ ಯುದ್ಧ ಮಾಡತೊಡಗಿದಾಗ ಕೃಷ್ಣಾ ರ್ಜುನರ ಮಹಿಮಾತಿಶಯವನ್ನು ಕೊಂಡಾಡುವ ಒಂದು ಅಶರೀರವಾಣಿ ಕೇಳಿಸಿತೆಂದೂ, ಅದರಿಂದ ಇಂದ್ರ ಅರ್ಜುನನ ಮೇಲೆ ಕೋಪ ಬಿಟ್ಟು ಪ್ರಸನ್ನನಾಗಿ ಅವನಿಗೆ ದಿವ್ಯಾಸ್ತ್ರ ಗಳನ್ನು ಕೊಟ್ಟನೆಂದೂ ನನ್ನಯಭಟ್ಟ ಹೇಳಿದ್ದಾನೆ. ಪಂಪನು ಇದಕ್ಕೆ ಅಶರೀರ ವಾಣಿಯನ್ನು ಬಳಸಿಕೊಳ್ಳದೆ ಸಾಕ್ಷಾತ್ ಚತುರ್ಮುಖ ಬ್ರಹ್ಮನನ್ನೇ ಹಿಡಿದು ತಂದಿ ದ್ದಾನೆ! ಬ್ರಹ್ಮ ಇಂದ್ರನಿಗೆ ವಿವೇಕ ಹೇಳಿ 'ಗುಣಾರ್ಣವಂಗೆ ಕುಡು ಗೆಲ್ಲಮನಿಂತಿದೆ ಕಜ್ಜದುಜ್ಜುಗಂ' ಎಂದು ಕರ್ತವ್ಯೋಪದೇಶ ಮಾಡಿದನು.[1] ಇಂದ್ರ, ಬ್ರಹ್ಮ ಮತ್ತು ಮಹೇಶ್ವರ—ಈ ಮೂವರು ದೇವರುಗಳೂ ಶ್ರೀ ಕೃಷ್ಣಾರ್ಜುನರನ್ನು ಹರಸಿ ನಿಜ ನಿವಾಸಗಳಿಗೆ ಹೊರಟುಹೋದರು [2].

ಇಲ್ಲಿಗೆ ಆದಿಪರ್ವದ ಕಥೆ ಮುಗಿಯಿತು. ಕೌರವ ಪಾಂಡವರ ಜನನವೃತ್ತಾಂತ, ಅವರ ಬಾಲ್ಯ, ವಿದ್ಯಾರ್ಜನೆ, ಅವರ ನಡುವೆ ಮೊದಲಿನಿಂದಲೇ ಬೆಳೆದುಬಂದ ದಾಯಾದವೈರ, ಅದರ ಫಲವಾಗಿ ಪಾಂಡವರಿಗೆ ಸಂಪ್ರಾಪ್ತವಾದ ಹಲವು ವಿಪತ್ತು ಗಳು, ಅವುಗಳು ಪರಿಹಾರವಾದ ಕ್ರಮ, ಕೊನೆಗೆ ಭೀಷ್ಮಾನುಗ್ರಹದಿಂದ ಅವರಿಗೆ ರಾಜ್ಯ ಲಭಿಸಿ ಧೃತರಾಷ್ಟ್ರನ ಹಂಚಿಕೆಯಂತೆ ಅವರು ಇಂದ್ರಪ್ರಸ್ಥದಲ್ಲಿ ನೆಲಸಿದ ಕಥೆ— ಇವು ಆದಿಪರ್ವದ ವಸ್ತು. ಇದನ್ನು ನಿರೂಪಿಸುವಾಗ ಪಾರ್ಥನ ಪರಾಕ್ರಮದ ಕಥೆ ಕ್ರಮ ಕ್ರಮವಾಗಿ ಬೆಳೆಯಿತು. ಅಂಗಾರಪರ್ಣನೆಂಬ ಗಂಧರ್ವನನ್ನು ಗೆದ್ದು ದ್ರೌಪದಿಯ ಸ್ವಯಂವರದಲ್ಲಿ ಮತ್ಸ್ಯಯಂತ್ರವನ್ನು ಭೇದಿಸಿ ಅಲ್ಲಿ ದ್ರುಪದನ ಮೇಲೆ ಕಾಳಗ ಹೂಡಿದ ಕ್ಷತ್ರಿಯರನ್ನೆಲ್ಲ ಸೋಲಿಸಿದುದಲ್ಲದೆ ತೀರ್ಥಯಾತ್ರೆಯ ನೆಪದಲ್ಲಿ ಭರತ ಖಂಡದಲ್ಲೆಲ್ಲ ಸಂಚರಿಸಿ ದಿಗ್ವಿಜಯಮಾಡಿ ಕೃಷ್ಣನ ತಂಗಿ ಸುಭದ್ರೆಯನ್ನು ಅಪಹರಿಸಿ ಕೊಂಡು ಬರುತ್ತಿದ್ದಾಗ ಬೆನ್ನಟ್ಟಿ ಬಂದ ಯಾದವವೀರರನ್ನು ಹಿಮ್ಮೆಟ್ಟಿಸಿ ಕಡೆಗೆ ಖಾಂಡವವನ ದಹನ ಪ್ರಸಂಗದಲ್ಲಿ ಸ್ವಯಂ ದೇವೇಂದ್ರನನ್ನೇ ಪ್ರತಿಭಟಿಸಿ ಗೆದ್ದನು! ವಿಕ್ರಮಾರ್ಜುನನ ಈ ವಿಜಯ ಪರಂಪರೆಯನ್ನು ಪಂಪಕವಿ ತನ್ನ ಭಾರತ ಕಾವ್ಯದ

---

[1] ವಿ.ವಿ. 5–102.

[2] ವಿ.ವಿ. 5–103 (ಗ).

ಮೊದಲಿನ ಐದು ಆಶ್ವಾಸಗಳಲ್ಲಿ ಯಾವ ಮುಖ್ಯ ಪ್ರಕರಣವನ್ನೂ ಕೈಬಿಡದೆ ಅದಷ್ಟು ಸಂಕ್ಷೇಪವಾಗಿ ವರ್ಣಿಸಿ ಕೃತಕೃತ್ಯನಾಗಿದ್ದಾನೆ.

ನನ್ನಯಭಟ್ಟ ಭಾರತದ ಈ ಭಾಗವನ್ನು ಹೇಳುವಾಗ ಬಹಳ ಮಟ್ಟಿಗೆ ಪಂಪನ ದಾರಿಯನ್ನೇ ಅನುಸರಿಸಿ ಮುಖ್ಯ ಕಥೆಯನ್ನು ಹೇಳಿದ್ದಾನೆ. ಆದರೆ ಪಂಪನು ಹೇಳದೆ ಬಿಟ್ಟಿರುವ ಕೆಲವು ಪೂರ್ವಕಥೆಗಳನ್ನು ನನ್ನಯ ಸಂಗ್ರಹವಾಗಿ ಹೇಳಿದ್ದಾನೆ. ಪಂಪ ಕೇವಲ ಸೂಚ್ಯವಾಗಿ ಹೇಳಿದ ಕೆಲವು ಅಂಶಗಳನ್ನು ನನ್ನಯ ಬಿಡಿಸಿ ಹೇಳಿದ್ದಾನೆ. ಭಾರತದ ಮುಖ್ಯ ಕಥಾಸೂತ್ರಕ್ಕೆ ಸಂಬಂಧಿಸದಿರುವ ಕೆಲವು ಉಪಾಖ್ಯಾನಗಳನ್ನು ಪಂಪ ನಿರ್ವಿಚಾರವಾಗಿ ಕೈಬಿಟ್ಟಿದ್ದರೆ ನನ್ನಯನು ಅವುಗಳಲ್ಲಿ ವೈದಿಕಧರ್ಮ ನಿರೂಪಣೆಗೆ ಸಹಾಯಕವಾದ ಭಾಗಗಳನ್ನು ಸಂಕ್ಷೇಪವಾಗಿ ಹೇಳಿದ್ದಾನೆ. ಯಜ್ಞ, ತಪಸ್ಸು, ವರ್ಣಾಶ್ರಮ ಧರ್ಮ ಮೊದಲಾದವುಗಳನ್ನು ವರ್ಣಿಸುವುದರಲ್ಲಿ ನನ್ನಯಭಟ್ಟನಿಗಿದ್ದ ಆಸಕ್ತಿ ಪಂಪನಿಗೆ ಇರಲಿಲ್ಲ. ಆದ್ದರಿಂದ ನನ್ನಯಭಟ್ಟನ ಕೃತಿ ಪಂಪನ ಕಾವ್ಯಕ್ಕಿಂತ ಕೊಂಚ ದೀರ್ಘವಾಗಿದ್ದರೂ ಅದು ವ್ಯಾಸ ಭಾರತದಷ್ಟು ವಿಸ್ತಾರವಲ್ಲ. ನನ್ನಯಭಟ್ಟನೂ ಮೂಲಭಾರತದ ಸಂಗ್ರಹಕಾರನೇ ಹೌದು.

ದ್ರೌಪದಿಯ ವಿವಾಹ ಕಥನದಲ್ಲಿ ಮಾತ್ರ ಪಂಪ ನನ್ನಯರಿಗೆ ಹೋಲಿಕೆಯಿಲ್ಲ. ಅದಕ್ಕೆ ಪಂಪನು ಅರಿಕೇಸರಿಯ ಆಶ್ರಿತನಾಗಿದ್ದು ಅವನನ್ನು ಪುರಾಣ ವೀರನಾದ ಅರ್ಜುನನೊಡನೆ ಸಮೀಕರಿಸಿದ್ದೇ ಕಾರಣ.

# ೫. ಸಭಾಪರ್ವ

ಧರ್ಮರಾಯನಿಗೆ ಮಯಾಸುರನು ಕಾಣಿಕೆಯಾಗಿ ತಂದು ಒಪ್ಪಿಸಿದ ಭವ್ಯ ಸಭಾ ಮಂದಿರದ ವರ್ಣನೆಯಿಂದ ಮಹಾಭಾರತದ ಸಭಾಪರ್ವ ಆರಂಭವಾಗಿದೆ. ದಾನವ ಮಹಾಶಿಲ್ಪಿಯಾದ ಮಯನು ಖಾಂಡವವನದಾಹದಲ್ಲಿ ಸಿಕ್ಕಿಕೊಂಡಾಗ ಅರ್ಜುನನ ಮರೆಹೊಕ್ಕು ಜೀವ ಉಳಿಸಿಕೊಂಡನು. ತನಗೆ ಜೀವದಾನಮಾಡಿದ ಆ ಮಹಾವೀರ ನಿಗೆ ಏನಾದರೊಂದು ಪ್ರಿಯವಾದ ಕಾಣಿಕೆಯನ್ನು ಸಲ್ಲಿಸಬೇಕೆಂದು ಯೋಚನೆ ಮಾಡಿ 'ಮಯಂ ಪಂಚರತ್ನ ಹಿರಣ್ಮಯಂ ಚತುರಶ್ರಂ ಪದಿನಱು ಯೋಜನದಳವಿಯ ಸಭಾ ಮಂಟಪಮನೊಂದು ಲಕ್ಕ ರಕ್ಕಸವಡೆಯಿಂ ಪೊತ್ತು ತರಿಸಿ[1]' ಧರ್ಮರಾಯನಿಗೆ ಒಪ್ಪಿಸಿದನು. ಆ ಸಭಾಮಂಟಪದ ಹಿರಿಮೆಯನ್ನು ಹೇಳಿ ಮುಗಿಸುವುದು ಶಕ್ಯವಲ್ಲ. ಅದು ಅದ್ಭುತವಾಗಿತ್ತು, ಅಂಥ ಇನ್ನೊಂದು ಸಭಾಮಂಟಪವನ್ನು ಕಟ್ಟಲು ಬೇರೆ ಯಾರಿಗೂ ಸಾಧ್ಯವಿಲ್ಲ. ಅದು ಮಹಾ ವೈಭವವೋಪೇತವಾಗಿದ್ದು ನೋಟಕರನ್ನು ಬೆರಗುವಡಿಸುವಂತಿತ್ತು. ಮಯನ ಪ್ರಾರ್ಥನೆಯಂತೆ ಆ ದಿವ್ಯ ಸುಂದರವಾದ ಭವ್ಯ ಮಂಟಪವನ್ನು ಕಾಣಿಕೆಯಾಗಿ ಸ್ವೀಕರಿಸಿ ಧರ್ಮರಾಯನು ಅವನನ್ನು ಸತ್ಕರಿಸಿದನು. ಆ ತರುವಾಯ ಮಯನು 'ಪರಾಕ್ರಮಧವಳ'ನಿಗೆ ದಿವ್ಯಧವಳವಾದ ದೇವದತ್ತವೆಂಬ ಶಂಖವನ್ನೂ, ಭೀಮಸೇನನಿಗೆ ರುಧಿರಮುಖಿಯೆಂಬ ಮಹಾಗದೆಯನ್ನೂ ಕಾಣಿಕೆಯಾಗಿ ಒಪ್ಪಿಸಿದನು. ದೇವದೇವನಾದ ಇಂದ್ರನೇ ಕೊಟ್ಟು ಕಳುಹಿಸಿದ ಶಂಖವಾದ್ದರಿಂದ ಅದಕ್ಕೆ 'ದೇವದತ್ತ'ವೆಂದು ಹೆಸರಾಯಿತು. 'ರುಧಿರಮುಖಿ' ಪ್ರಸಿದ್ಧವಾದ ಗದೆ. ಅದು ಮೊದಲು ಮಾಂಧಾತರಾಜನಲ್ಲಿತ್ತು. ಆಮೇಲೆ ಅದು ಲವಣಾಸುರನ ಕೈಸೇರಿ ಆ ರಕ್ಕಸನ ಕೊಲೆ ಮಾಡಿದ ಶತ್ರುಘ್ನನ ವಶಕ್ಕೆ ಹೋಯಿತು. ಅವನು ಅದನ್ನು ಸಮುದ್ರಮಧ್ಯದಲ್ಲಿನ ಮೈನಾಕ ಪರ್ವತದಲ್ಲಿ ಬಚ್ಚಿಟ್ಟನಂತೆ. ಯಾವುದೋ ಸಮಯದಲ್ಲಿ ಅದನ್ನು ವರುಣನು ಮಯನಿಗೆ ಪಾರಿತೋಷಕವಾಗಿ ಕೊಟ್ಟಿದ್ದನು. ಅದನ್ನು ಈಗ ಮಯನು ತಂದು ಮಹಾ ಬಲಶಾಲಿಯಾದ ಭೀಮಸೇನನಿಗೆ ಕಾಣಿಕೆಯಾಗಿ ಕೊಡುತ್ತ ಅದರ ಪುರಾತನ ಇತಿಹಾಸವನ್ನು ಸೂಕ್ಷ್ಮವಾಗಿ ತಿಳಿಸಿದನು. ಈ ಕಾಣಿಕೆಗಳನ್ನೆಲ್ಲ ಸ್ವೀಕರಿಸಿ ಪಾಂಡವರು ಸಂಪ್ರೀತಿಯಿಂದ ಆ ದಾನವಶಿಲ್ಪಿಯನ್ನು ವಿಶೇಷವಾಗಿ ಸತ್ಕರಿಸಿ ಬೀಳ್ಕೊಟ್ಟರು.

## ನಾರದಾಗಮನ

ಮಯನಿರ್ಮಿತವಾದ ಆ ಅದ್ಭುತ ಸಭಾಮಂಟಪವನ್ನು ಎಲ್ಲರೂ ಮೆಚ್ಚಿಕೊಂಡರು. ಅದರ ಅಪೂರ್ವ ಸೌಂದರ್ಯಾತಿಶಯವನ್ನು ವರ್ಣಿಸಲು ಯಾರಿಂದಲೂ

---

[1] ಪಂಪಭಾರತ II (೮)

ಶಕ್ಯವಲ್ಲ. ಧರ್ಮರಾಯನಿಗೆ ಅದು ಅತ್ಯಂತ ಪ್ರಿಯವಾಯಿತು. ಅವನು ಅದನ್ನು ತನ್ನ ಓಲಗಶಾಲೆಯಾಗಿ ಬಳಸಿಕೊಳ್ಳುವ ಮುನ್ನ ಮಾಡಿದ ವಿಶೇಷವಾದ ಬ್ರಾಹ್ಮಣ ಪೂಜೆ, ಗೋದಾನ, ಸುವರ್ಣದಾನ, ಭೂದಾನಾದಿಗಳನ್ನು ಆಂಧ್ರಭಾರತಕರ್ತ ನನ್ನಯಭಟ್ಟನು ಹೇಳಿದ್ದಾನೆ. ದೈವಜ್ಞರಿಂದ ನಿರ್ಣೀತವಾದ ಸುಮುಹೂರ್ತದಲ್ಲಿ ಧೌಮ್ಯಾದಿ ಭೂಸುರರ ಆಶೀರ್ವಾದ ಪಡೆದು ಧರ್ಮರಾಯನು ಆ ಸಭಾಮಂಟಪ ಪ್ರವೇಶಮಾಡಿ ಸಿಂಹಾಸನಾರೂಢನಾದನು. ಪಂಪನಿಗೆ ಈ ವರ್ಣನೆಯೆಲ್ಲ ಹಿತ ವಾಗಲಿಲ್ಲ. ಮಹಾಭಾರತ ಕಥಾನಿರ್ವಹಣೆಗೆ ಈ ಅಂಶಗಳೆಲ್ಲ ಅನವಸರವೆಂದು ಅವನಿಗೆ ತೋರಿರಬೇಕು. ಧರ್ಮರಾಯನು ಬ್ರಾಹ್ಮಣಾರಾಧನೆ ಮಾಡುವುದೂ ದಾನ ಕರ್ಮವನ್ನಾಚರಿಸುವುದೂ ಅಸಾಧಾರಣ ವಿಷಯಗಳೇನಲ್ಲ. ಅಂಥವು ಎಷ್ಟೋ ಸಲ ನಡೆದಿರಬಹುದು, ಅದನ್ನೆಲ್ಲ ಹೇಳದಿದ್ದರೂ ಕಥಾಶರೀರಕ್ಕೆ ಕುಂದೇನೂ ಆಗ ದೆಂದು ಪಂಪನ ತಿಳಿವಳಿಕೆ. ಆದ್ದರಿಂದಲೇ ಅವನು 'ಮತ್ತೊಂದು ದಿವಸ ಸಭಾ ಮಂಟಪದೊಳ್ ಧರ್ಮರಾಜಂ ತನ್ನ ನಾಲ್ವರ್ ತಮ್ಮಂದಿರೊಡನೆ ದೇವೇಂದ್ರಲೀಲೆ ಯಿಂದೋಲಗಂಗೊಟ್ಟ' ನೆಂದು ಸರಳವಾಗಿ ಹೇಳಿ ಸ್ವಲ್ಪದರಲ್ಲಿಯೇ ಈ ಪ್ರಕರಣವನ್ನು ಮುಗಿಸಿ ಬಿಟ್ಟಿದ್ದಾನೆ. ಪುಕ್ಕಟೆಯಾಗಿ ಪಡೆದ ಸಭಾಮಂಟಪಕ್ಕೆ ಆರಂಭೋತ್ಸವ ಇನ್ನೆಷ್ಟಾಗಬೇಕು!

ಧರ್ಮರಾಯನಿಗೆ ಆ ಸಭೆ ಬಹಳ ಮೆಚ್ಚಿಗೆಯಾದುದಷ್ಟೇ ಅಲ್ಲ, ಅದರ ಹಿರಿಮೆಯ ವಿಚಾರವಲ್ಲಿ ಅವನಿಗೆ ಬಹಳ ಅಭಿಮಾನವೂ ಹುಟ್ಟಿತು. ವ್ಯಾಸಭಾರತದ ಈ ಕಥಾಭಾಗವನ್ನು ಓದಿದಾಗ ಬೇರೆ ಯಾವ ದೊರೆಗೂ ಇಲ್ಲದಂಥ ಮಹಾ ಸುಂದರ ವಾದ ಶ್ರೇಷ್ಠ ಸಭಾಮಂದಿರ ತನ್ನದೆಂಬ ಹೆಮ್ಮೆ ಧರ್ಮರಾಜನ ಮನಸ್ಸಿನಲ್ಲಿ ಮೂಡಿ ದಂತೆ ತೋರುತ್ತದೆ. ಒಂದು ದಿನ ಬ್ರಹ್ಮಮಾನಸಪುತ್ರನಾದ ನಾರದ ಮಹರ್ಷಿಯು ತ್ರಿಲೋಕ ಸಂಚಾರಿಯಾಗಿ ಹೊರಟು ಧರ್ಮರಾಯನ ಸಂದರ್ಶನಾರ್ಥಿಯಾಗಿ ಇಂದ್ರ ಪ್ರಸ್ಥಕ್ಕೆ ಬಂದು ಆ ಸಭಾಮಂದಿರವನ್ನು ಪ್ರವೇಶಿಸಿದನು. ಆ ದೇವಮುನಿಯ ಆಗಮನದಿಂದ ಹರ್ಷಿತರಾದ ಪಾಂಡವರು ಸಹಜವಾಗಿ ಎದ್ದು ಹೋಗಿ ಆತನನ್ನು ಇದಿರುಗೊಂಡು ಸ್ವಾಗತಿಸಿ ಬಹುಮಾನಪೂರ್ವಕವಾಗಿ ಕರೆದು ತಂದು ಭದ್ರಾಸನದ ಮೇಲೆ ಕುಳ್ಳಿರಿಸಿ ಅರ್ಘ್ಯಪಾದ್ಯಾದಿಗಳನ್ನಿತ್ತು ಉಪಚರಿಸಿದರು. ನಾರದ ಮುನಿಯು ಅವರ ಭಕ್ತಿಪೂರ್ವಕವಾದ ಆದರೋಪಚಾರಗಳನ್ನು ಪ್ರೀತಿಯಿಂದ ಸ್ವೀಕರಿಸಿ ಕುಶಲ ಪ್ರಶ್ನೆಮಾಡಿ ಸಭೆಯಲ್ಲಿ ಕುಳ್ಳಿರಲು ಧರ್ಮರಾಯನು ತನಗೆ ಹೊಸದಾಗಿ ಲಭಿಸಿದ್ದ ಆ ಸಭಾಮಂಟಪವನ್ನು ಆ ಮುನಿಗೆ ತೋರಿಸಿ 'ಸ್ವಾಮಿ. ತ್ರಿಲೋಕ ಸಂಚಾರಿಗಳಾದ ತಾವು ಬ್ರಹ್ಮನಿರ್ಮಿತವಾದ ಅನೇಕ ಶ್ರೇಷ್ಠ ಸಭಾಮಂದಿರಗಳನ್ನು ನೋಡಿ ಬಲ್ಲವರಾಗಿ ದ್ದೀರಿ. ಈ ಸಭಾ ಭವನವನ್ನು ಹೋಲುವಂಥ ಭವನವನ್ನು ತಾವು ಬೇರೆಲ್ಲಿ ಯಾದರೂ ನೋಡಿರುವಿರಾ?' ಎಂದು ಪ್ರಶ್ನಿಸಿದನಂತೆ. ನಾರದನು ಈ ಪ್ರಶ್ನೆ ಯನ್ನು ಕೇಳಿ ಬೇಸರಿಸದೆ ಉತ್ತರ ಹೇಳುತ್ತ ಇಂದ್ರ, ಯಮರಾಜ, ವರುಣ, ಕುಬೇರ

ಮತ್ತು ಬ್ರಹ್ಮನ ಸಭೆಗಳನ್ನೆಲ್ಲ ಹೆಸರಿಸಿ ಆಯಾ ಸಭಾಮಂದಿರಗಳ ಅಂದ ಚಂದಗಳನ್ನೆಲ್ಲ ವರ್ಣಿಸಿ ಅವುಗಳ ಹಿರಿಮೆಯನ್ನು ಹೇಳಿ ಕೊನೆಗೆ

ಏತಾ ಮಯಾ ದೃಷ್ಟಪೂರ್ವಾಃ ಸಭಾ ದೇವೇಷು ಭಾರತ
ಸಭೇಯಂ ಮಾನುಷೇಲೋಕೇ ಸರ್ವಶ್ರೇಷ್ಠತಮಂ ತವ

ಎಂದು ನುಡಿದು ಭೂಲೋಕದಲ್ಲಿ ಧರ್ಮರಾಯನ ಸಭೆಗೆ ಸಮನೆನಿಸಬಲ್ಲ ಬೇರೊಂದು ಸಭೆಯಿಲ್ಲವೆಂದು ಸ್ಪಷ್ಟಪಡಿಸಿದನು. ನಾರದಮಹರ್ಷಿ ನೀಡಿದ ಈ ವಿಶೇಷ ಪ್ರಶಸ್ತಿಯಿಂದ ಧರ್ಮರಾಜನಿಗೆ ಬಹಳ ಹಿಗ್ಗೇ ಆಗಿರಬೇಕು. ಮಯನು ತನಗೆ ಪ್ರೀತಿಯಿಂದ ಪಾರಿತೋಷಕವಾಗಿ ಕೊಟ್ಟ ಆ ಸಭಾಮಂಟಪ ಮಾನವ ದುರ್ಲಭವಾದ ಲೋಕೋತ್ತರ ವಸ್ತುವೆಂದು ಅವನಿಗೆ ಅದರಿಂದ ಸ್ಪಷ್ಟವಾಯಿತು!

ಯುಧಿಷ್ಠಿರನಂಥ ಧರ್ಮಜ್ಞನೂ ವಿನೀತನೂ ನೀತಿಪರಾಯಣನೂ ಆ ವೇಳೆಗಾಗಲೆ ಹಲವು ಕಷ್ಟಗಳನ್ನು ಅನುಭವಿಸಿದವನೂ ಆದ ರಾಜನು ತನ್ನ ಯಾವ ಪ್ರಯತ್ನವೂ ಇಲ್ಲದೆ ತನಗೆ ಕೊಡುಗೆಯಾಗಿ ಲಭಿಸಿದ ಒಂದು ಸಭಾ ಮಂದಿರದ ಅಂದ ಚಂದಗಳ ವಿಚಾರದಲ್ಲಿ ಇಷ್ಟೊಂದು ಹೆಮ್ಮೆಪಟ್ಟುಕೊಂಡು ದೇವರ್ಷಿ ನಾರದನೆದುರಿಗೆ ಹೊಗಳಿಕೊಳ್ಳುವುದು. ತ್ರಿಲೋಕಗಳಲ್ಲಿಯೂ ಅದಕ್ಕೆ ಸಮನಾದುದಿಲ್ಲವೆಂದು ಭಾವಿಸುವುದೂ ಅವನ ಹಿರಿಮೆಗೆ ಅನುಗುಣವಲ್ಲವೆಂದು ಪಂಪಕವಿ ಭಾವಿಸಿದಂತೆ ತೋರುತ್ತದೆ. ಆದ್ದರಿಂದಲೇ ಅವನು ಈ ಪ್ರಸ್ತಾಪವನ್ನು ಸಂಪೂರ್ಣವಾಗಿ ಕೈಬಿಟ್ಟದ್ದಾನೆ. ವ್ಯಾಸರು ತಮ್ಮ ಗ್ರಂಥದಲ್ಲಿ ಈ ಲೋಕಪಾಲಕ ಸಭಾವರ್ಣನೆಗೇ ಹನ್ನೊಂದು ಅಧ್ಯಾಯಗಳನ್ನು ಬಳಸಿದ್ದಾರೆ. ಪರಮ ವೈದಿಕನಾದ ನನ್ನಯಭಟ್ಟನು ಬ್ರಹ್ಮಸಭೆಯ ವರ್ಣನೆಯನ್ನು ಕೈಬಿಡುವುದಾದರೂ ಹೇಗೆ? ಅವನು ಈ ವಿಭಿನ್ನ ಸಭೆಗಳ ವರ್ಣನೆಯನ್ನು ಸಂಕ್ಷೇಪವಾಗಿ ಹೇಳಿದ್ದಾನೆ. ಆದರೆ ಅದು ಹನ್ನೊಂದು ಅಧ್ಯಾಯಗಳಾಗಿ ಬೆಳೆಯದೆ ಕೆಲವೇ ಪದ್ಯಗಳಲ್ಲಿ ಮುಗಿದುಹೋಗಿದೆ. ನನ್ನಯ ತನ್ನ ಆಂಧ್ರ ಮಹಾಭಾರತದ ಇಡೀ ಸಭಾಪರ್ವವನ್ನೇ ಎರಡು ಆಶ್ವಾಸಗಳಲ್ಲಿ ಅಡಕಮಾಡಿದ್ದಾನೆ. ಆದ್ದರಿಂದ ಈ ಸಭಾವರ್ಣನೆಯನ್ನು ಹೆಚ್ಚು ಬೆಳೆಸಲಿಲ್ಲ. ಮಯನಿಂದ ಧರ್ಮರಾಯನಿಗೆ ಪ್ರಾಪ್ತವಾದ ಸಭೆಯ ವರ್ಣನೆಯಿಂದ ಆರಂಭವಾದ ಈ ಪರ್ವ ಅನೇಕ ದೇವ ಮಾನವ ಸಭೆಗಳ ವೃತ್ತಾಂತವನ್ನೊಳಗೊಂಡಿರುವುದರಿಂದಲೂ, ಕೌರವನ ಸಭೆಯಲ್ಲಿ ನಡೆದ ದಾರುಣ ವೃತ್ತಾಂತ ವರ್ಣನೆಯಿಂದ ಮುಗಿಯುವುದರಿಂದಲೂ ಇದಕ್ಕೆ ಸಭಾಪರ್ವವೆಂಬ ಹೆಸರು ಉಚಿತವಾಗಿದೆ.

ಪಂಪಕವಿಯು ಮಾತ್ರ ತನ್ನ ಕಾವ್ಯದಲ್ಲಿ ಯಾವ ಲೋಕಪಾಲ ಸಭೆಯನ್ನೂ ವರ್ಣಿಸಲಿಲ್ಲ. ಬ್ರಹ್ಮಸಭೆಯ ಸುದ್ದಿಯೂ ಇಲ್ಲ. ಧರ್ಮಜನು ತನ್ನ ತಮ್ಮಂದಿರೊಡನೆ ಓಲಗದಲ್ಲಿ ಕುಳಿತಿದ್ದಾಗ ಒಂದು ದಿನ ನಾರದ ಮಹರ್ಷಿಯು ದೇವಲೋಕದಿಂದಿಳಿದು ಬಂದನಂತೆ. ಆ ಮುನಿ ಮೇಲಿಂದ ಇಳಿಯುತ್ತಿರುವಾಗ ಭೂಮಿಯ ಮೇಲೆ ನಿಂತು ನೋಡುತ್ತಿದ್ದ ನೋಟಕರು ಬೆರಗಾಗಿ ಆತನನ್ನು ಗುರುತಿಸಿದ ವೈಖರಿ

ಯನ್ನು ಪಂಪ ಬಹಳ ಅಂದವಾಗಿ ಚಿತ್ರಿಸಿದ್ದಾನೆ. ಮೊದಲು ಬೆಳಕಿನ ಒಂದು ಉಂಡೆ ಕೆಳಕ್ಕೆ ಇಳಿಯುವಂತೆ ಕಂಡಿತಂತೆ. ಆಮೇಲೆ ಅದು ಮಾನವಾಕೃತಿಯೆಂಬ ಸಂದೇಹವುಂಟಾಯಿತು. ಕೊಂಚ ಹೊತ್ತಿನ ಮೇಲೆ ಬರುತ್ತಿರುವವನು ಯಾರೋ ಮುನಿಯಿರಬೇಕೆಂದು ಅವರು ಭಾವಿಸಿದರು. ಉತ್ತರ ಕ್ಷಣದಲ್ಲಿಯೇ ಅವರು ಬೇರೆ ಯಾರೂ ಆಗಿರದೆ ಸಾಕ್ಷಾತ್ ನಾರದರೇ ಎಂದು ತಿಳಿಯಿತು. ಕೂಡಲೆ ಧರ್ಮಜಾದಿಗಳು ಪ್ರತ್ಯುತ್ಥಾನ ಮಾಡಿ ಕರೆದುಕೊಂಡು ಬಂದು ಸಭಾ ಪ್ರವೇಶ ಮಾಡಿಸಿ ಉಪಚರಿಸಿದರು. 'ಸಾಕ್ಷಾತ್ ಬ್ರಹ್ಮಂ ಬರ್ಪಂತೆ ಬಂದು' ಆ ಋಷಿ ಪಾಂಡವರು ಮಾಡಿದ ಸತ್ಕಾರವನ್ನು ಸ್ವೀಕರಿಸಿ ಅವರನ್ನು ಆಶೀರ್ವದಿಸಿದನು.

ಈ ಸಂದರ್ಭದಲ್ಲಿ ಧರ್ಮಜನಿಗೆ ನಾರದನು ರಾಜಧರ್ಮವನ್ನು ಉಪದೇಶಿಸಿದನೆಂದು ವ್ಯಾಸ ನನ್ನಯರಿಬ್ಬರೂ ಹೇಳಿದ್ದಾರೆ. ಪಂಪನಲ್ಲಿ ಧರ್ಮೋಪದೇಶದ ಸುದ್ದಿ ಇಲ್ಲ. ಧರ್ಮರಾಯ ಧರ್ಮೋಪದೇಶ ಬೇಡಲಿಲ್ಲ, ನಾರದ ನೀಡಲಿಲ್ಲ. ಧರ್ಮಜನು ಬಹಳ ಭಕ್ತಿಯಿಂದ ನಾರದನ ಪಾದಗಳನ್ನು ತೊಳೆದು ಪಾದೋದಕ ಪ್ರೋಕ್ಷಣೆ ಮಾಡಿಕೊಂಡು ಆ ಮುನಿಯನ್ನು ಕುರಿತು ಹೀಗೆ ಹೊಗಳಿದನು :

> ಪಡೆದಂ ಬ್ರಹ್ಮಂ ಜಗಮಂ
> ಪಡೆಯಲ್ ತಾನಾರ್ತನಿಲ್ಲ ಪೆಂಪಂ ನಿಮ್ಮಂ
> ಪಡೆದಲ್ತೆ ಪಡೆದನೆನಿಸಿದ
> ಕಡುಪೆಂಪಿನ ಪೊಡೆಗೆ ನೀವು ಮೊದಲಿಗರಾದಿರ್

ಆಮೇಲೆ ಅರಸನು ನಾರದನನ್ನು ವಂದಿಸಿ 'ಈಗಳೆಲ್ಲಿಂ ಬಂದಿರ್ ?' ಎಂದು ವಿನಯದಿಂದ ಕೇಳಲು ತಾನು ಇಂದ್ರಲೋಕದಿಂದ ಬಂದುದಾಗಿ ಆತನು ಉತ್ತರ ಕೊಟ್ಟು ಅಲ್ಲಿ ತಾನು ಕಂಡ ಪಾಂಡುಮಹಾರಾಜನ ಸ್ಥಿತಿಯನ್ನು ವರ್ಣಿಸಿ ಆತನು ತನ್ನ ಮಕ್ಕಳಿಗೆ ಹೇಳಬಯಸಿದ ಸಂದೇಶವನ್ನು ತಿಳಿಸಿದನು. ಇಲ್ಲಿ ಯಮನ ಸಭೆಯ ಸುದ್ದಿಯಾಗಲಿ ಪಾಂಡುರಾಜನು ಯಮನ ಸಭೆಯಲ್ಲಿದ್ದನೆಂಬ ಮಾತಾಗಲಿ ಇಲ್ಲ. ವ್ಯಾಸ ನನ್ನಯರಿಬ್ಬರೂ ಈ ಪ್ರಸಂಗದಲ್ಲಿ ಬಿತ್ತರಿಸಿರುವ ಹರಿಶ್ಚಂದ್ರನ ಕಥೆಯೂ ಪಂಪ ಭಾರತದಲ್ಲಿಲ್ಲ. ಪಾಂಡುರಾಜನು ಇಂದ್ರಸಭೆಯಲ್ಲಿಯೇ ಇದ್ದರೂ ಅಲ್ಲಿ ಅವನಿಗೆ ಹರಿಶ್ಚಂದ್ರಾದಿ ರಾಜರಿಗಿದ್ದ ಮನ್ನಣೆಯಿಲ್ಲವೆಂದೂ, ಅವನ ಮಕ್ಕಳು ಅನ್ಯ ರಾಜರನ್ನು ಯುದ್ಧದಲ್ಲಿ ಗೆದ್ದು ರಾಜಸೂಯವನ್ನು ಆಚರಿಸಿದರೆ ಮಾತ್ರ ಅವನಿಗೆ ಇಂದ್ರ ಸಭೆಯಲ್ಲಿ ಪೂಜ್ಯತೆ ಲಭಿಸುವುದೆಂದೂ, ಆದ್ದರಿಂದ ತಪ್ಪದೆ ರಾಜಸೂಯವನ್ನು ಕೈಕೊಳ್ಳುವಂತೆ ಪಾಂಡುರಾಜನು ತನ್ನ ಮೂಲಕ ಹೇಳಿ ಕಳುಹಿಸಿರುವನೆಂದೂ ನಾರದನು ತಿಳಿಯಹೇಳುತ್ತಾನೆ. ಹರಿಶ್ಚಂದ್ರನು ಶತಕ್ರತುಗಳನ್ನಾಚರಿಸಿ ವಿಶೇಷವಾದ ಭೂದಾನ ಮಾಡಿದುದರಿಂದ ದೇವಲೋಕದಲ್ಲಿ ಇಂದ್ರನೇ ಅವನಿದ್ದ ಕಡೆಗೇ ಹೋಗಿ ಅವನಿಗೆ ಗೌರವ ಸಲ್ಲಿಸುತ್ತಾನೆಂದೂ, ಪಾಂಡುವಿಗೆ ಈಗ ಅಂಥ ಭಾಗ್ಯವಿಲ್ಲ

ವೆಂದೂ ಅದಕ್ಕಾಗಿ ಪಾಂಡವರು ರಾಜಸೂಯ ಮಾಡಬೇಕೆಂದೂ ನಾರದನು ಉಪದೇಶಿಸುತ್ತಾನೆ. ಈ ನಾರದೋಪದೇಶದ ಕಥೆ ವ್ಯಾಸಭಾರತದಲ್ಲಿಯೂ ನನ್ನಯನ ಕಾವ್ಯದಲ್ಲಿಯೂ ಬಂದಿದೆಯಾದರೂ ಪಂಪನ ಕೃತಿಯಲ್ಲಿ ಅದು ಹೆಚ್ಚು ಕಲಾತ್ಮಕವಾಗಿ ಮೂಡಿಬಂದಿದೆ. ಒಬ್ಬ ರಾಜನು ರಾಜಸೂಯ ಯಾಗ ಮಾಡಿದರೆ ಅದರ ಫಲ ಅವನ ಪಿತೃಪಿತಾಮಹರಿಗೂ ಲಭಿಸುವುದಂತೆ !

ನಾರದ ಧರ್ಮರಾಯನ ಮನಸ್ಸಿನಲ್ಲಿ ರಾಜಸೂಯದ ಸಂಕಲ್ಪವನ್ನು ಹುಟ್ಟು ಹಾಕಿ ದೇವಲೋಕಕ್ಕೆ ಹೊರಟುಹೋದನು. ಕಲಹಪ್ರಿಯನಾದ ನಾರದನಿಗೆ "ರಾಜಸೂಯಾಂತಂ ಕಲಹಂ" ಎಂಬುದು ತಿಳಿಯದೆ ? ವ್ಯಾಸಭಾರತದಲ್ಲಿಯೂ ನನ್ನಯನ ಆಂಧ್ರ ಭಾರತದಲ್ಲಿಯೂ ಪಾಂಡುರಾಜನು ಮಕ್ಕಳಿಗೆ ಕಳುಹಿಸಿದ ಸಂದೇಶದ ಸುದ್ದಿ ಬಂದಿದೆಯಾದರೂ ಅದು ಪಂಪಭಾರತದಲ್ಲಿ ಹೆಚ್ಚು ಪರಿಣಾಮಕಾರಿಯಾದ ರೀತಿಯಲ್ಲಿ ಚಿತ್ರಿತವಾಗಿದೆ. ರಾಜಸೂಯ ಮಾಡಿದ ಷೋಡಶರಾಜರಿಗೆ ಇಂದ್ರಸಭೆಯಲ್ಲಿ ಸಲ್ಲುತ್ತಿದ್ದ ಗೌರವ ಪಾಂಡುವಿಗೆ ಸಲ್ಲದೆ ಅವನಿಗೆ ಅಪಮಾನವಾಗಿತ್ತು. ಅದನ್ನು ನೀಗಿಸಲು ಅವನ ಮಕ್ಕಳು ಈಗ ರಾಜಸೂಯ ಮಾಡಬೇಕು. ತಂದೆಯ ದುಃಖ ಪರಿಹಾರ ಮಾಡುವುದು, ಅವನ ಆಜ್ಞೆಯನ್ನು ಪರಿಪಾಲಿಸುವುದು ಧರ್ಮಜನಿಗೆ ಮುಖ್ಯವೆನಿಸಿತು. ಧರ್ಮರಾಯನು ರಾಜಸೂಯ ಯಾಗದಲ್ಲಿ ಅಪೇಕ್ಷೆಯುಳ್ಳವನಾದರೂ ಮೊದಲು ತಮ್ಮಂದಿರೊಡನೆ ಸಮಾಲೋಚನೆ ನಡೆಸಿ 'ಪುರುಷೋತ್ತಮನನೀಪದದೊಳ್ ಬರಿಸುವುದು ನಮಗುತ್ತಮಪಕ್ಷಂ' ಎಂಬ ತೀರ್ಮಾನಕ್ಕೆ ಬಂದನು. ಕೂಡಲೇ ವೇಗಚಾರಿಗಳು ದ್ವಾರಕಿಗೆ ಹೊರಟರು. ಭಕ್ತ ಪರಾಧೀನನಾದ ಆ ಮಹಾತ್ಮನು ಒಡನೆಯೇ ಇಂದ್ರಪ್ರಸ್ಥಕ್ಕೆ ಬಂದನು.

ಶ್ರೀ ಕೃಷ್ಣನು ಧರ್ಮರಾಯನಿಂದ ಎಲ್ಲ ವೃತ್ತಾಂತವನ್ನೂ ಕೇಳಿ ತಿಳಿದು ಕೊಂಡು ರಾಜಸೂಯದಂಥ ಯಾಗ ಮಾಡುವುದು ಎಷ್ಟು ಕಷ್ಟವೆಂಬುದನ್ನು ವಿವರಿಸಿ, 'ರಾಜಸೂಯಮಂ ಕೇಳ್ದಲ್ಲಿಯೆ ಮುಱಿವುದು' ಎಂದು ಒಂದೇ ಮಾತಿನಲ್ಲಿ ಅವನನ್ನು ನಿರುತ್ಸಾಹಗೊಳಿಸಿದನು. ಧರ್ಮರಾಯನಿಗೆ ರಾಜಸೂಯವನ್ನು ಮಾಡಿ ತನ್ನ ತಂದೆಯ ಇಷ್ಟಾರ್ಥವನ್ನು ನೆರವೇರಿಸಬೇಕೆಂಬ ಆಸೆ ಎಷ್ಟೇ ತೀವ್ರವಾಗಿದ್ದರೂ ಕೃಷ್ಣನ ಮಾತುಗಳನ್ನು ಕೇಳಿದಾಗ ಅದನ್ನು ಪ್ರತಿಭಟಿಸುವ ಧೈರ್ಯವಾಗಲಿಲ್ಲ. ಅವನ ಮಾತನ್ನು ಅಸಡ್ಡೆ ಮಾಡಿ ಯಾಗಕ್ಕೆ ಹೂಡಿಕೊಳ್ಳುವ ಸಾಹಸವೂ ಅವನಿಗಿರಲಿಲ್ಲ. 'ಮಱುಮಾತುಗುಡಲಱಿಯದೆ ಧರ್ಮಪುತ್ರಂ ಮೌನಂಗೊಂಡುಸಿರದೆ' ಕುಳಿತುಕೊಂಡನೆಂದು ಪಂಪ ಹೇಳಿದ್ದಾನೆ. ನನ್ನಯನ ಕೃಷ್ಣ ಧರ್ಮರಾಯನನ್ನು ಇಷ್ಟು ನಿರುತ್ಸಾಹಗೊಳಿಸಿಲ್ಲ. ಅವನು ಜರಾಸಂಧನ ಬಾಹುಬಲವನ್ನು ವರ್ಣಿಸಿ ಹಿಂದೆ ಯಾವ ಯಾವ ರಾಜರು ಅವನೊಡನೆ ಕಾದಿ ಸತ್ತರೆಂಬುದನ್ನು ಧರ್ಮರಾಯನಿಗೆ ಹೇಳಿ ಅವನನ್ನು ಕೊಲ್ಲುವುದು ಮೊದಲ ಕೆಲಸವೆಂದೂ ಅದಕ್ಕೆ ತಕ್ಕ ಸಿದ್ಧತೆ ಮಾಡಿಕೊಳ್ಳಬೇಕೆಂದೂ ಧರ್ಮರಾಯನಿಗೆ ಎಚ್ಚರಿಕೆ ಹೇಳಿದ್ದಾನೆ. ಭೀಮಾ

ರ್ಜುನರು ಧರ್ಮರಾಯನಿಗೆ ಉತ್ಸಾಹ ತುಂಬಿ ರಾಜಸೂಯವನ್ನು ಕೈಕೊಳ್ಳುವಂತೆ ಒತ್ತಾಯಪಡಿಸಿದ ವೃತ್ತಾಂತವನ್ನು ಪಂಪ ನನ್ನಯರಿಬ್ಬರೂ ಹೇಳಿದ್ದಾರೆ.

ಪಂಪ ಜರಾಸಂಧನ ಜನ್ಮಕಥೆಯನ್ನು 'ವಾರಣಾಸಿಪುರಮನಾಳ್ವ ಬೃಹದ್ಬಳಂ ಪುತ್ರೋತ್ಪತ್ತಿನಿಮಿತ್ತಮಪ್ಪೊಂದು ದಿವ್ಯಪಿಂಡಮಂ ತನ್ನಿರ್ವರರಸಿಯರ್ಗೆ ಪಚ್ಚು ಕೊಟ್ಟೊಡೆ ಪುಟ್ಟಿದೆರಡು ಪೋೞುಮನಿವೇವುವೆಂದು ಬಿಸುಡೆ ಜರೆಯೆಂಬ ರಕ್ಕಸಿ ಕಂಡು ತಿನಲೆಂದೆರಡು ಪೋೞುಮನೊಂದು ಕೈಯೊಳೆ ಪಿಡಿದೊಡೊಂದೊಂದರೊಳ್ ಸಂಧಿಸಿ ಮಾನಸರೂಪುಗೊಂಡೊಡೆ ಚೋದ್ಯಂ ಒಟ್ಟು ಜರಾಸಂಧನೆಂದು ಪೆಸರಿಟ್ಟು ಬೃಹದ್ಬಳಂಗೆ ಕೊಟ್ಟ'ಳೆಂಪು ಅತ್ಯಂತ ಸಂಕ್ಷೇಪವಾಗಿ ಹೇಳಿ ಪೂರ್ಣಗೊಳಿಸಿದ್ದರೆ ನನ್ನಯಭಟ್ಟನು ಬೃಹದ್ಬಳನು ಪುತ್ರಕಾಂಕ್ಷೆಯಿಂದ ತನ್ನ ಇಬ್ಬರು ಹೆಂಡಿರೊಡನೆ ಕಾಡಿಗೆ ಹೋಗಿ ಚಂಡಕೌಶಿಕನೆಂಬ ಮುನಿಯನ್ನು ಆಶ್ರಯಿಸಿದ ಸುದ್ದಿಯಿಂದ ಆರಂಭಿಸಿ ಜರಾಸಂಧನು ಹಂಸ ಡಿಬಿಕರ ಸಹಾಯದಿಂದ ಅಪರಾಜಿತ ಪರಾಕ್ರಮನಾಗಿ ಶತ್ರುರಾಜರನ್ನು ನಿಗ್ರಹಿಸಿ ಸಾರ್ವಭೌಮನಾಗಿ ಮೆರೆದ ಕಥೆಯನ್ನು ಸುಮಾರು ಮೂವತ್ತು ಪದ್ಯಗಳಷ್ಟು ದೀರ್ಘವಾಗಿ ಬೆಳೆಸಿದ್ದಾನೆ. ಚಂಡಕೌಶಿಕ ಮುನಿಯ ಅನುಗ್ರಹ ಅವನು ಮಂತ್ರಿಸಿಕೊಟ್ಟ ಮಾವಿನಹಣ್ಣಿನಿಂದ ಮಗು ಹುಟ್ಟಿದುದು ಮತ್ತೆ ಚಂಡಕೌಶಿಕ ಬೃಹದ್ಬಳನಲ್ಲಿಗೆ ಬಂದು ಆ ಮಗು ಮುಂದೆ ಬಹಳ ಪರಾಕ್ರಮಿಯಾಗುವನೆಂದು ಭವಿಷ್ಯ ಹೇಳಿದುದು. ಈ ಅಂಶಗಳೆಲ್ಲ ಸೇರಿ ನನ್ನಯನ ಕಥನ ದೀರ್ಘವಾಗಿದೆ ಪಂಪನ ದೃಷ್ಟಿಯಲ್ಲಿ ಈ ವಿವರಗಳೆಲ್ಲ ಅನಾವಶ್ಯಕವೆನಿಸಿರಬೇಕು. ಜರಾಸಂಧನ ವಧೆಯ ವಿಷಯ ಹೇಳಬೇಕಾದಾಗ ಅವನ ತಂದೆಯ ಪುತ್ರಾಪೇಕ್ಷೆಯ ಸುದ್ದಿ ಏಕೆ ? ಪುರಾಣ ಗ್ರಂಥಗಳಲ್ಲಿ ಅಂಥ ವಿವರಣೆಗಳು ಸ್ವಾಭಾವಿಕ. ಪುರಾಣ ಶ್ರವಣ ತತ್ಪರನಾಗಿದ್ದ ಜನಮೇಜಯನಿಗೆ ಮೂಡುವ ಸಂದೇಹಗಳನ್ನೆಲ್ಲ ನಿವಾರಿಸುವುದು, ಅವನು ಕೇಳಿದ ಪ್ರಶ್ನೆಗೆಲ್ಲ ಉತ್ತರ ಕೊಡುವುದು ಪುರಾಣಜ್ಞನಾದ ವೈಶಂಪಾಯನನ ಕರ್ತವ್ಯ. ಪಂಪ ಪುರಾಣ ಹೇಳಲು ಹೊರಟಿಲ್ಲ. ರಸಾತ್ಮಕವಾದ ಕಾವ್ಯ ಕಟ್ಟುವುದು ಅವನ ಉದ್ದೇಶ. ಆ ಉದ್ದೇಶ ಸಾಧನೆಗಾಗಿ ಕವಿ ಅನವಸರವಾದ ಸಂಗತಿಗಳನ್ನೆಲ್ಲ ತೆಗೆದುಹಾಕಿ ಒಂದೊಂದು ಸನ್ನಿವೇಶವನ್ನೂ ಸುಂದರವಾಗಿ ಚಿತ್ರಿಸಲು ಶ್ರಮಿಸಿದ್ದಾನೆ. ಪ್ರಸ್ತುತ ಧರ್ಮರಾಯನು ಕೈಕೊಳ್ಳಬಯಸಿದ ರಾಜಸೂಯಯಾಗಕ್ಕೆ ಜರಾಸಂಧನು ಪ್ರಬಲ ಕಂಟಕನಾಗುವನೆಂಬುದನ್ನು ಸ್ಪಷ್ಟಪಡಿಸಿ ಅವನನ್ನು ಬೇಗನೆ ಸಂಹರಿಸುವ ಆಗತ್ಯವನ್ನು ಒತ್ತಿಹೇಳಿ ಕೃಷ್ಣನು ಭೀಮಾರ್ಜುನರನ್ನು ಕರೆದುಕೊಂಡು ಹೊರಟ ಕಥೆಯನ್ನು ಹೇಳಬೇಕು. ಪಂಪ ಅದಕ್ಕೇನೂ ಊನ ತೋರದಂತೆ ಚೊಕ್ಕವಾದ ರೀತಿಯಲ್ಲಿ ಕಥೆಯನ್ನು ನಿರೂಪಿಸಿದ್ದಾನೆ. ರಾಜಸೂಯಯಾಗ ನಿರ್ವಹಣೆಗಿರುವ ಕಷ್ಟವನ್ನು ಕೃಷ್ಣ ಹೇಳಿದಾಗ ಧರ್ಮಜನು ನಿರುತ್ಸಾಹದಿಂದ ಮೌನ ಧರಿಸಲು ಭೀಮಾರ್ಜುನರು ಧೀರ ವಾಕ್ಯಗಳನ್ನಾಡಿ ಅವನ ವಿರಕ್ತಿಯನ್ನು ಹೋಗಲಾಡಿಸಿದರು, ಅವರ ಉತ್ಸಾಹವನ್ನು ಸದುಪಯೋಗಪಡಿಸಿಕೊಂಡು ಜರಾಸಂಧನ ಕೊಲೆಯ

ಸೂಚನೆಯನ್ನು ಕೊಟ್ಟು ಅವರಿಗೆ ಮಾರ್ಗದರ್ಶಕನಾಗಿ ಶ್ರೀಕೃಷ್ಣನು ರಾಜಸೂಯದ ಸಿದ್ಧತೆಗೆ ಮೊದಲು ಮಾಡಿದನು. ಭೀಮನಿಂದಲ್ಲದೆ ಬೇರೆ ಯಾರಿಂದಲೂ ಜರಾಸಂಧನು ಸಾಯನೆಂಬುದು ಕೃಷ್ಣನಿಗೆ ತಿಳಿದಿತ್ತು. ಅನೇಕ ರಾಜರು ಜರಾಸಂಧನೊಡನೆ ಕಾದಿ ಸೋತು ಸೆರೆ ಸಿಕ್ಕಿ ಅವನ ನಗರದಲ್ಲಿ ಬಂಧನದಲ್ಲಿದ್ದರು. ಜರಾಸಂಧನನ್ನು ಕೊಂದು ಆ ರಾಜರನ್ನೆಲ್ಲ ಸೆರೆಯಿಂದ ಬಿಡಿಸಿದರೆ ಅವರೆಲ್ಲ ಕೃತಜ್ಞರಾಗಿ ಧರ್ಮರಾಯನ ರಾಜಸೂಯಕ್ಕೆ ಸಹಾಯಕರಾಗುವರೆಂದು ಕೃಷ್ಣನ ಯೋಚನೆ. ದುಷ್ಟನಿಗ್ರಹ, ಶಿಷ್ಟಸಂರಕ್ಷಣೆ, ಧರ್ಮರಾಯನ ರಾಜಸೂಯಯಾಗಕ್ಕೆ ಸಿದ್ಧತೆ, ಈ ಮೂರು ಉದ್ದೇಶಗಳನ್ನೂ ಸಾಧಿಸುವ ಹಂಚಿಕೆ ಅವನದು.

ಪಂಪನು ರಾಜಸೂಯವನ್ನು ಕುರಿತ ಮಂತ್ರಾಲೋಚನೆಯನ್ನು ಸ್ವಲ್ಪ ದೀರ್ಘವಾಗಿ ಪ್ರಸ್ತಾಪಿಸಿ ಜರಾಸಂಧನ ವಧೆಯನ್ನು ಒಂದೇ ಪದ್ಯದಲ್ಲಿ ಹೇಳಿದ್ದಾನೆ. ಭೀಮಾರ್ಜುನರನ್ನು ಜತೆಯಲ್ಲಿ ಕರೆದುಕೊಂಡು ಮಧುರಾಪುರಕ್ಕೆ ಹೋಗಿ ಜರಾಸಂಧನನ್ನು ಧರ್ಮಯುದ್ಧಕ್ಕೆ ಕರೆಯಿಸಿದನಂತೆ! ಭೀಮ ಜರಾಸಂಧರು 'ಕುಲಶೈಲಂ ಕುಲಶೈಲದೊಳ್ ಕಲುಷದಿಂ ಪೋರ್ವಂತೆ' ಮಲ್ಲಯುದ್ಧ ನಡೆಸಿದರು ಕೊನೆಗೆ ಭೀಮನು 'ನೆಯ್ದಿಲ ಕಾವಂ ಸೀಳ್ವತೆಱದಿಂ ಸೀಳ್ದಂ ಜರಾಸಂಧನಂ!'

ನನ್ನಯ ಭಟ್ಟ ಭಾರತದ ಈ ಪ್ರಕರಣವನ್ನು ಇಷ್ಟು ಹ್ರಸ್ವವಾಗಿಸಿಲ್ಲ. 'ಜರಾಸಂಧನನ್ನು ಕೊಂದು ಅವನಲ್ಲಿ ಸೆರೆಯಾಳುಗಳಾಗಿದ್ದ ಅನೇಕಾನೇಕ ರಾಜರನ್ನು ಬಿಡುಗಡೆ ಮಾಡಿ ಧರ್ಮರಾಯನ ಕೆಲಸ ನಿಷ್ಕಂಟಕವಾಗಿ ನೆರವೇರುವಂತೆ ಮಾಡುವ ಉದ್ದೇಶದಿಂದ ಕೃಷ್ಣ ಭೀಮ ಪಾರ್ಥರು ವಿಪ್ರವೇಷಧಾರಿಗಳಾಗಿ ಜರಾಸಂಧನ ವಾಸಸ್ಥಾನವಾದ ಗಿರಿವ್ರಜ[1]ಕ್ಕೆ ಹೊರಟು ದಾರಿಯಲ್ಲಿ ಆ 'ಕೃತಕ ಸ್ನಾತಕ' ರು ದಾಟಿದ ಹೊಳೆಗಳು ಪರ್ವತಗಳನ್ನೆಲ್ಲ ಹೆಸರಿಸಿ ಮಹಾರ್ಘಸಂಪದ್ಯುಕ್ತವಾದ ಗಿರಿವ್ರಜವನ್ನು ಸೇರಿದ ಕಥೆಯನ್ನು ಆಂಧ್ರಭಾರತಕರ್ತ ವಿಸ್ತಾರವಾಗಿ ಹೇಳಿ ಆ ಅಸುರನ ರಾಜಧಾನಿಗೆ ಐದು ಪರ್ವತಗಳು ಶೂರ ಭಟರಂತೆ ಸದಾ ಕಾವಲಿದ್ದುದರಿಂದ ಅದಕ್ಕೆ ಗಿರಿವ್ರಜ ಎಂಬ ಹೆಸರು ಬಂದಿತೆಂದು ತಿಳಿಸಿದ್ದಾನೆ. ಗಿರಿವ್ರಜ ದುರ್ಗಕ್ಕೆ ಹಿಂದೆ ಗೌತಮಾನುಗ್ರಹವಾದ ಕಥೆಯನ್ನೂ ಸೂಚಿಸಿ ನನ್ನಯ ಆ ನಗರದ ಬಳಿಯ ಚೈತ್ಯಕ ಗಿರಿ ಶೃಂಗವನ್ನೇರಿ ಪಾಂಡವರು ಅಲ್ಲಿನ ಮೂರು ಭೇರಿಗಳನ್ನು ಒಡೆದುಹಾಕಿ ನಗರವನ್ನು ಹೊಕ್ಕು ಅಲ್ಲಿನ ಮಾಲಾಕಾರರ ಮನೆಗಳಿಂದ ಬಲಾತ್ಕಾರವಾಗಿ ಹೂಗಳನ್ನೂ ಪರಿಮಳವನ್ನೂ ಕಸಿದುಕೊಂಡು ಜರಾಸಂಧನ ಅರಮನೆಯನ್ನು ಅಮಾರ್ಗದಲ್ಲಿ ಪ್ರವೇಶಿಸಿದ ವೃತ್ತಾಂತವನ್ನು ವಿವರಿಸಿದ್ದಾನೆ.

---

[1] ಪಂಪ ಗಿರಿವ್ರಜವನ್ನು ಹೇಳಿಲ್ಲ. 'ಮಧುರಾಪುರದಿನೆಯ್ದಿ ಬೃಹಮದ್ಬಳತನೂಜನಲ್ಲಿಗೆ ಧರ್ಮಯುದ್ಧಮಂ ಬೇಡಿ ಅಟ್ಟಿ'ದನೆಂದು ಪಂಪನ ವರ್ಣನೆ. ಶ್ರೀಕೃಷ್ಣ ದ್ವಾರಕೆಯನ್ನು ನಿರ್ಮಿಸಿ ಯಾದವರೆಲ್ಲ ಅಲ್ಲಿ ಸೇರಿದ ಮೇಲೆ ಮಧುರೆ ಜರಾಸಂಧನ ವಶವಾಗಿರಬಹುದೇನೊ?

ಅವೇಳೆಯಲ್ಲಿ ಅಮಾರ್ಗದಲ್ಲಿ ಅರಮನೆಯನ್ನು ಹೊಕ್ಕುಬಂದ ಈ 'ಸ್ನಾತಕ' ರನ್ನು ಕಂಡು ಜರಾಸಂಧನು ಪ್ರತ್ಯುತ್ಥಾನಮಾಡಿ ಅರ್ಘ್ಯ ಪಾದ್ಯಗಳನ್ನು ನೀಡಿದನಂತೆ! ಆದರೆ ಅವರು ಆ ಸತ್ಕಾರವನ್ನು ಸ್ವೀಕರಿಸಲಿಲ್ಲ. ಅದರಿಂದ ಜರಾಸಂಧನಿಗೆ ಸಂಶಯ ಬಂತು. ಸಾಲದುದಕ್ಕೆ ಅವರು ಗಂಧ ಮಾಲ್ಯಗಳನ್ನು ಧರಿಸಿದ್ದರು. ಅದು ಸ್ನಾತಕರ ಲಕ್ಷಣವಲ್ಲ. ಆಗ ಆ ಅಸುರನಿಗೂ ಆ ಕಪಟ ಬ್ರಾಹ್ಮಣರಿಗೂ ವಿವಾದ ಬೆಳೆದು ಕಡೆಗೆ ಕೃಷ್ಣನು 'ನಿನ್ನಂಥ ಪಾಪಕರ್ಮಿಗಳನ್ನು ಉಪೇಕ್ಷಿಸಿದರೆ ಅಖಿಲ ಧರ್ಮರಕ್ಷಣಕ್ಷಮರಾದ ನಮಗೆ ಆ ಪಾಪ ತಟ್ಟುತ್ತದೆಯೆಂದು ಪಾಪಭಯದಿಂದ ನಿನ್ನನ್ನು ನಿಗ್ರಹಿಸಲು ಬಂದೆವು' ಎಂದು ತಮ್ಮ ಆಗಮನದ ಉದ್ದೇಶವನ್ನು ತಿಳಿಸಿದನು. ತಮ್ಮ ಮೂವರಲ್ಲಿ ಯಾರಾದರೂ ಒಬ್ಬರೊಡನೆ ಮಲ್ಲಯುದ್ಧ ಮಾಡಬೇಕೆಂದು ಕೃಷ್ಣನು ಸೂಚಿಸಲು ವೀರನಾದ ಜರಾಸಂಧನು ಅವರಲ್ಲಿ ಹೆಚ್ಚು ಬಲಿಷ್ಠನಾದ ಭೀಮನನ್ನೇ ಆರಿಸಿಕೊಂಡನು. ಭೀಮ ಜರಾಸಂಧರ ಕಾಳಗ ತೊಡಗಿ ಹದಿನಾಲ್ಕು ದಿನ ಘನ ಘೋರವಾಗಿ ನಡೆದು ಕಡೆಯ ದಿನ ಭೀಮ ವಾಯುದೇವನನ್ನು ಸ್ಮರಿಸಿ ಜರಾಸಂಧನನ್ನು ಹಿಡಿದು ಗಿರ್ರನೆ ತಿರುಗಿಸಿ ರಪ್ಪನೆ ನೆಲಕ್ಕೆ ಹೊಡೆದು ಅವನ ದೇಹದ ಸಂಧಿ ಸಂಧಿಗಳ ಮೂಳೆಗಳನ್ನೆಲ್ಲ ಮುರಿದು ಕೊಂದು ಅವನ ಕಳೇಬರವನ್ನು ಊರಬಾಗಿಲಲ್ಲಿ ಬಿಗಿದನು.

ತರುವಾಯ ಆ ನಗರದಲ್ಲಿ ಸೆರೆಯಲ್ಲಿದ್ದ ರಾಜರ ಬಿಡುಗಡೆ, ಜರಾಸಂಧನ ಮಗನ ರಾಜ್ಯಾಭಿಷೇಕ, ನಡೆದುವು. ಆ ರೀತಿ ಬಿಡುಗಡೆ ಹೊಂದಿದ ರಾಜರೆಲ್ಲಾ ಕೃಷ್ಣನನ್ನು ಕೃತಜ್ಞತೆಯಿಂದ ವಂದಿಸಿ, ಅವನ ಆದೇಶದಂತೆ ಧರ್ಮರಾಯನು ಕೈಕೊಂಡ ಯಾಗದ ಯಶಸ್ಸಿಗೆ ದುಡಿಯುವ ಭರವಸೆ ನೀಡಿ, ಸ್ವರಾಜ್ಯಗಳಿಗೆ ಹೊರಟು ಹೋದರು. ಆ ತರುವಾಯ ಕೃಷ್ಣನು ಭೀಮ ಪಾರ್ಥರೊಡನೆ ರಥಾರೂಢನಾಗಿ ಇಂದ್ರಪ್ರಸ್ಥವನ್ನು ಸೇರಿ ಧರ್ಮರಾಯನನ್ನು ಕಂಡು ಮುಂದಿನ ಕಾರ್ಯಕ್ರಮವನ್ನು ವಿವರಿಸಿ ಮೊದಲು ಉಳಿದ ಪೃಥ್ವೀಪಾಲರನ್ನು ಗೆದ್ದು ಕಪ್ಪ ಕಾಣಿಕೆಗಳನ್ನು ತರುವ ಕೆಲಸವನ್ನು ಭೀಮಾರ್ಜುನ ನಕುಲ ಸಹದೇವರಿಗೆ ವಹಿಸಿದನು.

ಮುಂದಿನ ಕಥೆ ಪಾಂಡವರ ದಿಗ್ವಿಜಯ. ವ್ಯಾಸಭಾರತದಲ್ಲಿ ಪಾಂಡವರ ದಿಗ್ವಿಜಯ ವೃತ್ತಾಂತ ಎಂಟು ಅಧ್ಯಾಯಗಳಷ್ಟು ದೀರ್ಘವಾಗಿ ಬೆಳೆದು 'ದಿಗ್ವಿಜಯ ಪರ್ವ'ವೆಂದೇ ಹೆಸರಾಗಿದೆ. ಆದರೆ ಪಂಪನಾಗಲಿ ನನ್ನಯನಾಗಲಿ ಇದನ್ನು ಅಷ್ಟು ವಿಸ್ತಾರವಾಗಿ ಹೇಳಿಲ್ಲ. ಆ ವೀರ ಸಹೋದರರುಗಳು ಕಾದಿ ಗೆದ್ದ ರಾಜರುಗಳ ಹೆಸರುಗಳನ್ನೂ ಅವರಿಂದ ಪಡೆದುಕೊಂಡ ಕಾಣಿಕೆಗಳನ್ನೂ ನನ್ನಯಭಟ್ಟನು ಪಟ್ಟಿ ಮಾಡಿದಂತೆ ಹೇಳಿದ್ದಾನೆ. ಪಂಪಕವಿಯು ಅಷ್ಟು ವಿವರಗಳನ್ನೂ ಹೇಳಲು ಬಯಸಲಿಲ್ಲ. 'ನಾಲ್ಕು ಸಮುದ್ರಂಗಳ ನೀರುಟಿಯೆ ರತುನಂಗಳುಮಂ ದಿಶಾಗಜಂಗಳುಟಿಯೆ ಗಜಂಗಳುಮಂ ಆದಿತ್ಯನ ಕುದುರೆಗಳುಟಿಯೆ ಕುದುರೆಗಳುಮಂ ದೇವೇಂದ್ರಸುರಭಿಯುಮೀಶ್ವರನ ನಂದಿಯುಮುಟಿಯೆ ಗೋವೃಜಂಗಳುಮನಿಂಪು

ಪ್ರಸ್ಥಪುರಕ್ಕೆ ತೆರಳ್ದಿ 'ದರೆಂದು ಅವರ ದಿಗ್ವಿಜಯ ಫಲಗಳನ್ನು ಸೂಕ್ಷ್ಮವಾಗಿ ಹೇಳಿ ಮುಗಿಸಿ ಅರ್ಜುನನ ಸಾಧನೆಗಳನ್ನು ಮಾತ್ರ ಕೊಂಚ ವಿವರವಾಗಿ ಹೇಳಿದ್ದಾನೆ. ವಿಕ್ರಮಾರ್ಜುನನು ಕುಬೇರನಿಂದ ಕಪ್ಪವನ್ನು ಕೊಳ್ಳಲು ಹೋಗುವವನಂತೆ ಉತ್ತರ ದಿಕ್ಕಿಗೆ ದಂಡಯಾತ್ರೆ ಹೊರಟಾಗ ವೈರಿರಾಜರ 'ಬೆಳ್ಗೊಡೆ ನೋಡೆ ನೋಡೆ ನಿಂದುರಿದವು !' ಅರ್ಜುನನು ನಾನಾ ರಾಜರನ್ನು ಗೆದ್ದು ಅನೇಕ ಪಾರ್ವತೀಯರನ್ನು ನಿಗ್ರಹಿಸಿ ಮೇರು ಪರ್ವತದ ದಕ್ಷಿಣದ ತಪ್ಪಲಲ್ಲಿ ಹರಿಯುವ ಜಂಬೂನದವೆಂಬ ನದಿಯಲ್ಲಿ ಹುಟ್ಟಿದ ಹೊನ್ನಿನ ಹಾಸರೆಗಳನ್ನೇ ಕಂಡು ಅವುಗಳನ್ನು ಗಾಂಡೀವದ ಕೊಪ್ಪುಗಳಿಂದಲೇ ಬಂಗಾರದ ರೇಣುಗಳನ್ನೂ ಶಿಲೆಗಳನ್ನೂ ರಾಶಿ ಹಾಕಿ ಅವುಗಳನ್ನು ಕತ್ತರಿಸಿ ರಾಜಧಾನಿಗೆ ಸಾಗಿಸಲು ಘಟೋತ್ಕಚನನ್ನೂ ಅವನ ದಾನವ ಸೇನೆಯನ್ನೂ ನೇಮಿಸಿದನಂತೆ ! ನನ್ನಯಭಟ್ಟನು ಅರ್ಜುನ ಮೇರುಪರ್ವತದ ತಪ್ಪಲಿನ ಜಂಬೂನದಿಯನ್ನು ಸೇರಿದ ಕಥೆಯನ್ನು ಹೇಳಿರುವನಾಗಲಿ ಅಲ್ಲಿ ಬಂಗಾರದ ಬಂಡೆಗಳನ್ನು ಕಂಡ ವಿಚಾರವನ್ನು ಹೇಳಿಲ್ಲ. ಅರ್ಜುನನಿಗೆ ಯುದ್ಧ ವಿಜಿತರಾದ ರಾಜಮಹಾರಾಜರು ಕಾಣಿಕೆಯಾಗಿ ಕೊಟ್ಟ ಕನಕರಾಶಿಗಳೇ ಬೆಟ್ಟದಹಾಗೆ ಬೆಳೆದಿರಬೇಕು!

ನಕುಲನು ದಕ್ಷಿಣದಿಕ್ಕಿಗೆ ಹೊರಟು ಅನೇಕ ಉದ್ಧತರಾದ ರಾಜರನ್ನು ಸೆಣಸಿ ಗೆದ್ದು ಯಥೇಷ್ಟವಾಗಿ ಧನಕನಕಗಳನ್ನು ಸಂಗ್ರಹಿಸಿ ಲಂಕೆಯ ಮೇಲೆ ದಾಳಿಯಿಟ್ಟನಂತೆ. ಆದರೆ ಅಲ್ಲಿ ಅರಸನಾಗಿದ್ದ ವಿಭೀಷಣ ಅವನಿಗೆ ಅಂಜಲಿಲ್ಲ. ಆಗ ನಕುಲ ನೆರವಿಗಾಗಿ ವಿಕ್ರಮಾರ್ಜುನನಿಗೆ ಹೇಳಿ ಕಳುಹಿಸಿದನಂತೆ ! ನಕುಲನ ಕರೆಗೆ ಓಗೊಟ್ಟು ಅಲ್ಲಿಗೆ ಹೋದ ಅರ್ಜುನನು ವಿಭೀಷಣನನ್ನು ಬಹಳ ಸುಲಭವಾಗಿ ಗೆದ್ದನು. ಆ ಕಥೆಯನ್ನು ಪಂಪ ಕವಿ ವರ್ಣಿಸಿರುವ ರೀತಿ ಬಹಳ ಸುಂದರವಾಗಿದೆ.

> ತೊಂಡಿನೊಳುರ್ಕಿ ಕೆಟ್ಟ ದಶಕಂಠನ ನಕ್ಕಟ ಕೊಂಡ ಪೆರ್ಮೆರುಳ್
> ಕೊಂಡುದೆ ತನ್ನುಮಂ ಬಿಸುಡು ನೀಂ ಬಲಗರ್ವಮನಾ ಸಮುದ್ರಮೇ
> ಬಂಡವೊ ಪಾಯ್ದೊಡೇಂದು ನಿಜಸಾಯಕದೊಳ್ ಬರೆದೆಚ್ಚು ಕಪ್ಪಮಂ
> ಕೊಂಡನವುಂಕಿ ಲಂಕೆಯ ವಿಭೀಷಣನಂ ಪರಸೈನ್ಯ ಭೈರವಂ
>
> (ಪಂಪಭಾರತ 6–33)

ನನ್ನಯನ ವಿಭೀಷಣ ಪಾಂಡವರನ್ನು ಪ್ರತಿಭಟಿಸಲೇ ಇಲ್ಲ. ಸಹದೇವನು ಧರ್ಮರಾಯನು ಕೈಕೊಂಡಿರುವ ರಾಜಸೂಯ ಯಾಗದ ಸುದ್ದಿ ತಿಳಿಸಿ ಅವನೂ ಸಹ ಕರಿಸತಕ್ಕದ್ದೆಂದು ದೂತರ ಮೂಲಕ ಹೇಳಿಕಳುಹಿಸಿದ ಒಡನೆಯೇ ಅವನು 'ಸಹದೇವ ಶಾಸನ' ವನ್ನು ಶಿರಸಾವಹಿಸಿ ಅದರಂತೆ ನಡೆದುಕೊಂಡನು. ಸಹದೇವನಿಗೆ ವಿಭೀಷಣನೊಡನೆ ಕಾದುವ ಸಂದರ್ಭವೇ ಒದಗಲಿಲ್ಲ. ಇನ್ನು ಪರಸೈನ್ಯ ಭೈರವನ ಸಹಾಯವನ್ನು ಬೇಡುವ ಪ್ರಸಂಗವೆಲ್ಲಿಂದ ಬರಬೇಕು ? ಇದು ಪಂಪನ ಸ್ವಂತ ಕಲ್ಪನೆ ; ವಿಕ್ರಮಾರ್ಜುನನ ರಣಕೀರ್ತಿಯನ್ನು ವರ್ಣಿಸಲು ಅನುಕೂಲವಾದ ಒಂದು ರಾಮಣೀಯಕವಾದ ಘಟನೆ. ಅರ್ಜುನ ವಿಭೀಷಣನಲ್ಲಿಗೆ ದೂತರನ್ನು ಕಳುಹಿಸುವ

ಗೋಜಿಗೇ ಹೋಗಲಿಲ್ಲ. ಅವನ ಒಂದು ಬಾಣವೇ ಅದಕ್ಕೆ ಸಾಕಾಯಿತು. ಬಾಣದ ಮೇಲೆಯೇ ಅರ್ಜುನ ತನ್ನ ಸಂದೇಶವನ್ನು ಬರೆದು ಕಳುಹಿಸಿದನು! ಹಿಂದೆ ದಶಕಂಠನಿಗೆ ಆದ ದುರ್ಗತಿಯನ್ನು ಜ್ಞಾಪಿಸಿ ಸಮುದ್ರವನ್ನು ದಾಟುವುದು ದೊಡ್ಡ ಸಂಗತಿಯಲ್ಲ ಎಂದು ಹೇಳಿದ ಮಾತ್ರದಿಂದ ವಿಭೀಷಣ ಭೀತನಾದನು. ಅಕಳಂಕ ರಾಮನಿಗೆ ಅವನು ಶರಣಾಗತನಾಗಿ ಕಪ್ಪಕಾಣಿಕೆಗಳನ್ನು ತಂದು ಒಪ್ಪಿಸಿದನು. ಅವನ ಬಾಣವೇ ಸಮುದ್ರವನ್ನು ದಾಟಿ ಬಂದಿರುವಾಗ 'ಅಕಳಂಕರಾಮ' ನೆನಿಸಿದ ವಿಕ್ರಮಾರ್ಜುನನು ಅದನ್ನು ದಾಟುವುದು ದೊಡ್ಡ ವಿಚಾರವೆ ?

## ಯಾಗ

ಭೀಮಾದಿಗಳು ಶತ್ರುರಾಜರನ್ನು ನಿಗ್ರಹಿಸಿ ವಿಪುಲವಾದ ಧನಕನಕಗಳನ್ನು ತಂದು ಇಂದ್ರಪ್ರಸ್ಥದಲ್ಲಿ ಶೇಖರಿಸಿದರು. ಅನೇಕ ಮಿತ್ರರಾಜರು ಧರ್ಮರಾಯನು ಕೈಕೊಳ್ಳಲಿದ್ದ ಯಜ್ಞಕ್ಕೆ ಧಾರಾಳವಾಗಿ ನೆರವು ನೀಡಿದರು. ಯಜ್ಞಕ್ಕೆ ಬೇಕಾದ ಸಮಸ್ತ ಸಾಮಗ್ರಿಗಳೂ ಸಿದ್ಧವಾದವು. ನಗರದ ಉತ್ತರ ದಿಕ್ಕಿನಲ್ಲಿ ಸಾವಿರ ಯೋಜನಗಳಷ್ಟು ವಿಸ್ತಾರವಾದ ಯಜ್ಞಶಾಲೆ ನಿರ್ಮಾಣವಾಯಿತು. ಶ್ರೀಕೃಷ್ಣ ಬಲರಾಮಾದಿಗಳು ದ್ವಾರಕೆಯಿಂದ ಬಂದರು. ಧರ್ಮರಾಯನು ಹಸ್ತಿನಾವತಿಗೆ ಹೇಳಿ ಕಳುಹಿಸಿ ದುರ್ಯೋಧನಾದಿ ನೂರ್ವರು ಸಹೋದರರನ್ನೂ ಭೀಷ್ಮದ್ರೋಣ ವಿದುರಾದಿ ಹಿರಿಯರನ್ನೂ ಕರೆಸಿಕೊಂಡನು. ನಾನಾ ದೇಶಗಳಿಂದ ರಾಜ ಮಹಾರಾಜರು ಗಳೆಲ್ಲ ಯಾಗ ಸಂದರ್ಶನಾರ್ಥವಾಗಿ ಬಂದು ಸೇರಿದರು. ಆಗ ಧರ್ಮರಾಯನು ಶ್ರೀಕೃಷ್ಣನು ದೀಕ್ಷಿತನಾಗಿ ತನಗೆ ಪ್ರಿಯವಾದ ಯಾಗ ಮಾಡಬೇಕೆಂದು ಸೂಚಿಸಿದ ನಂತೆ ಆದರೆ ಅವನು ಆ ಸೂಚನೆಯನ್ನು ಮನ್ನಿಸದೆ ಧರ್ಮರಾಯನೇ ದೀಕ್ಷೆವಹಿಸಿ ರಾಜಸೂಯವನ್ನು ಆರಂಭಿಸಬೇಕೆಂದು ಹೇಳಿದನು. ಅದರಂತೆ ಧರ್ಮಪುತ್ರನು ಸುಮುಹೂರ್ತದಲ್ಲಿ ಯಜ್ಞಮಂಟಪವನ್ನು ಪ್ರವೇಶಿಸಿ 'ಶಮೀ ಪಾರ್ಶ್ವತಳ ದಕ್ಷಿಣಾ ಶಾಲೆಯೊಳ್ ಹಿರಣ್ಯದಾನಮಂ ಮಾಡಿ ವೇದಸಹಿತಂಗಳಪ್ಪಾಹವನೀಯ ದಕ್ಷಿಣ ಗಾರ್ಹಪತ್ಯಂಗಳೆಂಬ ಮೂಱುಂ ಕೊಂಡಂಗಳೊಳುತ್ತರ ವೇದಿಯೊಳ್ ಅಗ್ನಿಸಂಧಾನಂಗೆಯ್ದು ವ್ಯಾಸಕಶ್ಯಪ ವಿಶ್ವಾಮಿತ್ರ ಭಾರದ್ವಾಜ ಬ್ರಹ್ಮಾಧ್ವರ್ಯಾಗ್ನೀಧ್ರ ಮೈತ್ರಾವರುಣಾಗ್ನಿ ಪರಿಚಾರಕೋದ್ಗಾತೃ ಹೋತೃ ಜಮದಗ್ನ್ಯಾದಿಗಳಪ್ಪ ಷೋಡಶರ್ತ್ವಿಜರ್ಕಳಿಂ ಬೇಳಲ್ವೇಳ್ದು ಸಪತ್ನಿಯಜಮಾನನಾಗಿರ್ದನ್'[1]. ನನ್ನಯಭಟ್ಟ ಈ ಪ್ರಸಂಗವನ್ನು ಚಿತ್ರಿಸುವಾಗ ಇನ್ನಷ್ಟು ಮಂದಿ ಋಷಿಗಳ ಹೆಸರುಗಳನ್ನು ಹೇಳಿ ಧರ್ಮರಾಯನಿಗೆ ಅವರು ಪ್ರೀತಿಯಿಂದ ಆಶೀರ್ವಾದ ಮಾಡಿದ ವಿವರಗಳನ್ನು ತಿಳಿಸಿದ್ದಾನೆ. ಬ್ರಹ್ಮಜ್ಞರಾದ ಬ್ರಾಹ್ಮಣರು ಮಾಡಿದ ವೇದನಿನಾದವನ್ನು ನನ್ನಯ ವರ್ಣಿಸಿದ್ದಾನೆ.

[1] ಪಂಪಭಾರತ 6–33 (ವ)

ಯಜ್ಞಮಂಟಪದಲ್ಲಿ ಬ್ರಾಹ್ಮಣರ ನಡುವೆ ಯಜ್ಞದೀಕ್ಷಿತನಾಗಿ ಕುಳಿತಿದ್ದ ಧರ್ಮರಾಯ ನನ್ನು ನನ್ನಯ ಬ್ರಹ್ಮರ್ಷಿಪರೀತನಾದ ಬ್ರಹ್ಮನಿಗೆ ಹೋಲಿಸಿದ್ದಾನೆ.[2] ಯಜ್ಞ ಕಾರ್ಯಕ್ಕೆ ಹೋತೃ ಉದ್ಗಾತೃ ಅಧ್ವರ್ಯು ಬ್ರಹ್ಮ ಮೊದಲಾದ ಸ್ಥಾನಗಳಿಗೆ ಧರ್ಮ ರಾಯನು ಯಾರು ಯಾರನ್ನು ನೇಮಿಸಿದ್ದನೆಂಬುದನ್ನು ನನ್ನಯ ವಿವರವಾಗಿ ಹೇಳಿ ದ್ದಾನೆ. ಆದರೆ ಯಜ್ಞಕಾರ್ಯವನ್ನಾಗಲಿ ಅಲ್ಲಿ ನಡೆದ ಹವನವನ್ನಾಗಲಿ ವರ್ಣಿಸದೆ ನನ್ನಯಭಟ್ಟ 'ಸರ್ವಕ್ರಿಯಾ ಸಮಗ್ರಂಬಯಿ ಜಗನ್ನಾಥ ರಕ್ಷಿತಂಬಯಿ ಸಕಲ ಜನಾನಂದಕರಂಬಯಿ ರಾಜಸೂಯಂ ಬತಿರಮಣೀಯಂ' ಆಯಿತೆಂದು ಅತ್ಯಂತ ಸಂಗ್ರಹವಾಗಿ ಹೇಳಿ ಮುಗಿಸಿಬಿಟ್ಟದ್ದಾನೆ. ಆದರೆ ಕನ್ನಡ ಕವಿ ಪಂಪನು ತಾನು ಜೈನನಾದರೂ ಆ ಯಜ್ಞದಲ್ಲಿ ನಡೆದ ಹೋಮಕಾರ್ಯವನ್ನು ಬಹಳ ಅಂದವಾಗಿ ವರ್ಣಿಸಿದ್ದಾನೆ; ಅದಕ್ಕಾಗಿ ಐದು ಪದ್ಯಗಳನ್ನು ವಿನಿಯೋಗಿಸಿದ್ದಾನೆ.[1] 'ಯಜ್ಞ ವಿದ್ಯಾಪಾರಗ'ರಾದ ಮಹರ್ಷಿಗಳ 'ಸ್ವಧಾಕಾರ ವಷಟ್ಕಾರ ಸ್ವಾಹಾಕಾರೋಂಕಾರ ಧ್ವನಿ'ಗಳೊಡನೆ ಆಹುತಿ ಧೂಮವೂ ಮೇಲಕ್ಕೆ ನೆಗೆಯಿತಂತೆ! ಆ ಹೋಮಧೂಮ ಕನಕಮಯವಾದ ಯೂಪಸ್ತಂಭವನ್ನು ಮುತ್ತಿದ್ದುದು ಮೇಘಗಳು ಕನಕಪರ್ವತ ವನ್ನು ಮುತ್ತುವಂತೆ ಕಂಡಿತು! ಅಪಾರವಾದ ಈ ಹೋಮಧೂಮದಿಂದ ದೇವ ಲೋಕದ ಧವಳಗಂಗೆ ಯಮುನೆಯಂತೆ ಕೃಷ್ಣವರ್ಣವಾಯಿತು! ಅಗಣಿತವಾದ ಆಜ್ಯಾಹುತಿಯಿಂದ ಜಾತವೇದನೂ ಸಕಲದೇವತೆಗಳೂ ಸಂತೃಪ್ತರಾದರು. ಯುಧಿಷ್ಠಿರನ ಯಾಗದ ಮಹಾಮಹಿಮೆಯನ್ನು ದೇವೇಂದ್ರನಿಗೆ ತಿಳಿಸಲೆಂದೇ ಹೋಮಧೂಮಗಂಧ ಸ್ವರ್ಗಕ್ಕೆ ಹೋಯಿತು. 'ಅದೇಂ ಪೆಂಪೋ ಮಹಾಯಜ್ಞದಾ' ಎಂದು ಪಂಪ ಯಜ್ಞವೈಭವವನ್ನು ಕುರಿತು ಉಗ್ಗಡಿಸಿದ್ದಾನೆ.

ಧರ್ಮರಾಯನು ಮೂವತ್ತೆರಡುದಿನ ಯಜ್ಞದೀಕ್ಷಿತನಾಗಿದ್ದು ಯಜ್ಞಕಾರ್ಯ ವನ್ನು ಸಾಂಗವಾಗಿ ಮಾಡಿ ದಕ್ಷಿಣಾಕಾಲದಲ್ಲಿ ನಡೆಸಿದ ದಾನವೈಭವವನ್ನು ಪಂಪ ಓದುಗರ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ. ಹೊನ್ನಿನ ಬೆಟ್ಟಗಳನ್ನೇ ಅಲ್ಲಿ ಒಟ್ಟಿದ್ದ ರಂತೆ! ಅವುಗಳನ್ನು ದಾನಮಾಡುವಾಗ ಧರ್ಮರಾಯನು 'ಏವುದೋ ತೂಕಂ? ಎನ್ನ ಕೆಯ್ಸುಗ್ಗಿಟ್ಟಳೆ ಕೊಳ್ಳಿಂ' ಎಂದು ನುಡಿದು ಬೊಗಸೆಗಳಲ್ಲಿ ತುಂಬಿ ದೀನಾನಾಥರಿಗೆ ಚಿನ್ನ ವನ್ನು ಕೊಟ್ಟನು. ಋತ್ವಿಜರಿಗೆ ತೃಪ್ತಿಯಾಗುವಷ್ಟು ಧನಕನಕಗಳನ್ನು ಯಮ ನಂದನನು ನೀಡಿಯಾಗಿತ್ತು. ಯಾಗಕ್ಕೆ ಬಂದ ವಿಪ್ರರು ತಮಗೆ ಲಭಿಸಿದ ಧನಕನಕ ಗಳನ್ನು ತೆಗೆದಿಟ್ಟುಕೊಳ್ಳಲು ಎಡೆಯಿಲ್ಲದೆ ಒಂದುಕಡೆ ರಾಶಿಹಾಕಿ ಕಾಯುತ್ತಿದ್ದರಂತೆ! ಧನಕನಕಗಳು ಮಾತ್ರವೇ ಅಲ್ಲದೆ ಧರ್ಮರಾಯನು ಯಾರು ಏನು ಬೇಡಿದರೆ ಅದನ್ನು ನೀಡುವವನಾಗಿದ್ದನು. ಆನೆ ಬೇಕಾದವರಿಗೆ ಆನೆ, ಕುದುರೆಗಳನ್ನು ಬಯಸಿದವರಿಗೆ

---

[1] ಸಭಾ I–291

[2] ಪಂಪಭಾರತ 6—(34–38)

ಬೇಕಾದಷ್ಟು ಜಾತ್ಯಶ್ವಗಳು, ರತ್ನಬೇಕಾದವರಿಗೆ ಮಣಿಸಮೂಹ! ‘ ಕಃ ಕೇನಾರ್ಥೀ ಕೋದರಿದ್ರಃ ’ ಎಂದು ಎಲ್ಲರನ್ನೂ ಕರೆದು ಕರೆದು ಯಥೇಚ್ಛವಾಗಿ ಅರ್ಥಿಗಳು ಬೇಡಿದುದನ್ನು ಕೊಟ್ಟು ಧರ್ಮಜನು ತೃಪ್ತಿಪಡಿಸಿದನು. ‘ ದಾನಂ ದಾತೃವಶಂ ’ ಎಂದು ಹೇಳುವುದುಂಟು. ಆದರೆ ಧರ್ಮರಾಯನು ದಾನ ಕೊಡಲು ಹೊರಟಾಗ ಅರ್ಥಿಗಳಿಗೇ ಕೇಳುವ ಸ್ವಾತಂತ್ರ್ಯ! ಅವರು ಕೇಳಿದ ವಸ್ತುಗಳನ್ನು ಬಯಸಿದಷ್ಟು ಕೊಡುವ ದಾನಿ ಧರ್ಮರಾಯ! ‘ವೃದ್ಧ ದ್ವಿಜಮುನಿನಿಕರ’ಕ್ಕೂ ದೀನಾನಾಥರಿಗೂ ಎಲ್ಲ ಕೊರತೆಗಳೂ ಪರಿಹಾರವಾದವು! ‘ ಅಂತು ನಿಜಧವಳಚ್ಛತ್ರಚಾಮರ ಸಿಂಹಾಸನಾದಿ ರಾಜಚಿಹ್ನಂಗಳುಳಿಯೆ ಸರ್ವಸ್ವಮೆಲ್ಲಮಂ ದಕ್ಷಿಣೆ’ಯಾಗಿ ಕೊಟ್ಟು ಆಮೇಲೆ ಧರ್ಮರಾಯನು ಯಾಗಕ್ಕೆ ಬಂದಿದ್ದ ಬಂಧುಗಳಿಗೆಲ್ಲ ಸನ್ಮಾನ ಮಾಡಿ ಸಂತೋಷಪಡಿಸಿದನು.

## ಅಗ್ರಪೂಜೆ

ರಾಜಸೂಯದ ಮುಖ್ಯ ಅಂಗವಾದ ಅಗ್ರಪೂಜೆ ಉಳಿಯಿತು. ಅದನ್ನು ನೆರವೇರಿಸಲು ಧರ್ಮರಾಯನು ಸಮಸ್ತ ರಾಜರನ್ನೂ ಆಹ್ವಾನಿಸಿ ಸಭೆ ಸೇರಿಸಿದನು. ಕೌರವರು ಯಾದವರು ಮೊದಲುಗೊಂಡು ಭರತವರ್ಷದ ಸಮಸ್ತರಾಜರೂ ಅಲ್ಲಿ ಒಟ್ಟುಗೂಡಿದ್ದರು. ಭೀಷ್ಮ ದ್ರೋಣ ಕೃಪಾಶ್ವತ್ಥಾಮಾದಿ ಮಹಾ ಮಹಾ ವೀರರೂ ಆ ಸಭೆಯಲ್ಲಿ ಉಪಸ್ಥಿತರಾಗಿದ್ದರು. ಆ ಮಹಾಸಭೆಯಲ್ಲಿ ಯಾರಿಗೆ ಅಗ್ರಪೂಜೆ? ಯಾರೊಬ್ಬರನ್ನು ಆರಿಸಿ ಗೌರವಿಸಿದರೂ ಉಳಿದ ರಾಜರು ಅಸಮಾಧಾನಪಟ್ಟುಕೊಳ್ಳುವುದು ಖಂಡಿತ. ಆ ಅಸಮಾಧಾನ ಆಗ್ರಹವಾಗಿ ಹಲವರು ರಾಜರು ಒಂದಾಗಿ ಯಾಗಕರ್ತನನ್ನು ಪ್ರತಿಭಟಿಸಿದರೆ ಕಲಹ ಅನಿವಾರ್ಯ. ‘ ರಾಜಸೂಯಾಂತಂ ಕಲಹಂ ’ ಎಂಬುದು ಗಾದೆಯ ಮಾತು. ಧರ್ಮರಾಯನ ಅಂತರಂಗದಲ್ಲಿ ಈ ಭೀತಿ ಇದ್ದಿರಬಹುದು. ಆದ್ದರಿಂದಲೇ ಅವನು ಅಗ್ರಪೂಜೆಗೆ ಯಾರು ಅರ್ಹರೆಂದು ಕುರುಕುಲಪಿತಾಮಹನಾದ ಭೀಷ್ಮನನ್ನೇ ಕೇಳಿದನು. ಭೀಷ್ಮನು ಈ ಪ್ರಶ್ನೆಗೇ ಕಾದಿದ್ದವನಂತೆ ಒಡನೆಯೇ ಉತ್ತರ ಹೇಳಿದನು. ( ಬಹುಶಃ ಈ ವಿಷಯವನ್ನು ಕುರಿತು ಕುರುವೃದ್ಧನೂ ಮೊದಲೇ ಯೋಚಿಸಿ ಒಂದು ನಿರ್ಣಯಕ್ಕೆ ಬಂದಿದ್ದನಾದೀತು. )

> ಬಲಿಯಂ ಕಟ್ಟಿದ ನಾವನೀ ಧರಣಿಯಂ ವಿಕ್ರಾಂತದಿಂದಂ ರಸಾ
> ತಲದಿಂದೆತ್ತಿದ ನಾವನಂದು ನರಸಿಂಹಕಾರದಿಂ ದೈತ್ಯನಂ
> ಚಲದಿಂ ಸೀಳ್ದವನಾವನಬ್ಧಿಮಥನ ಪ್ರಾರಂಭದೊಳ್ ಮಂದರಾ
> ಚಲಮಂ ತಂದವನಾವನಾತನ ವಲಂ ತಕ್ಕಂ ಪೆಜರ್ ತಕ್ಕರೇ

ಭೀಷ್ಮನು ಇಲ್ಲಿ ಶ್ರೀ ಕೃಷ್ಣನ ಹೆಸರನ್ನು ಹೇಳಿಲ್ಲ; ಅವನ ಹಿಂದಿನ ಕೆಲವು ಅವತಾರ ವೃತ್ತಾಂತಗಳನ್ನು ಮಾತ್ರ ಹೇಳಿದ್ದಾನೆ. ಯಾರು ವಾಮನನಾಗಿ ಹುಟ್ಟಿ ಬಲಿಯನ್ನು ಕಟ್ಟಿದನೋ, ಯಾರು ಆದಿವರಾಹನಾಗಿ ಭೂಮಿಯನ್ನು ರಸಾತಲದಿಂದ ಉದ್ಧ

ಸಿದನೋ, ಅವನು ಕ್ಷೀರಸಮುದ್ರ ಕಾಲದಲ್ಲಿ ಮಂದರಾಚಲವನ್ನು ಹೊತ್ತುನಿಂತನೋ ಅವನೇ ಈಗ ಅಗ್ರಪೂಜೆಗೆ ಅರ್ಹನೆಂದು ಅವನ ಹೇಳಿಕೆ. ಅಂಥವನು ಇನ್ನು ಯಾರು? ಶ್ರೀಕೃಷ್ಣನೇ ಸರಿ. ಧರ್ಮರಾಯನಿಗೂ ಇದು ಪ್ರಿಯವಾದ ಸಲಹೆ. ಅವನು ಭೀಷ್ಮನ ಸಲಹೆಯನ್ನು ಒಪ್ಪಿಕೊಂಡು ಪುರುಷೋತ್ತಮನಿಗೆ ಅರ್ಘ್ಯ ಕೊಡಲು ಸಿದ್ಧನಾದನೆಂದು ಪಂಪ ಹೇಳಿದ್ದಾನೆ.

ನನ್ನಯನ ಭಾರತದಲ್ಲಿ ಭೀಷ್ಮನೇ ಮೊದಲು ಮಾತಿಗೆ ತೊಡಗಿ ಆ ಸಭೆಯಲ್ಲಿ ಸೇರಿದ್ದ ಸ್ನಾತಕರು, ಋತ್ವಿಜರು, ಗುರುಗಳು, ಇಷ್ಟಮಿತ್ರರು, ರಾಜರು ಮೊದಲಾದ ಪೂಜಾರ್ಹರಲ್ಲಿ ಯಾರು ಹಿರಿಯ ಗುಣಶಾಲಿಗಳೋ ಅಂಥವರಿಗೇ ಅಗ್ರಪೂಜೆ ಕೊಡತಕ್ಕದ್ದೆಂದು ಧರ್ಮರಾಯನಿಗೆ ಸಲಹೆ ಕೊಟ್ಟಿದ್ದಾನೆ. ಆ ಸಲಹೆಯನ್ನು ಕೇಳಿ ಧರ್ಮಪುತ್ರನು 'ಅಂಥವನು ಯಾರು? ನನಗೆ ತಿಳಿಯಹೇಳಬೇಕು' ಎಂದು ತಾತನನ್ನೇ ಕೇಳಿದ್ದಾನೆ. ಆಗ ಭೀಷ್ಮ ಅಖಿಲಲೋಕಪೂಜ್ಯನಾದ ಅಚ್ಯುತನೇ ಪೂಜಾರ್ಹನೆಂದೂ ಅವನಿಗೇ ಅಗ್ರಪೂಜೆ ಸಲ್ಲಬೇಕೆಂದೂ ಅನ್ಯರು ಅರ್ಹರಲ್ಲವೆಂದೂ ಹೇಳುತ್ತಾನೆ. ಶ್ರೀಕೃಷ್ಣನ ಹಿಂದಿನ ಅವತಾರ ಕಥೆಗಳ ಪ್ರಸ್ತಾಪ ಇಲ್ಲಿಲ್ಲ. ಭೀಷ್ಮರ ಮಾತಿನಂತೆ ಯುಧಿಷ್ಠಿರನು ಕೃಷ್ಣನಿಗೆ ಅರ್ಘ್ಯ ಕೊಡಲು ಸಿದ್ಧನಾದ ಕೂಡಲೆ ಶಿಶುಪಾಲ ಸಿಟ್ಟಾಗಿ ಧರ್ಮರಾಯನನ್ನು ಆಕ್ಷೇಪಿಸುತ್ತಾನೆ.

'ದಾಶಾರ್ಹನು ಪೂಜಾರ್ಹನೆ? ಯಾವ ಕಾರಣದಿಂದ ಅವನಿಗೆ ಅಗ್ರಪೂಜೆ? ಅವನೇನು ರಾಜನೇ? ಅಲ್ಲ. ಅವನ ತಂದೆ ವಸುದೇವನೇ ಎದುರಿಗಿರುವಾಗ ಕೃಷ್ಣನನ್ನು ವಯೋವೃದ್ಧನೆಂದು ಹೇಳಲಾದೀತೆ? ಆರ್ಯರು, ಬ್ರಾಹ್ಮಣರು, ಋಷಿಗಳೂ ಇರುವ ಈ ಸಭೆಯಲ್ಲಿ ನೀಚಚರಿತನಾದ ಕೃಷ್ಣನಿಗೆ ಪೂಜೆ ಹೇಗೆ ಸಲ್ಲಬಹುದು?' ಎಂಬುದು ಶಿಶುಪಾಲನ ಆಕ್ಷೇಪಣೆ. ಭೀಷ್ಮನ ಸಲಹೆ ಕೇಳಿ ರಾಜನೂ ಅಲ್ಲದ ಗೊಲ್ಲನೊಬ್ಬನಿಗೆ ರಾಜಸಭೆಯಲ್ಲಿ ಅಗ್ರಪೂಜೆ ಕೊಡುವುದು ಸಲ್ಲದ ಕೆಲಸವೆಂದು ಧರ್ಮರಾಯನನ್ನು ಆಕ್ಷೇಪಿಸಿ ಧರ್ಮರಾಯ ತಿಳಿಯದೆ ಕೊಟ್ಟ ಮಾತ್ರಕ್ಕೆ ತನಗೆ ಸಲ್ಲದ ಗೌರವವನ್ನು ಸ್ವೀಕರಿಸುವುದು ಕೃಷ್ಣನಿಗೆ ಉಚಿತವಲ್ಲವೆಂದು ಕೃಷ್ಣನನ್ನು ನಿಂದಿಸಿ ತನ್ನ ಪರಿವಾರ ಸಮೇತನಾಗಿ ಆ ಸಭೆ ಬಿಟ್ಟು ಹೊರಟನಂತೆ! ಆಗ ಯುಧಿಷ್ಠಿರನು ಅವನ ಹಿಂದೆ ಹೋಗಿ ಶಿಶುಪಾಲನಿಗೆ ವಿವೇಕ ಹೇಳಿ ಅವನನ್ನು ಸಂತೈಸಲು ಪ್ರಯತ್ನಿಸಿದನು. ಅವನು ಕೃಷ್ಣನ ಹಿರಿಮೆಯನ್ನು ಹೊಗಳಿ ಭೀಷ್ಮನಂಥ ಹಿರಿಯನೇ ಒಪ್ಪಿದ ಮೇಲೆ ಇತರರು ಆಕ್ಷೇಪಿಸ ಸಲ್ಲದೆಂದು ವಾದಿಸಿ ಆ ಅಸುರನನ್ನು ಹಿಂದಿರುಗಿಸುವುದರಲ್ಲಿದ್ದನು. ಅಷ್ಟರಲ್ಲಿ ಭೀಷ್ಮನು ಮಧ್ಯೆಪ್ರವೇಶಿಸಿ 'ಅನಿಮಿತ್ತ ಮಹತ್ಪರಿವಾದ ಶೀಲ' ನಾದ ಶಿಶುಪಾಲನನ್ನು ಸಂತೈಸುವ ಪ್ರಯತ್ನ ಸಲ್ಲದೆಂದು ಹೇಳಿ ಅವನನ್ನು ತಡೆದು ತಾನೇ ಶಿಶುಪಾಲನನ್ನು ದಂಡಿಸ ಹೊರಟನು. ಅಷ್ಟರಲ್ಲಿ ಶಿಶುಪಾಲನ ಸೇನಾಪತಿ ಸುನೀಥನು ತನ್ನ ಕಡೆಯ ಕ್ಷತ್ರಿಯರನ್ನೆಲ್ಲ ಒಟ್ಟುಗೂಡಿಸಿ ಯುದ್ಧಸನ್ನದ್ಧನಾಗುತ್ತಿದ್ದನು. ಇದನ್ನೆಲ್ಲ ನೋಡಿ ತನ್ನ ಯಜ್ಞಕಾರ್ಯಕ್ಕೆ ಕೊನೆಯಲ್ಲಿ ವಿಘ್ನವೊದಗಿತೆಂದು ಪೇಚಾಡಿದ ಧರ್ಮರಾಯನಿಗೆ

ಭೀಷ್ಮ ಸಮಾಧಾನ ಹೇಳಬೇಕಾಯಿತು. ಭೀಷ್ಮ ಶಿಶುಪಾಲರ ನಡುವೆ ತೀಕ್ಷ್ಣವಾದ ವಾಗ್ವಾದ ಬೆಳೆಯಿತು. ಶಿಶುಪಾಲನು ಪಾಂಡವರನ್ನೂ ಭೀಷ್ಮನನ್ನೂ ಕೃಷ್ಣನನ್ನೂ ಸ್ವೇಚ್ಛೆಯಾಗಿ ನಿಂದಿಸಿದನು. ಅವನ ಆ 'ರೂಕ್ಷಾಕ್ಷರ ವಚನ'ಗಳನ್ನು ಕೇಳಿ ಸಹಿಸಲಾರದೆ ಭೀಮ ಕೋಪಗೊಂಡು ಕಾಳಗಕ್ಕೆ ಅಣಿಯಾದನು. ಆಗ ಭೀಷ್ಮನು ಅವನನ್ನು ತಡೆದು ಶಿಶುಪಾಲನ ವೃತ್ತಾಂತವನ್ನೆಲ್ಲ ಹೇಳಿ ಕೃಷ್ಣನಲ್ಲದೆ ಬೇರೆ ಯಾರೂ ಅವನನ್ನು ಕೊಲ್ಲುವುದು ಶಕ್ಯವಲ್ಲವೆಂದು ತಿಳಿಸುತ್ತಾನೆ. ಶಿಶುಪಾಲನು ಇವರಾರನ್ನೂ ಲೆಕ್ಕಿಸದೆ ಕೃಷ್ಣನಿಗೆ ಅಭಿಮುಖನಾಗಿ ನಿಂತು ಹಲವು ದುರ್ಭಾಷೆಗಳನ್ನಾಡಿದನು. ಕೊನೆಗೆ ಶ್ರೀಕೃಷ್ಣನು ತನ್ನ ಚಕ್ರಾಯುಧವನ್ನು ಬೀಸಿ, ಅಸುರನ ಕೊರಳನ್ನು ಕತ್ತರಿಸಿದನು. ಅವನ ದೇಹ ಕೆಳಗೆ ಬಿದ್ದಿತು. ಅದರಿಂದ ಹೊರಟ ದಿವ್ಯಪ್ರಭೆಯು ದಿಕ್ಕುಗಳನ್ನೆಲ್ಲ ಬೆಳಗುತ್ತ ಬಂದು ಕಮಲಾಕ್ಷನ ದೇಹವನ್ನು ಹೊಕ್ಕಿತು!

ಕೃಷ್ಣನ ಪೂಜಾರ್ಹತೆಯ ವಿಚಾರದಲ್ಲಿ ಭೀಷ್ಮ ಶಿಶುಪಾಲರ ನಡುವೆ, ಯುಧಿಷ್ಠಿರ ಶಿಶುಪಾಲರ ನಡುವೆ ದೀರ್ಘವಾದ ಚರ್ಚೆ ಬೆಳೆದಂತೆ ನನ್ನಯ ಹೇಳಿದ್ದಾನೆ. ಆದರೆ ಪಂಪನಿಗೆ ಈ ದೀರ್ಘ ಜಿಜ್ಞಾಸೆಗಳಲ್ಲಿ ಅಭಿರುಚಿಯಿಲ್ಲ. ಭೀಷ್ಮನ ಸಲಹೆ ಪಡೆದು ಯುಧಿಷ್ಠಿರನು ಕೃಷ್ಣನಿಗೆ ಅರ್ಘ್ಯವೆತ್ತಿದ ಕೂಡಲೆ ಮಿಕ್ಕೆಲ್ಲ ರಾಜರೂ ಸುಮ್ಮನಿದ್ದರೂ ಶಿಶುಪಾಲನು ಮಾತ್ರ ಆಗ್ರಹಗೊಂಡು ಧರ್ಮರಾಯನನ್ನು ಆಕ್ಷೇಪಿಸಿ 'ಕಳೆ ಕಳೆ ಹರಿಗೆತ್ತಿದ ಅರ್ಘ್ಯಮಂ' ಎಂದು ಗರ್ಜಿಸಿ ಮೊದಲು ಭೀಷ್ಮನನ್ನು ಅವಹೇಳನ ಮಾಡುತ್ತಾನೆ. ತಲೆನರೆತ ಆ ಮುದುಕ ಪಕ್ಷಪಾತ ಮಾಡಿದನಂತೆ! ಮನುಜಾಧೀಶ್ವರರ ಸಭೆಯಲ್ಲಿ ಯಾರನ್ನು ಸ್ಮರಿಸಲೂ ಬಾರದೋ ಅಂಥ 'ಪಚ್ಚಪಸಿಯ ತುಱುಕಾಱಂಗೆ' ಅಗ್ರಪೂಜೆಯೆ? ಇಂಥ ಅಯೋಗ್ಯ ಪುರಸ್ಕಾರದಿಂದ ಸಮಸ್ತರಾಜರನ್ನೂ ಅವಮಾನಕ್ಕೀಡುಮಾಡಿದಂತಾಯಿತೆಂದು ಅವನು ಧರ್ಮಜನನ್ನು ಆಕ್ಷೇಪಿಸಿದನು. ಹರಿಗೆ ಅರ್ಘ್ಯವೆತ್ತಿದ ಕಾರಣದಿಂದ ಧರ್ಮರಾಯನ ಯಜ್ಞವು ಅಮೃತವನ್ನು ತೃಪ್ತಿಯಾಗಿ ಉಂಡು ಕಡೆಯಲ್ಲಿ ಗೋಮೂತ್ರದಿಂದ ಬಾಯಿ ಮುಕ್ಕುಳಿಸಿದಂತೆ ಕೆಟ್ಟು ಹೋಯಿತೆಂದು ಆ ಅಸುರನು ಅಬ್ಬರಿಸಿದನು.

ಶಿಶುಪಾಲನು ಎಷ್ಟು ದುರ್ಭಾಷೆಗಳನ್ನಾಡಿದರೂ ಧರ್ಮರಾಯನಾಗಲಿ ಭೀಷ್ಮನಾಗಲಿ ಅವನಿಗೆ ಉತ್ತರವನ್ನೇ ಹೇಳಲಿಲ್ಲ! ಅವನಿಗೆ ಬಹಳ ಬೇಸರವಾಗಿರಬೇಕು. ಆದ್ದರಿಂದಲೇ ಅವನು,

> ಕುಡವೇಟ್ಟನ ಕುಡುವನ ಕುಡೆ
> ಪಡೆವನ ಪೆಂಪೇಂ ನೆಗೞ್ತೆ ಪಡೆಗುಮೊ ಪೇೞ್ವಂ
> ಕುಡವೇೞ್ಗುಮ ಕುಡುವಣ್ಣಂ
> ಕುಡುಗೆಮ ಕುಡೆ ಕೊಳ್ವ ಕಲಿಯನಱಿಯಲ್ಕಕ್ಕುಂ

ಎಂಬ ನಿರ್ಣಯಕ್ಕೆ ಬಂದು ನೇರವಾಗಿ ಕೃಷ್ಣನ ಸಂಗಡವೇ ಜಗಳಕ್ಕೆ ನಿಂತನು. ಪಂಪನು ಶಿಶುಪಾಲಕೃತ ಕೃಷ್ಣನಿಂದೆಯನ್ನು ಒಂಬತ್ತು ಪುಟ್ಟ ಕಂದಪದ್ಯ

ಗಳಲ್ಲಿ ಅಡಕಮಾಡಿ ಹೇಳಿದ್ದಾನೆ. ಈ ಒಂದೊಂದು ಪದ್ಯವೂ ಅಸುರನ ಮುಳಿಸಿನ ದಳ್ಳುರಿಯ ಜ್ವಾಲೆಯನ್ನೇ ಕಕ್ಕುವಂತಿದೆ. ಶ್ರೀಕೃಷ್ಣನ 'ದನುಜಾಂತಕ' 'ಮುರಾರಿ' ಎಂಬ ಬಿರುದಿನ ಹೆಸರುಗಳನ್ನೆತ್ತಿಕೊಂಡು ಶಿಶುಪಾಲ ಅವನನ್ನು ಲೇವಡಿ ಮಾಡಿದ್ದಾನೆ! ಅವನ ಹಿಂದಿನ ಅವತಾರ ಕಥೆಗಳನ್ನು 'ಡೊಂಬವಿದ್ಯೆ' ಯೆಂದು ಕರೆದು ಹೀಯಾಳಿಸಿ ಅವನನ್ನು ತಾನು ದಿಗ್ಬಲಿ ಕೊಡುವುದಾಗಿ ಜಂಬ ಕೊಚ್ಚಿಕೊಂಡು ಅಸುರನು ಶ್ರೀಕೃಷ್ಣನನ್ನು ಮನಬಂದಂತೆ ಬೈದಿದ್ದಾನೆ.

ಶಿಶುಪಾಲನ ಈ ದುರ್ಭಾಷೆಯನ್ನು ಕೇಳಿ ಸಭಾಸದರೆಲ್ಲ ಭಯಗ್ರಸ್ತರಾದರು ಅವರು 'ಎವೆಮಿಡುಕದೆ ಪಂದೆಯಂ ಪಾವಡರ್ದವೊಲುಸಿರದೆ' ಇದ್ದರು! ಆಗ ಸ್ವಯಂ ಶ್ರೀಕೃಷ್ಣನೇ ಶಿಶುಪಾಲನೊಡನೆ 'ಸಂಭಾಷಣೆ'ಗೆ ಆರಂಭಿಸಿ ಅವನ ಜನನವೃತ್ತಾಂತ ವನ್ನು ಜ್ಞಾಪಿಸಿ 'ನಿನ್ನ ಮೃತ್ಯುವೆನ್ನಯ ಕೆಯ್ಯೊಳ್' ಎಂದು ಖಚಿತಪಡಿಸಿದನು! ಆದರೂ ಶಿಶುಪಾಲ ತನ್ನ ಬೈಗಳನ್ನು ನಿಲ್ಲಿಸಲಿಲ್ಲ. ಅವನು ನೂರು ಬೈಗಳನ್ನು ಬೈದಾಗುತ್ತಲೆ ಶ್ರೀಕೃಷ್ಣನು ಧರ್ಮರಾಯನು ತನಗೆ ಅರ್ಘ್ಯವೆತ್ತಿದ ತಟ್ಟೆಯನ್ನೇ ಹಿಡಿದು ಹೊಡೆಯಲು ಅದೇ ಸುದರ್ಶನಚಕ್ರದ ಕೆಲಸಮಾಡಿತು! ಶಿಶುಪಾಲನ ಕೊರಳು ಕತ್ತರಿಸಿ ಹೋಯಿತು. ಅವನ ತಲೆ ಆ ತಟ್ಟೆಯಲ್ಲಿ ಕುಳಿತಿತು! ಆ ತಟ್ಟೆ ಆ ಕ್ಷಣದಲ್ಲಿ 'ಜವನರ್ಘ್ಯ ಮೆತ್ತಿದಂತೆ' ಇದ್ದಿತೆಂದು ಪಂಪ ವರ್ಣಿಸಿರುವುದು ಮಹಾಮನೋಜ್ಞ ವಾಗಿವೆ. ಯಮನು ಅರ್ಘ್ಯ ಕೊಡುವಾಗ 'ಶಿರೋಂಬುಜ'ವನ್ನೇ ಬಳಸುವನಾದೀತು! ಈ ಅಗ್ರಪೂಜಾ ಪ್ರಕರಣವನ್ನು ಪಂಪ ಒಂದು ಪುಟ್ಟ ರೂಪಕದೋಪಾದಿಯಲ್ಲಿ ಬಹಳ ಕಲಾತ್ಮಕವಾಗಿ ಚಿತ್ರಿಸಿದ್ದಾನೆ. ಇಲ್ಲಿ ದೀರ್ಘ ಸಂಭಾಷಣೆಗಳಾಗಲಿ ಮಹಿಮಾನು ಕಥನಗಳಾಗಲೀ ಇಲ್ಲ. ಶಿಶುಪಾಲನ ಮಾತು ಸಂಕ್ಷೇಪವಾಗಿದ್ದರೂ ಅವನ ಅಸೂಯೆ ಆಗ್ರಹಗಳನ್ನು ಸುವ್ಯಕ್ತಪಡಿಸುವಂತಿದೆ. ಪಂಪನ ಸನ್ನಿವೇಶ ರಚನಾಕೌಶಲ ಅಗ್ರ ಪೂಜಾಪ್ರಸಂಗದಲ್ಲಿ ಚೆನ್ನಾಗಿ ಅಭಿವ್ಯಕ್ತವಾಗಿದೆ. ರಾಜಸೂಯದ ಕೊನೆಯ ಘಟ್ಟ ವಾದ ಅಗ್ರಪೂಜೆ ರಣಕೋಲಾಹಲದಲ್ಲಿ ಪರ್ಯವಸಾನವಾಗುವ ಸಂದರ್ಭಗಳೂ ಉಂಟಂತೆ. ಇಲ್ಲಿ ಶ್ರೀಕೃಷ್ಣನು ಧರ್ಮರಾಯನ ಯಜ್ಞಸಾಫಲ್ಯದಲ್ಲಿ ವಿಶೇಷ ಆಸಕ್ತಿ ವಹಿಸಿ ಅದಕ್ಕೆ ಕಂಟಕನಾಗಿ ಬಂದ ಲೋಕಕಂಟಕನಾದ ದೈತ್ಯನನ್ನು ಕೊಂದು ಧರ್ಮಸಂಸ್ಥಾಪನೆ ಮಾಡಿದನು. ಶಿಶುಪಾಲನ ನೆಂಟರಾದ ಅಶ್ವಗ್ರೀವ ವಿದ್ಯುನ್ಮಾಲಿ ನೀಲಾದಿ ರಾಕ್ಷಸರು ಕೃಷ್ಣನ ಮೇಲೆ ಕೋಪಗೊಂಡು ದಾಳಿಮಾಡಿದರಾದರೂ ಏನೂ ಫಲವಾಗಲಿಲ್ಲ. ಸುದರ್ಶನಚಕ್ರ ತನ್ನ ಕೆಲಸವನ್ನು ಮಾಡಿ ಪೂರೈಸಿತು.

ರಾಜಸೂಯ ಸಾಂಗವಾಯಿತು. ಧರ್ಮರಾಯನು ಅಗ್ರಪೂಜೆ ಮಾಡಿ ಅವಭೃಥಸ್ನಾನವಾದ ಮೇಲೆ 'ಪಿರಿದು ಪೊಸಗೆಯಂ ಮಾಡಿ' ನೆರೆದ ರಾಜಕುಲ ವನ್ನೆಲ್ಲ ಬೀಳುಕೊಟ್ಟನು.

## ದ್ಯೂತಪ್ರಸಂಗ

ರಾಜಸೂಯದ ವಿಧಿಗಳೆಲ್ಲ ಮುಗಿದು, ಬಂದಿದ್ದ ಬಂಧುಗಳನ್ನೆಲ್ಲ ಸತ್ಕರಿಸಿ ಅವರವರ ನಗರಗಳಿಗೆ ಕಳುಹಿಸಿದ ಮೇಲೆ ಧರ್ಮರಾಯನು ತನಗೆ ಮಾರ್ಗದರ್ಶಕ ನಾಗಿ ನಿಂತು ಯಾಗ ನಿರ್ವಹಣೆಗೆ ನಾನಾವಿಧಗಳಲ್ಲಿ ನೆರವು ನೀಡಿದ ಶ್ರೀಕೃಷ್ಣನಿಗೆ ವಿಶೇಷವಾದ ಸತ್ಕಾರಮಾಡಿ ತನ್ನ ಕೃತಜ್ಞತೆಯನ್ನು ನಿವೇದಿಸಿದನು. ಅವನು ಧರ್ಮರಾಯನನ್ನು ಅಭಿನಂದಿಸಿ ಸಪರಿವಾರನಾಗಿ ದ್ವಾರಕೆಗೆ ಪ್ರಯಾಣ ಮಾಡಿದನು.

ಅತ್ತ ಹಸ್ತಿನಾವತಿಯಲ್ಲಿ ದುರ್ಯೋಧನನು ಪಾಂಡವರು ಮಾಡಿದ ರಾಜಸೂಯದ ಮಹಾವೈಭವನನ್ನು ಮತ್ತೆ ಮತ್ತೆ ಸ್ಮರಿಸಿಕೊಂಡು ಸಂಕಟಪಟ್ಟನು. ದಾಯಾದಿ ಗಳ ಹಿರಿಮೆ ಅವನಿಗೆ ಸಹನೆಯಾಗಲಿಲ್ಲ. ಆದರೆ ಅವರನ್ನು ನಾಶಮಾಡುವ ದಾರಿ ಯಾವುದೂ ಕಾಣಿಸಲಿಲ್ಲ. ಆ ಪೃಥಾನಂದನರು ಬಲ್ಲಾಳುಗಳು. ಅವರ ತ್ಯಾಗ ಭೋಗ ಗಳ ಹಿರಿಮೆ ಅವನನ್ನು ಬೆರಗಾಗಿಸಿತು. ರಾಜಮಹಾರಾಜರು ಧರ್ಮರಾಯನಿಗೆ ತಂದೊಪ್ಪಿಸಿದ ಕಾಣಿಕೆಗಳನ್ನು ಸ್ವೀಕರಿಸುವ ಕೆಲಸವನ್ನು ದುರ್ಯೋಧನನಿಗೇ ಒಪ್ಪಿಸ ಲಾಗಿತ್ತು. ಆ ಅಪಾರವಾದ ಧನರಾಶಿಯನ್ನು ನೋಡಿ ಅವನ ಅಸೂಯೆ ಪ್ರಜ್ವಲಿ ಸಿತು. ಅಲ್ಲದೆ ಭೀಮಾರ್ಜುನರು ಸಮಸ್ತ ರಾಜಮಂಡಲವನ್ನೂ ಗೆದ್ದು ಸ್ವಾಧೀನಪಡಿಸಿ ಕೊಂಡಿದ್ದರು. ಅವರ ಅಪ್ರತಿಹತವಾದ ಪರಾಕ್ರಮಕ್ಕೆ ಎಲ್ಲರೂ ಅಂಜುತ್ತಿದ್ದರು. ಎಲ್ಲಕ್ಕಿಂತ ಮಿಗಿಲಾಗಿ ಶ್ರೀಕೃಷ್ಣನ ನೆರವು ಅವರದಾಗಿತ್ತು. ಶಿಶುಪಾಲನನ್ನು ಕೃಷ್ಣನು ಅರ್ಘ್ಯದ ತಟ್ಟೆಯಿಂದಲೇ ಹೊಡೆದು ಕೊಂದಾಗ ಆ ಸಭೆಯಲ್ಲಿ ಎಲ್ಲರೂ ಹರ್ಷ ಪಟ್ಟವರೇ ಹೊರತು ಕೃಷ್ಣನನ್ನು ಆಕ್ಷೇಪಿಸಿದವರೇ ಯಾರೂ ಇಲ್ಲ! ಇದನ್ನೆಲ್ಲ ಸ್ಮರಿಸಿ ಕೊಂಡು ಪಾಂಡವರು ಅಭೇದ್ಯರಾಗಿರುವರೆಂದು ತಿಳಿದು ಸುಯೋಧನನು ಅವರನ್ನು ಗೆಲ್ಲುವ ದಾರಿ ತೋರದೆ ಕಂಗೆಟ್ಟನು. ಇಂದ್ರಪ್ರಸ್ಥದಿಂದ ಹಿಂದಿರುಗಿ ಬಂದಮೇಲೆ ದುರ್ಯೋಧನನು ಯಾರೊಡನೆಯೂ ಮಾತನ್ನೇ ಆಡದೆ ತನ್ನ ಅರಮನೆಯನ್ನು ಹೊಕ್ಕು 'ಸಕಲ ಸುಖೋಪಭೋಗವಿಮುಖ' ನಾಗಿ ಏಕಾಂತದಲ್ಲಿದ್ದುಬಿಟ್ಟನು. 'ಸಕಲಜನ ಮನೋನಯನೋತ್ಸವ' ವಾದ ಪಾಂಡವರ ಆ ಸಭೆಯ ಸೌಂದರ್ಯದ ಸ್ಮರಣೆಯೇ ಅವನ ಮನೋನಯನಗಳಿಗೆ ಅಗ್ನಿಜ್ವಾಲೆಯಂತೆ ಮಹಾ ಬೇಗೆಯ ನ್ನುಂಟುಮಾಡಿತಂತೆ! ಸುಯೋಧನನು 'ಅವನೀರಾಜ್ಯ ವ್ಯಾಪಾರಪರಿಹೀನ' ನಾಗಿ ಪಾಪವ್ಯವಸಾಯದಲ್ಲಿ ಮನಸ್ಸಿಟ್ಟು ಪಾಂಡವವಿನಾಶದ ಮಾರ್ಗವನ್ನೇ ಕುರಿತು ಧ್ಯಾನಿಸುತ್ತಿದ್ದನು.

ಅರಸನು ಇದ್ದಕ್ಕಿದ್ದಂತೆ ಏಕಾಂತಪ್ರಿಯನಾದುದನ್ನು ಕಂಡು ಆಶ್ಚರ್ಯಪಟ್ಟ ಅನೇಕರು ಅವನನ್ನು ಕಾಣಬಯಸಿದರಾದರೂ ಅವನು ಯಾರಿಗೂ ದರ್ಶನ ಕೊಡಲಿಲ್ಲ. ಕೊನೆಗೆ ಸೋದರಮಾವನಾದ ಶಕುನಿ ಬಲವಂತವಾಗಿ ಒಳಕ್ಕೆ ಹೋಗಿ ಅವನನ್ನು ಸಂತೈಸಲು ಪ್ರಯತ್ನಿಸಿದಾಗ ದುರ್ಯೋಧನನು ತನ್ನ ಹೃದಯ ವೇದನೆಯನ್ನು

ತೊಡಿಕೊಂಡನು. 'ನೀನೂ ಆ ಸಭೆಯನ್ನು ನೋಡಿದೆಯಲ್ಲವೆ? ಅಂಥಾದ್ದು ಭೂಮಂಡಲದಲ್ಲಿಯೇ ಅಪೂರ್ವ. ಯಾವ ಯುಗದಲ್ಲಿಯೂ ಯಾರೂ ಕೇಳಿ ಅರಿಯರು'.[1] ಧರ್ಮರಾಯನ ಸಭೆಯ ಹಿರಿಮೆಯಿಂದ ತೊಡಗಿ ಸುಯೋಧನನ ಕೈಲಿ ಮತ್ತೆ ನನ್ನಯಭಟ್ಟ ಪಾಂಡವರ ಯಾಗ ವೈಭವವನ್ನು ಹೊಗಳಿಸಿದ್ದಾನೆ. ಹಿಂದೆ ತಾನು ಬಯಸಿದ ಸುಭದ್ರೆಯನ್ನು ಶ್ರೀಕೃಷ್ಣನು ತಂತ್ರಹೂಡಿ ಅರ್ಜುನನಿಗೆ ಕೊಡಿಸಿದ ಕಾರಣದಿಂದ ದುರ್ಯೋಧನನಿಗೆ ಯಾದವರಮೇಲೆ ಅಸಮಾಧಾನ ಉಂಟಾಗಿತ್ತು. ಈಗ ಅವನು ಪಾಂಡವರಿಗೆ ಮಿತ್ರನಾಗಿ ನಿಂತು ನಾನಾ ವಿಧವಾಗಿ ನೆರವು ನೀಡಿ ರಾಜಸೂಯ ಯಾಗ ಮಾಡಿಸಿದುದರಿಂದ ಅವನಮೇಲೆ ದ್ವೇಷವೇ ಮೂಡಿತು. ಆದರೆ ಅವನನ್ನು ಏನು ಮಾಡುವಂತಿತ್ತು?

ಸುಯೋಧನನು ಶಕುನಿಯ ಸಂಗಡ ತನ್ನ ಸಹಿಸಲಾಗದ ಸಂಕಟವನ್ನೆಲ್ಲ ಹೇಳಿಕೊಂಡು "ವಿನು ಮಾತುಲ ಮಾನಧನಾಢ್ಯುಡೈನ ಭೂಪತಿ ಸಹಿಯಿಂಪ ನೋಪುನೆ ಸಪತ್ನುಲ ವೃದ್ಧಿಯು ನಾತ್ಮ ಹಾನಿಯುನ್? ಏಮಿ ಸೇಯುದಮು ಪಾಂಡವುಲ ಲಕ್ಷ್ಮಿ ಯೆವ್ವಿಧಂಬುನ ಮನಕಪಹರಿಂಚಿ ಕೊನನಗುನ್?" (ಕೇಳು ಮಾವ; ಮಾನಧನನಾದ ಭೂಪತಿಯು ದಾಯಾದಿಗಳ ಅಭ್ಯುದಯವನ್ನೂ ಆತ್ಮಹಾನಿಯನ್ನೂ ಸಹಿಸಿಕೊಳ್ಳಲು ಸಾಧ್ಯವೆ? ಏನು ಮಾಡೋಣ? ಯಾವ ರೀತಿಯಿಂದ ನಾವು ಪಾಂಡವರ ಸಂಪತ್ತನ್ನು ಅಪಹರಿಸಿ ವಶಪಡಿಸಿಕೊಳ್ಳಲು ಸಾಧ್ಯ?) ಎಂದು ಮಾವನ ಸಲಹೆಯನ್ನು ಕೇಳಿದನು. ನನ್ನಯಭಾರತದ ಶಕುನಿ ಅಳಿಯನ ಪ್ರಶ್ನೆಗೆ ಆ ಕೂಡಲೆ ಉತ್ತರ ಕೊಡಲಿಲ್ಲ. ಮೊದಲು ಧೃತರಾಷ್ಟ್ರನ ಅನುಮತಿಯನ್ನು ಪಡೆಯುವುದು ಅಗತ್ಯವೆಂದು ಹೇಳಿ ಅವನನ್ನು ಜತೆಯಲ್ಲಿ ಕರೆದುಕೊಂಡು ಅಂಧರಾಜನ ಸನ್ನಿಧಿಯನ್ನು ಸೇರಿ ದುರ್ಯೋಧನನ 'ಶರೀರ ಕಾರ್ಶ್ಯ ವೈವರ್ಣ್ಯ'ಗಳನ್ನು ಅವನಿಗೆ ವರ್ಣಿಸಿ ಹೇಳಿದನು. ಅದನ್ನು ಕೇಳಿ ಗಾಬರಿಗೊಂಡ ಅಂಧರಾಜನು ತನ್ನ ಮೋಹದ ಮಗನನ್ನು ಹತ್ತಿರ ಕರೆದು ಅಪ್ಪಿ ಮೈದಡವಿ ಹಲವು ಬಗೆಯಲ್ಲಿ ಸಂತೈಸಿ ಅಪಾರವಾದ ಸಿರಿಯುಳ್ಳ ತನ್ನ ಕುಮಾರನಿಗೆ ಒದಗಿದ ದುಃಖವೇನೆಂದು ಪ್ರಶ್ನಿಸಿದನು.

ಪುತ್ರ ಮೋಹದಿಂದ ಧೃತರಾಷ್ಟ್ರನು ಪ್ರಶ್ನೆ ಮಾಡಿದ ಸಂದರ್ಭದ ಸದುಪಯೋಗ ಪಡಿಸಿಕೊಂಡು ದುರ್ಯೋಧನನು ತಾನು ಕಣ್ಣಾರೆ ಕಂಡ ಪಾಂಡವರ ಯಾಗ ವೈಭವವನ್ನು ವಿಸ್ತಾರವಾಗಿ ವರ್ಣಿಸಿ ಅವನ ಮನಸ್ಸಿನಲ್ಲಿಯೂ ಅಸೂಯೆಯನ್ನು ಜಾಗೃತಗೊಳಿಸಿದನು. ಕೊನೆಗೆ ಆ ಮಾನಧನನು 'ದಾಯಾದಿಗಳು ಮಹಾ ಪ್ರಬಲರಾಗಿ ವೈಭವದಿಂದ ಬಾಳುತ್ತಿರುವಾಗ ನಾನು ಕಡುದೀನನಂತೆ ಬದುಕುವುದು ಯಾವ ಪುರುಷಾರ್ಥಕ್ಕೆ?' ಎಂದು ಗೋಳಿಟ್ಟನು. ಆಗ ಶಕುನಿಯು ತನ್ನ ಅಳಿಯ

---

[1] ಸಭಾಪರ್ವ–II–95. (ತೆಲುಗು ಭಾರತ)

ನಿಗೆ ಭಾಷೆಕೊಡಲು ಹಿಂತೆಗೆಯಲಿಲ್ಲ. 'ಮಾಯಾ ದುರೋದರ ಕ್ರೀಡೆಯ ನೆಪದಿಂದ ನಿನಗೆ ಭಾನುಪ್ರಕಾಶರಾದ ಪಾಂಡುಪುತ್ರರ ರಾಜ್ಯೈಶ್ವರ್ಯಗಳನ್ನೆಲ್ಲ ನಾನು ಅಪಹರಿಸಿಕೊಡುತ್ತೇನೆ.'[1] ಆದರೆ ಶಕುನಿಯ ಈ ಅಭಯವಚನವನ್ನು ಧೃತರಾಷ್ಟ್ರ ಒಮ್ಮೆಲೆ ಒಪ್ಪಿಕೊಳ್ಳಲಿಲ್ಲ. ಅವನು ಜಾತ್ಯಂಧನಾಗಿದ್ದರೂ ಅವನ ಒಳಗಣ್ಣು ಇನ್ನೂ ಕುರುಡಾಗಿರಲಿಲ್ಲ. ಅವನು 'ಧೀರಮತಿ ವಿದುರತೋಡ ವಿಚಾರಿಂತಮು. ವಾಡು ನಯ ವಿಶಾರದುಡು ಕಳಾಪಾರಗುಡು ದೀರ್ಘದರ್ಶಿ' ಎಂದು ನುಡಿದು ವಿದುರನೊಡನೆ ವಿಚಾರಮಾಡಿ ಅವನ ಸಲಹೆಯನ್ನು ಪಡೆದುಕೊಳ್ಳಬೇಕೆಂದು ಅಭಿಪ್ರಾಯಪಟ್ಟನು. ಆದರೆ ದುರ್ಯೋಧನನಿಗೆ ಅದು ಸುತರಾಂ ಸರಿದೋರಲಿಲ್ಲ. ವಿದುರನು ಪಾಂಡವ ಪಕ್ಷಪಾತಿಯಾದ ಕಾರಣ ಅವನ ಸಲಹೆ ಅನವಸರವೆಂದು ವಾದಿಸಿ ಅಂಧರಾಜನನ್ನು ಬಲವಂತವಾಗಿ ಶಕುನಿಯ ಸಲಹೆಗೆ ಒಪ್ಪಿಸಿದನು. ಪುತ್ರಮೋಹಬದ್ಧನಾದ ಧೃತರಾಷ್ಟ್ರನು ತನಗೆ ಸಮ್ಮತವಾಗದಿದ್ದರೂ ಈ ದುಷ್ಟಯೋಜನೆಗೆ ಒಪ್ಪಲೇ ಬೇಕಾಯಿತು.

ಪಂಪ ಭಾರತದಲ್ಲಿ ಈ ಕಥೆ ಇಷ್ಟು ವಿಸ್ತಾರವಾಗಿ ಬೆಳೆದಿಲ್ಲ. ದುರ್ಯೋಧನನು ಇಂದ್ರಪ್ರಸ್ಥಪುರದಿಂದ ಹಿಂದಿರುಗಿದ ಕೂಡಲೇ ಅವನೇ 'ದುಶ್ಶಾಸನ ಕರ್ಣ ಶಕುನಿ ಸೈಂಧವರೆಂಬ ದುಷ್ಟಚತುಷ್ಟಯದೊಡನೆ ಮಂತಣ' ನಡೆಸಿದನೆಂದು ಪಂಪನ ಹೇಳಿಕೆ. ಪಂಪನ ಸುಯೋಧನ ಅಳುಬುರುಕನಲ್ಲ. ಅವನು ದುಃಖದಿಂದ ತಲೆಮರೆಸಿಕೊಂಡು ಏಕಾಂತವಾಸಿಯಾಗಿದ್ದು ಶಕುನಿಯ ಬರವಿಗಾಗಿ ಪ್ರತೀಕ್ಷಿಸಲಿಲ್ಲ. ಅವನೇ ಕಾರ್ಯ ತತ್ಪರನಾಗಿ ತನಗಿಷ್ಟರಾದವರನ್ನು ಬರಮಾಡಿ ಅವರೊಡನೆ ತನ್ನ ಮನಃಕ್ಲೇಶವನ್ನು ಹೇಳಿ ಅವರ ಆಲೋಚನೆಯನ್ನು ಕೇಳಬಯಸಿದನು. ಆಗ ಶಕುನಿ ತಟ್ಟನೆ ತನ್ನ ಸಲಹೆ ನೀಡಿ ಅಕ್ಷದ್ಯೂತದಿಂದಲ್ಲದೆ ಬೇರೆ ಯಾವ ದಾರಿಯಿಂದಲೂ ಪಾಂಡವರನ್ನು ಗೆಲ್ಲುವುದು ಸಾಧ್ಯವಾಗದೆಂದು ಸ್ಪಷ್ಟವಾಗಿ ಹೇಳಿದನು. 'ಆ ಯಮನಂದನನಲ್ತೆ ನೆತ್ತದೊಳ್ ಬೆಸನಿಗನ್? ಆತನಂ ಬರಿಸಿ ನೆತ್ತಮನಾಡಿಸಿ ಗೆಲ್ದುಕೊಳ್ವಮೀ ವಸುಮತಿಯಂ.' ಈ ಘಟ್ಟದಲ್ಲಿ ಧೃತರಾಷ್ಟ್ರನ ಪ್ರಸ್ತಾಪವೇ ಇಲ್ಲ. ದುರ್ಯೋಧನನಿಗೆ ಅಕ್ಷದ್ಯೂತದ ಸಲಹೆ ಒಪ್ಪಿಗೆಯಾಗುತ್ತಲೆ 'ನಾಲ್ಕು ಪಾಸಗೆ'ಗಳು ಸಿದ್ಧವಾದುವು. 'ತಾನುಮಂ ಆಮುಂ ಕೆಲವು ದೆವಸಂ ಗೋಷ್ಠಿಯೊಳಿಪ್ಪಂ ಬರ್ಕೆಂದು ಬಟಾಯನಟ್ಟಿ' ಪಾಂಡವರನ್ನು ಕರೆಕಳುಹಿಸಿದ್ದೂ ಆಯಿತು. ದ್ಯೂತ ಮೊದಲಾಗುವವರೆಗೂ ಈ ಸಮಾಚಾರ ಧೃತರಾಷ್ಟ್ರನಿಗೆ ಸ್ವಲ್ಪವೂ ತಿಳಿಯದು, ಪಂಪನ

---

1 ಭಾನುಪ್ರಭುಲಗು ಪಾಂಡು ಮ
ಹೀನಾಥಾತ್ಮಜುಲ ಲಕ್ಷ್ಮಿಯೆಲ್ಲನು ನೀಕುನ್
ನೇನಪಹರಿಂಚಿ ಯಿತ್ತು ಧ
ರಾನುತ ಮಾಯಾದುರೋದರ ವ್ಯಾಜಮುನನ್

ಪ್ರಕಾರ! ಇದರಿಂದ ಚರ್ವಿತಚರ್ವಣವಾಗಿ ಮತ್ತೆ ಮತ್ತೆ ಬರುವ ರಾಜಸೂಯಯಾಗ ವೈಭವದ ವರ್ಣನೆ, ದುರ್ಯೋಧನನ ದುಃಖದ ಆವೇದನ, ನಿರುಪಯುಕ್ತವಾದ ವಿದುರನ ಉಪದೇಶ, ಇವೆಲ್ಲ ತಪ್ಪಿದುವು. ದ್ಯೂತದ ಯೋಜನೆಯ ಕರ್ತ ಶಕುನಿ. ಅದು ಬೇರೆ ಯಾರಿಗೂ ಹೊಳೆದಿರಲಿಲ್ಲ. ಪಂಪ ನನ್ನಯರೇ ಅಲ್ಲದೆ ಶ್ರೀ ಮಹಾ ಭಾರತಕರ್ತರಾದ ವ್ಯಾಸರೂ ದ್ಯೂತದ ಯೋಜಕತ್ವವನ್ನು ಶಕುನಿಗೇ ಕಟ್ಟಿದ್ದಾರೆ.

ಶಕುನಿ ಅಕ್ಷದ್ಯೂತದಲ್ಲಿ ದಕ್ಷ. ಅದನ್ನು ಅವನೇ ಹೇಳಿಕೊಳ್ಳುತ್ತಾನೆ. ಅವನಿಗೆ ಧರ್ಮರಾಯನ ದೌರ್ಬಲ್ಯ ಚೆನ್ನಾಗಿ ತಿಳಿದಿತ್ತು. 'ಧರ್ಮತನಯನು ಜೂಜಿನಲ್ಲಿ ಪ್ರೀತಿಯುಳ್ಳವನು; ಆದರೆ ಅದರಲ್ಲಿನ ಮೋಸವನ್ನು ಅರಿಯನು. ನಾನು ಅಕ್ಷ ವಿದ್ಯೆಯಲ್ಲಿ ಅತಿದಕ್ಷ.'[1] ಆದ್ದರಿಂದ ಧರ್ಮರಾಯನನ್ನು ಜೂಜಿನಲ್ಲಿ ಮೋಸ ಪಡಿಸುವುದು ಬಹಳ ಸುಲಭವಾಗಿತ್ತು. ಜೂಜಿನ ಮೂಲಕವೇ ಅವನನ್ನು ಗೆಲ್ಲಬೇಕು. ಪರಾಕ್ರಮದಿಂದ ಪಾಂಡವರನ್ನು ಗೆಲ್ಲುವುದು ಸಾಧ್ಯವಿರಲಿಲ್ಲ. ಕಪಟ ದ್ಯೂತವನ್ನೇ ಏರ್ಪಡಿಸಬೇಕೆಂದೂ ತಾನೇ ಧರ್ಮರಾಯನೊಡನೆ ಪಗಡೆಯಾಡಿ ಗೆಲ್ಲುವುದಾಗಿಯೂ ನನ್ನಯನ ಶಕುನಿ ಹೇಳಿದ್ದಾನೆ. ಪಂಪನ ಶಕುನಿ ಹಾಗಲ್ಲ. ಅವನು ಜೂಜಿನ ಸಲಹೆಯನ್ನು ಮುಂದಿಟ್ಟು ಪಾಂಡವರನ್ನು ಗೆಲ್ಲುವ ದಾರಿ ತೋರಿಸಿದನೇ ಹೊರತು ತಾನೇ ಜೂಜು ನಡೆಸುವುದಾಗಿ ಮಾತು ಕೊಡಲಿಲ್ಲ.

ಕಪಟ ದ್ಯೂತದ ಯೋಜನೆ ಸಿದ್ಧವಾಗಲು ಅದಕ್ಕೆ ಪಾಂಡವರನ್ನು ಆಹ್ವಾನಿಸುವ ಕೆಲಸವನ್ನು ತನ್ನ ತಂದೆಗೆ ಬಿಟ್ಟು ನನ್ನಯನ ದುರ್ಯೋಧನ ಧರ್ಮರಾಯನ ಆಗಮನವನ್ನೇ ನಿರೀಕ್ಷಿಸುತ್ತಿದ್ದನು. ಧೃತರಾಷ್ಟ್ರನು ದ್ಯೂತ ಸಮಾರಂಭಕ್ಕಾಗಿಯೇ ಒಂದು ಹೊಸ ಮಂದಿರವನ್ನೇ ನಿರ್ಮಿಸಲು ಸಂಕಲ್ಪಿಸಿ ಸಾವಿರ ಮಂದಿ ಶಿಲ್ಪಾ ಚಾರ್ಯರನ್ನು ಬರಮಾಡಿಕೊಂಡು 'ಕನಕರತ್ನ ಖಚಿತ ಸ್ತಂಭ ಸಹಸ್ರಗಳೂ ವಿಚಿತ್ರ ದ್ವಾರಶತಗಳೂ ವಿವಿಧ ರತ್ನರುಚಿರಪ್ರವೇಶಗಳೂ ಸೇರಿ ರಮ್ಯವಾದ' ಒಂದು ಸಭಾಮಂಟಪವನ್ನು ಕಟ್ಟುವಂತೆ ನಿಯಮಿಸಿದನು. ಪಾಂಡವರಿಗೆ ಲಭಿಸಿದ್ದ ಹೊಸ ಸಭೆಗೆ ಸರಿಗಟ್ಟುವಂಥ ಮಂದಿರವನ್ನು ಮೆರೆಯಿಸಬೇಕೆಂದು ಅವನು ಆಸೆಪಟ್ಟ ನಾದೀತು. ಸಭಾಮಂದಿರ ಸಿದ್ಧವಾಗುತ್ತಲೇ ಧೃತರಾಷ್ಟ್ರನು ಏಕಾಂತದಲ್ಲಿ ವಿದುರ ನೊಡನೆ ಮಂತ್ರಾಲೋಚನೆಗೆ ತೊಡಗಿ ಶಕುನಿ ದುರ್ಯೋಧನರ ಅಭಿಪ್ರಾಯವನ್ನು ಹೇಳಿದನು. ಅವನು ಅದನ್ನು ಕೇಳಿ ವಿಸ್ಮಿತನಾಗಿ ಅಖಿಲ ಪ್ರಜಾಕ್ಷಯಕರವಾದ ದ್ಯೂತಕಾರ್ಯಕ್ಕೆ ತಾನು ಒಡಂಬಡುವುದು ಸಾಧ್ಯವಲ್ಲವೆಂದು ಹೇಳಿದುದಲ್ಲದೆ ಅದರಿಂದ ಮುಂದೆ 'ಕೌರವ' ಪಾಂಡವರ ನಡುವೆ ತೀರದ ವೈರವುಂಟಾಗುವುದೆಂದು ಎಚ್ಚರಿಸಿದನು. ಆದರೆ ಅಂಧರಾಜನು ಅವನ ಹಿತೋಪದೇಶವನ್ನು ಗೌರವಿಸಲಿಲ್ಲ.

---

1 'ಧರ್ಮತನಯುಂಡು ಜೂದಂಬುನಕು ಪ್ರಿಯುಂಡು ಗಾನಿಯಂದುಲ ಯುಕ್ಕಿವಂಚೆಱುಂಗಡು. ಏನು ಅಕ್ಷವಿದ್ಯಯಂದತಿ ದಕ್ಷುಂಡನು.'

ಪುತ್ರಮೋಹದಿಂದ ಅವನು ದುರ್ಯೋಧನನ ದುಃಖ ನಿವಾರಣೆಗೆ ದೃಢಸಂಕಲ್ಪ ಮಾಡಿದ್ದನು. ವಿದುರನ ಉಪದೇಶಸಾರವನ್ನು ಅವನು ದುರ್ಯೋಧನನಿಗೆ ಹೇಳಿದ 'ಶಾಸ್ತ್ರ' ಮಾಡಿದನಾದರೂ ಅವನ್ನು ಒಪ್ಪಿಕೊಂಡು ದ್ಯೂತದ ಯೋಜನೆಯನ್ನು ಕೈಬಿಡುವಂತೆ ಒತ್ತಾಯಪಡಿಸಲಿಲ್ಲ. ಕಡೆಗೂ ವಿದುರನು ಪಾಂಡವರನ್ನು ಕರೆತರಲು ಇಂದ್ರಪ್ರಸ್ಥಕ್ಕೆ ಹೋಗಲೇಬೇಕಾಯಿತು.

ಧೃತರಾಷ್ಟ್ರ ವಿದುರರ ಸಂವಾದ, ದುರ್ಯೋಧನ ಧೃತರಾಷ್ಟ್ರರ ವಿಚಾರ ಮಂಥನ, ವಿದುರನನ್ನೇ ಧರ್ಮಜನಲ್ಲಿಗೆ ಕಳುಹಿಸುವ ನಿರ್ಣಯವಾಗಿ ವಿದುರ ಹೋಗಿ ಧರ್ಮರಾಯನನ್ನು ಕಂಡು ಧೃತರಾಷ್ಟ್ರನ ಸಂದೇಶವನ್ನು ತಿಳಿಸಿದುದು, ಧರ್ಮಜ ವಿದುರರ ನಡುವೆ ನಡೆದ ಸಂಭಾಷಣೆ-ಇವುಗಳನ್ನೆಲ್ಲ ಆಂಧ್ರಭಾರತ ಕರ್ತನು ತಕ್ಕಷ್ಟು ವಿವರವಾಗಿ ಹೇಳಿದ್ದಾನೆ. ಪಂಪನಿಗೆ ಈ ಗ್ರಂಥವಿಸ್ತಾರ ಬೇಡವಾಯಿತು. ಈ ಎಲ್ಲ ಮಂಥನಗಳ ಫಲಿತಾಂಶ ಧರ್ಮರಾಯನು ಹಸ್ತಿನಾವತಿಗೆ ಬಂದದ್ದು. ಅದಷ್ಟನ್ನೇ ಹೇಳಿ ಪಂಪನು ಕಥೆಯನ್ನು ಮುಂದುವರಿಸಿದ್ದಾನೆ.

ದುರ್ಯೋಧನನ 'ಮನದ ಪುಲ್ವಗೆಯಂ ಪೊಲ್ಲಮೆಯನಱಿಯದೆ ಸಮಸ್ತ ಬಳೋದ್ಯುಕ್ತವಾಗಿ' ಯುಧಿಷ್ಠಿರನು ಹಸ್ತಿನಾವತಿಗೆ ಹೊರಟ ಸುದ್ದಿ ಹೇಳುತ್ತ 'ನಿಯತಿಃ ಕೇನ ಲಂಘ್ಯತೇ' ಎಂದು ಉದ್ಗಾರ ತೆಗೆದು ಭವಿಷ್ಯ ವೃತ್ತಾಂತವನ್ನು ಕವಿ ಸೂಚಿಸಿದ್ದಾನೆ. ಧರ್ಮಜ್ಞನೂ ನೀತಿಪರಾಯಣನೂ ಆದ ಯುಧಿಷ್ಠಿರನೇ ಜೂಜಿನ ಮೋಹಕ್ಕೆ ಸಿಕ್ಕಿಕೊಂಡು ಮುಂದೆ ಒದಗಬಹುದಾದ ಅನರ್ಥಗಳನ್ನು ಲೆಕ್ಕಿಸದೆ ಹೊರಟನೆಂದಮೇಲೆ ಉಳಿದವರ ಪಾಡೇನು? ರಾಜಸೂಯವನ್ನು ಆಚರಿಸಿ ದಾನ ದಕ್ಷಿಣೆಗಳನ್ನು ಯಥೇಷ್ಟವಾಗಿ ಕೊಟ್ಟು ಸಮಸ್ತರನ್ನೂ ಸಂತೋಷಪಡಿಸಿ ವೈಭವದ ಶಿಖರವನ್ನೇರಿದ್ದ ಧರ್ಮರಾಯನು ದ್ಯೂತ ವ್ಯಸನದಿಂದ ಪ್ರಮತ್ತನಾದನು. ಶಕುನಿ ಯಂಥ ಮಾಯಾವಿಯ ಸಲಹೆಯಂತೆ ಏರ್ಪಟ್ಟ ಜೂಜಿನಲ್ಲಿ ಏನೋ ಕುತಂತ್ರವಿರ ಬೇಕೆಂಬ ಯೋಚನೆ ಬಂದರೂ ಅದನ್ನು ಅಲಕ್ಷ್ಯಮಾಡಿ ಹಸ್ತಿನಾವತಿಗೆ ಹೊರಟ ತನ್ನ ಪರಮಶತ್ರುಗಳು ಬೀಸಿದ ಬಲೆಗೆ ಬಿದ್ದನು!

ಪಾಂಡವರನ್ನು ಕರೆತರಲು ವಿದುರನನ್ನೇ ಕಳುಹಿಸಲಾಯಿತೆಂದೂ ಅವನನ್ನು ಧರ್ಮರಾಯನು ವಿಶೇಷವಾಗಿ ಸತ್ಕರಿಸಿ ಅವನು ತಂದ ಸಂದೇಶವನ್ನು ಕೇಳಿ 'ದ್ಯೂತವು ಸರಿಯೆ? ಇದರ ನಿಮಿತ್ತದಿಂದ ನಮ್ಮ ನಮ್ಮಲ್ಲಿ ಜಗಳವಾಗದೆ ಇರದು'[1] ಎಂದು ಕೇಳಿದನಾದರೂ ಅದಕ್ಕೆ ವಿದುರನು ಉತ್ತರ ಹೇಳುವ ಮೊದಲೇ ಧರ್ಮರಾಯನು ಜೂಜಿಗೆ ಒಪ್ಪಿಕೊಂಡು ಹಸ್ತಿನಾವತಿಗೆ ಪ್ರಯಾಣ ನಿರ್ಧಾರವನ್ನು ಕೈಕೊಂಡನೆಂದು ನನ್ನಯನು ವರ್ಣಿಸಿದ್ದಾನೆ. ಇದರಿಂದ ಧರ್ಮರಾಯನ ದ್ಯೂತ

---

[1] 'ಜೂದಂಬು ಕಾರ್ಯಂಬೆ ಚೆಪ್ಪುಮು ಜೂದಂಬು ಕತನ ಭೇದಂಬು ಗಾಕುಂಡನೇರದು ಮಾಲೋನ'

ವ್ಯಸನವನ್ನು ಚೆನ್ನಾಗಿ ನಿರೂಪಿಸಿದಂತಾಯಿತು. ಜೂಜು ಉಚಿತವಲ್ಲವೆಂದು ಅವನಿಗೆ ತೋರಿತಾದರೂ ಅವನು ತನಗೆ ಲಭಿಸಿದ ಜೂಜಾಡುವ ಅವಕಾಶವನ್ನು ಕಳೆದು ಕೊಳ್ಳಲು ಇಷ್ಟಪಡಲಿಲ್ಲ. ಮೂಲಭಾರತದಲ್ಲಿಯೂ ಈ ವಿಷಯ ಸ್ಪಷ್ಟವಾಗಿದೆ. ಪಂಪನು ಈ ಘಟ್ಟದಲ್ಲಿ ವಿದುರನ ಪ್ರಸ್ತಾಪವನ್ನೇ ತರುವುದಿಲ್ಲ. ದುರ್ಯೋಧನ ಧರ್ಮ ರಾಯನಿಗೆ ಆಹ್ವಾನ ಕಳುಹಿಸುವಾಗ ದ್ಯೂತದ ಪ್ರಸ್ತಾಪವನ್ನೇ ಎತ್ತದೆ ' ತಾಮುಂ ಆಮುಂ ಕೆಲವು ದಿವಸಂ ಗೋಷ್ಠಿಯೊಳಪ್ಪಂ ಬರ್ಕೆಂದು ಬಟಿಯನಟ್ಟ 'ದನು. ಅಂಥ ಆಹ್ವಾನವನ್ನು ತಿರಸ್ಕರಿಸಲು ಧರ್ಮರಾಯನಿಗೇನೂ ಕಾರಣವಿರಲಿಲ್ಲ. ಆದರೂ ಅವನು ಹಸ್ತಿನಾಪುರಕ್ಕೆ ಪ್ರಯಾಣ ಹೊರಡಲು ನಿರ್ಧರಿಸಿದಾಗ ಹಲವು ದುರ್ನಿಮಿತ್ತ ಗಳಾದುವೆಂದೂ ಆದರೂ ಲೆಕ್ಕಿಸದೆ ಅವನು ಹೊರಟನೆಂದೂ ಪಂಪನು ವರ್ಣಿಸಿದ್ದಾನೆ. ಹಸ್ತಿನಾವತಿಯನ್ನು ತಲುಪಿದಾಗ ಧರ್ಮರಾಯನನ್ನು ಸ್ವಾಗತಿಸಿ ಸಕಲ ರಾಜ ಮರ್ಯಾದೆಗಳೊಡನೆ ಕರೆತಂದು ದುರ್ಯೋಧನ ಹೊಸದಾಗಿ ನಿರ್ಮಿಸಿದ್ದ ಭವನ ವೊಂದರಲ್ಲಿ ಬಿಡಾರವಮಾಡಿಸಿ ಬಹಳ ಆದರೋಪಚಾರ ಮಾಡಿದನು. ಆಮೇಲೆ ಒಂದು ದಿನ ಸಭೆಯಲ್ಲಿ ಇತರರು ಜೂಜಾಡುತ್ತಿರುವಾಗ ಶಕುನಿಯು ಧರ್ಮರಾಯನಿಗೆ ಅಕ್ಷಕ್ರೀಡೆಯ ಸಲಹೆ ಮಾಡುತ್ತಾನೆ.

ನೋಡುವುದಱಿಕೋಳೇನಟ್ಟುಯೊ
ಳಾಡುತ್ತಿರಲಾಗ ತಂಪುತಿರ್ಪರುಮೆನೆ ನಾ
ಮಾಡುವೆವು ಬನ್ನಿಮೆಂಬುದು
ಮಾಡುವ ಬಗೆ ಒಂದು ನೆತ್ತಮಂ ಧರ್ಮಸುತಂ

ಕರೆದೊಡೆ ಜೂದಿಂಗಂ ಧುರ
ಭರಕಾಱೆಟಕ್ಕೆ ಭೂಭುಜಂಗಾಗದು ಮ
ಯ್ಗರೆದಿರಲೆಂಬ ಪುರಾತನ
ಗುರುವಚನಂ ತನಗೆ ನಿಟ್ಟೆ ಪಟ್ಟುದಱಿಂದಂ

ಧರ್ಮರಾಯನು ಜೂಜಿಗೆ ಸಿದ್ಧನಾದನು. ಇಲ್ಲಿ ಜೂಜಿಗೆ ಕರೆದಾಗ ಭೂಭುಜನು ಹಿಂದೆಗೆಯುವುದು ಅಧರ್ಮವೆಂದು ಯಾರೋ ಪುರಾತನ ಗುರುವು ಹೇಳಿದ್ದನೆಂದು ತಿಳಿಯುತ್ತದೆ. ಆದರೆ ಈ ಗುರು ಯಾರೋ, ಯಾವ ಸಂದರ್ಭದಲ್ಲಿ ಆ ಮಾತನ್ನು ಹೇಳಿದ್ದನೋ ತಿಳಿಯುವುದಿಲ್ಲ. ಪಂಪನಿಗೆ ಆ ವಿವರಗಳಲ್ಲಿ ಆಸಕ್ತಿಯಿಲ್ಲ. ಅವನ ಧರ್ಮರಾಯನಿಗೂ ಆಗ ಅದೆಲ್ಲ ಬೇಕಾಗಿರಲಿಲ್ಲ. ಜೂಜಾಡಲು ಅವನಿಗೆ ಒಂದು ನೆಪ ಬೇಕಾಗಿತ್ತು. ಅದು ರಾಜಧರ್ಮವೆಂದು ಹೇಳಿಕೊಂಡು ತನ್ನ ದ್ಯೂತ ವ್ಯಸನಕ್ಕೆ ಒಂದು ಸಮರ್ಥನೆಯನ್ನು ಕಲ್ಪಿಸಿಕೊಂಡಂತೆ ತೋರುತ್ತದೆ. ನನ್ನಯ ಭಟ್ಟನು ನಮಗೆ ಈ ಸಂದರ್ಭದಲ್ಲಿ ಕೆಲವು ವಿವರಗಳನ್ನು ಕೊಟ್ಟಿದ್ದಾನೆ. ಅಲ್ಲಿ ಮೊದಲು ಧರ್ಮರಾಯನು ದ್ಯೂತದ ಕೆಡುಕುಗಳನ್ನು ಕುರಿತು ಹೇಳುತ್ತ ನಿಕೃತಿ ಮತ್ತು ದ್ಯೂತಗಳೆರಡೂ ಕ್ಷತ್ರಿಯರಿಗೆ ಸರಿಯಲ್ಲವೆಂದೂ ಧರ್ಮನಿತ್ಯರಾದವರು ಅವು

ಗಳನ್ನು ಎಲ್ಲ ಸಮಯಗಳಲ್ಲಿಯೂ ವರ್ಜಿಸಬೇಕೆಂದೂ ಇಲ್ಲವಾದರೆ 'ಅರ್ಥ ಧರ್ಮ ವಿವರ್ಜಿತ'ರಾಗುವುದು ಖಂಡಿತವೆಂದೂ ತಿಳಿಸುತ್ತಾನೆ. ಆಮೇಲೆ ಅವನು ದ್ಯೂತದಲ್ಲಿ ಎರಡು ಭೇದಗಳನ್ನು ಕಲ್ಪಿಸಿ ಕುಟಿಲಮಾರ್ಗಿಗಳೊಡನೆ ಜೂಜಾಡುವುದು ಪಾಪವೆಂದೂ ಧರ್ಮದ್ಯೂತವಾದರೆ ಆಗಬಹುದೆಂದೂ ಆರಂಭಿಸಿ 'ಮಾಯಾದ್ಯೂತದಲ್ಲಿ ಗೆಲ್ಲುವುದು ಮಹಾಪಾಪವೆಂದೂ ಧರ್ಮದ್ಯೂತದಲ್ಲಿ ಗೆಲ್ಲುವುದು ಧರ್ಮಯುದ್ಧದಲ್ಲಿ ಗೆಲ್ಲುವಷ್ಟೇ ಪುಣ್ಯವೆಂದೂ ಅಸಿತನಾದ ದೇವಲನು ಹೇಳಿದನು'[1] ಎಂದು ನುಡಿದು (ಧರ್ಮದ್ಯೂತ ಧರ್ಮಯುದ್ಧ ಎಂಬ ಕಲ್ಪನೆಗಳನ್ನು ಪ್ರಸ್ತಾಪಿಸಿರುವುದೇ ಅಲ್ಲದೆ ಅದಕ್ಕೆ ಋಷಿವಾಕ್ಯದ ಆಧಾರ ತೋರಿಸಿದ್ದಾನೆ.) ಪಂಪನು 'ಪುರಾತನ ಗುರು ವಚನ'ವೆಂದು ಸೂಚ್ಯವಾಗಿ ಹೇಳಿದ್ದಾನೆ. ಆ ಪುರಾತನ ಗುರುವಿನ ಹೆಸರನ್ನು ಅವನು ಹೇಳಲಿಲ್ಲ. ಆದರೆ ಈ ಅಸಿತದೇವಲನು ಯಾರೋ, ಅವನು 'ಧರ್ಮ ದ್ಯೂತ'ವನ್ನು ಕುರಿತು ಈ ಅಭಿಪ್ರಾಯವನ್ನು ಯಾವ ಸಂದರ್ಭದಲ್ಲಿ ವ್ಯಕ್ತಪಡಿಸಿದನೋ ನಮಗೆ ತಿಳಿಯದು. ದೇವಲನೆಂಬ ಋಷಿಯ ಪ್ರಸ್ತಾಪ ಮಹಾಭಾರತದಲ್ಲಿಯೇ ಹಲವು ಸಲ ಬಂದಿದೆ.. ಆದರೆ ಅಲ್ಲೆಲ್ಲಿಯೂ ಈ ಧರ್ಮಶಾಸ್ತ್ರ ವಿಚಾರದ ಪ್ರಸ್ತಾಪವಿಲ್ಲ. ಆದರೆ ಇದು ನನ್ನಯಭಟ್ಟನ ಕಲ್ಪನೆಯೇನೂ ಅಲ್ಲ. ವ್ಯಾಸ ಭಾರತದಲ್ಲಿಯೂ ದೇವಲನ ಈ ಅಭಿಪ್ರಾಯದ ಉಲ್ಲೇಖವಿದೆ:

ಏವ ಮಾಹಾಯ ಮಸಿತೋ ದೇವಲೋ ಮುನಿಸತ್ತಮಃ
ಇಮಾನಿ ಲೋಕದ್ವಾರಾಣಿ ಯೋ ವೈಭ್ರಾಮ್ಯತಿ ಸರ್ವದಾ
ಇದಂ ವೈ ದೇವನಂ ಪಾಪಂ ನಿಕೃತ್ಯಾಕಿತವೈಃ ಸಹ
ಧರ್ಮೇಣತು ಜಯೋ ಯುದ್ಧೇ ತತ್ಪರಂ ನತು ದೇವನಂ

(ಸಭಾ 59-9, 10)

[ಮೋಸಪರರಾದ ಜೂಜುಗಾರರ ಸಂಗಡ ಆಡುವುದು ಪಾಪ. ಧರ್ಮಸಮ್ಮತವಾದ ದ್ಯೂತದಲ್ಲಿ ಗೆಲ್ಲುವುದು ಧರ್ಮಯುದ್ಧದಲ್ಲಿ ಗೆಲ್ಲುವಷ್ಟೇ ಸಾಧುವಾದುದೆಂದು ದೇವಲನು ಹೇಳಿದ್ದಾನೆ.]

ಈ ಋಷಿವಾಕ್ಯವನ್ನು ಅವಲಂಬಿಸಿ ಧರ್ಮರಾಯನು ದ್ಯೂತದ ಆಹ್ವಾನವನ್ನು ಸ್ವೀಕರಿಸುವುದು ಕ್ಷತ್ರಿಯ ರಾಜನಾದ ತನ್ನ ಕರ್ತವ್ಯವೆಂದು ನಿರ್ಧರಿಸಿಕೊಳ್ಳುತ್ತಾನೆ. ಆದರೆ ಶಕುನಿ ಮಹಾಮಾಯಾವಿಯೆಂಬುದೂ ಇನ್ನೂ ಅನೇಕ 'ಕಿತವ'ರು ದುರ್ಯೋಧನನ ಆಸ್ಥಾನದಲ್ಲಿ ಆಗ ಸೇರಿದ್ದರೆಂಬುದೂ ಅವನಿಗೆ ತಿಳಿದಿತ್ತು. ಆದರೂ ಅವನು ತನ್ನ ಜೂಜಿನ ಆಸೆಯನ್ನು ನಿಗ್ರಹಿಸಿಕೊಳ್ಳಲಾರದೆ ವಿದುರನ ಮೂಲಕ ಬಂದ ದುರ್ಯೋಧನನ ಆಹ್ವಾನಕ್ಕೆ ಓಗೊಟ್ಟು ಹಸ್ತಿನಾವತಿಗೆ ಹೊರಡುತ್ತಾನೆ.

---

[1] 'మాయాద్యూతంబున జయించుట, మహాపాతకంబనియును ధర్మద్యూతంబున జయించుట ధర్మయుద్ధంబున జయించినంతియ పుణ్యంబనియును నసితుండయిన దేవలుండు చెప్పె న్.'

ದ್ಯೂತವನ್ನು ಯುದ್ಧಕ್ಕೆ ಹೋಲಿಸಿರುವುದು ಕೊಂಚ ವಿಚಿತ್ರವೆನಿಸುತ್ತದೆ. ಬಹುಶಃ ಎರಡರಲ್ಲಿಯೂ ಜಯಾಪಜಯಗಳು ದೈವಾಯತ್ತವೆಂಬ ಕಾರಣದಿಂದ ಹೀಗೆ ಹೇಳಿರಬಹುದೋ ಏನೋ! ದ್ಯೂತವನ್ನು ಮೊದಲಿನಿಂದಲೂ ನಮ್ಮವರು ಒಂದು 'ವ್ಯಸನ'ವೆಂದು ಹೇಳಿ ಅದು ದೂಷ್ಯವೆಂದೇ ಸಾರಿದ್ದಾರೆ. ಆದರೆ ಇಲ್ಲಿ 'ಧರ್ಮದ್ಯೂತ'ವೆಂಬ ಒಂದು ಮಾತು ಬಂದಿದೆ. ನಿಯಮಾನುಸಾರವಾದ ದ್ಯೂತ ಧರ್ಮಸಮ್ಮತವೆಂದು ಭಾವಿಸಿರುವಂತೆ ತೋರುತ್ತದೆ. ಆದರೆ ವೇದಕಾಲದಿಂದಲೂ ದ್ಯೂತ ಮತ್ತು ದ್ಯೂತಕಾರರ ಅವಹೇಳನವೇ ಕೇಳಿಬರುತ್ತದೆ. ಋಗ್ವೇದದ ಹತ್ತನೆಯ ಮಂಡಲದಲ್ಲಿ ಒಬ್ಬ ಜೂಜುಗಾರನ ಗೋಳಾಟದ ವರ್ಣನೆಯಿದೆ. ಅದ ರಲ್ಲಿನ ಒಂದು ಸೂಕ್ತವನ್ನು ಇಲ್ಲಿ ಗಮನಿಸಬಹುದು.

ಅನ್ಯೇಜಾಯಾಮ್ ಪರಿಮೃಶನ್ತಿ ಅಸ್ಯ
ಯಸ್ಯ ಅಗೃಧತ್ ವೇದನೇ ವಾಜೀಅಕ್ಷಃ
ಪಿತಾ ಮಾತಾ ಭ್ರಾತರಃ ಏನಮ್ ಆಹುಃ
ನಜಾನೀಮಃ ನಯತ ಬದ್ಧಮ್ ಏತಮ್

[ಯಾರ ಸ್ವತ್ತುಗಳು ಅಕ್ಷಕ್ರೀಡೆಯಲ್ಲಿ ಅನ್ಯರ ವಶವಾಗುವುವೋ ಅವನ ಪತ್ನಿ ಯನ್ನು ಅನ್ಯರು ಸ್ಪರ್ಶಿಸುತ್ತಾರೆ. ತಂದೆ ತಾಯಿ ಸೋದರರು 'ಇವನನ್ನು ನಾವು ಅರಿಯೆವು. ಇವನನ್ನು ಹಿಡಿದುಕೊಂಡು ಹೋಗಿ' ಎನ್ನುತ್ತಾರೆ.] ಜೂಜು ಗಾರನ ಈ ವರ್ಣನೆ ಧರ್ಮರಾಯ ದ್ರೌಪದಿಯರ ಚರಿತ್ರೆಯ ಸೂಚನೆ ಯೋಪಾದಿಯಲ್ಲಿದೆ! ಇನ್ನು ಸಂಸ್ಕೃತ ಸಾಹಿತ್ಯದ ಅನೇಕ ಕೃತಿಗಳಲ್ಲಿ ದ್ಯೂತಕಾರನ ವಿಡಂಬನೆಯಿರುವುದು ಸರ್ವವಿದಿತವಾದ ವಿಚಾರ. ಆದರೆ ಮಹಾಭಾರತದ ಈ ಪ್ರಸಂಗದಲ್ಲಿ ಮಾತ್ರ ದ್ಯೂತಕ್ಕೆ ಒಂದು ಮನ್ನಣೆ ದೊರೆತಂತಾಗಿದೆ. ಅದಕ್ಕೆ ದೇವಲ ನೆಂಬ ಸ್ಮೃತಿಕಾರನ ಪುರಸ್ಕಾರವೂ ಇದೆಯೆಂದು ಹೇಳಿದೆ. ರಾಜಸೂಯ ಯಾಗ ದಲ್ಲಿ ಅಕ್ಷಕ್ರೀಡೆ ಒಂದು ಮುಖ್ಯವಾದ 'ಕರ್ಮ'ವಾಗಿದ್ದಿತೆಂದು ತಿಳಿ ಯುತ್ತದೆ! ಅಂತು ಹೇಗೋ ದ್ಯೂತಕ್ಕೆ ಒಂದು ಪ್ರಾಶಸ್ತ್ಯ ಬಂದು ಕ್ಷತ್ರಿಯನನ್ನು ದ್ಯೂತಕ್ಕೆ ಕರೆದರೆ ಅವನು ಆ ಕರೆಯನ್ನು ನಿರಾಕರಿಸಬಾರದೆಂಬ ಸಂಪ್ರದಾಯ ಧರ್ಮರಾಯನ ಕಾಲಕ್ಕೆ ಹುಟ್ಟಿಕೊಂಡಿರಬಹುದು. 'ದ್ಯೂತಕ್ಕೆ ಆಹ್ವಾನ ಬಂದರೆ ಹಿಂತೆಗೆಯುವುದಿಲ್ಲ. ಇದು ನನ್ನ ವ್ರತ'[1] ಎಂದು ಹೇಳಿ ಧರ್ಮರಾಯನು ತಾನೇ ಮಾಡಿಕೊಂಡಿದ್ದ ಒಂದು ವ್ರತವನ್ನು ಇಲ್ಲಿ ಅನುಸರಿಸಿದ್ದಾನೆ. ಇಂಥ ವ್ರತವನ್ನು ಯಾವ ಜೂಜುಗಾರನು ತಾನೇ ಅನುಸರಿಸುವುದಿಲ್ಲ! ಈ ಪ್ರಸಂಗದಲ್ಲಿ ಧರ್ಮ ರಾಯನು ತನ್ನ ಅಮಿತವಾದ ದ್ಯೂತಾಸಕ್ತಿಯನ್ನು ಪ್ರಕಾಶಪಡಿಸಿಕೊಂಡಿದ್ದಾನೆ.

---

[1] ಆಹೂತೋ ನನಿವರ್ತೇಯ ಮಿತಿ ಮೇ ವ್ರತ ಮಾಹಿತಮ್

ಪಂಪ ನನ್ನಯರಿಬ್ಬರೂ ಧರ್ಮರಾಯನ ದ್ಯೂತದ ಚಾಪಲ್ಯವನ್ನು ಸುಸ್ಪಷ್ಟವಾಗಿ ಚಿತ್ರಿಸಿದ್ದಾರೆ.

ಧರ್ಮರಾಯನು ಹಸ್ತಿನಾವತಿಗೆ ಬಂದ ಕೆಲವು ದಿನಗಳ ತರುವಾಯ ಸಭಾ ಮಂದಿರದ ಮಣಿಕುಟ್ಟಿಮದ ಮೇಲೆ ಎಲ್ಲರೂ ಸುಖಾಸೀನರಾಗಿದ್ದಾಗ ಇಷ್ಟಸಂಭಾಷಣೆ ನಡೆದು ತಟ್ಟನೆ ದುರ್ಯೋಧನನು ಯುಧಿಷ್ಠಿರನನ್ನು ದ್ಯೂತಕ್ಕೆ ಹೀಗೆ ಆಹ್ವಾನಿಸಿದ ನೆಂದು ನನ್ನಯಭಟ್ಟನು ಹೇಳಿದ್ದಾನೆ.

'ಅನಘ, ಇಂದು ಹೊತ್ತು ಹೋಗುವುದಕ್ಕಾಗಿ ಕೊಂಚಹೊತ್ತು ಸುಹೃದ್ದ್ಯೂತ ವನ್ನು ಆಡೋಣ. ನೀನು ಜೂಜಿನಲ್ಲಿ ಪ್ರೀತಿಯುಳ್ಳವನೆಂದೂ ಅಕ್ಷಕ್ರೀಡೆಯಲ್ಲಿ ಬಹಳ ದಕ್ಷನೆಂದೂ ಅಕ್ಷಜ್ಞರಿಂದ ಕೇಳಿದ್ದೇವೆ.'[1] ಊಹಿಸಿದಂತೆ ಧರ್ಮರಾಯನು ಇದಕ್ಕೆ ಪ್ರತಿಯಾಗಿ ದ್ಯೂತದ ದುಷ್ಪರಿಣಾಮವನ್ನು ಕುರಿತು ಒಂದು ದೀರ್ಘಭಾಷಣ ವನ್ನೇ ಮಾಡುತ್ತಾನೆ. ಆದರೆ ಆ ವೇಳೆಗೆ ಅವನು ಜೂಜಿನ ಚಾಪಲ್ಯಕ್ಕೆ ಸಿಕ್ಕಿಬಿದ್ದಿದ್ದನು. ಆಗ ಶಕುನಿಯು ಅವನನ್ನು ಮೂದಲಿಸಲು ಯುಧಿಷ್ಠಿರನು ಜೂಜಿಗೆ ಸಂಸಿದ್ಧನಾದನು.

ಧರ್ಮಜನು ದ್ಯೂತಕ್ಕೆ ಒಪ್ಪಿಕೊಂಡ ಮೇಲೆ ನನ್ನಯನ ಸುಯೋಧನ ತಾನೇ ಜೂಜಿಗೆ ಇಳಿಯದೆ ತನ್ನ ಪರವಾಗಿ ತನ್ನ ಸೋದರಮಾವ ಶಕುನಿಯು ಆಡುವನೆಂದೂ ಅವನು ಪಣವಾಗಿಟ್ಟು ಸೋಲಬಹುದಾದ ಧನವನ್ನು ತಾನು ಕೊಡುವೆನೆಂದೂ ಹೇಳುತ್ತಾನೆ. ಅದಕ್ಕೆ ಅವನು ಕೊಡುವ ಕಾರಣವೂ ಬಹಳ ಸ್ವಾರಸ್ಯವಾಗಿದೆ. 'ನಿನ್ನ ಸಂಗಡ ಆಡಲು ನಾನು ಸಮರ್ಥನಲ್ಲ. ನನ್ನ ಪರವಾಗಿ ನಮ್ಮ ಮಾವ ಶಕುನಿ ಆಡುತ್ತಾನೆ.'[2] ದುರ್ಯೋಧನನ ಈ ಮಾತು 'ಮಾನಧನಾಢ್ಯ'ನಾದ ನೃಪತಿಗೆ ಹೊಂದುತ್ತದೆಯೆ? ಶೌರ್ಯದಿಂದ ಶತ್ರುಗಳನ್ನು ನಿಗ್ರಹಿಸಲಾರದೆ ದ್ಯೂತಕ್ಕೆ ಇಳಿದುದೇ ಹೀನಾಯ. ಆ ದ್ಯೂತವೂ ತನ್ನಿಂದ ಆಗದೆಂದು ತಾನೇ ಒಪ್ಪಿಕೊಂಡಿದ್ದಾನೆ! 'ಪಂಪನ' ದುರ್ಯೋಧನ ಈ ಲೋಪಕ್ಕೆ ಗುರಿಯಾಗಿಲ್ಲ. ಅವನು ಶಕುನಿಯ ಸಲಹೆಯಂತೆ ಕಪಟ ದ್ಯೂತಕ್ಕೆ ಹೂಡಿಕೊಂಡದ್ದು ನಿಜವೇ ಆದರೂ ಆ ದ್ಯೂತದ ಕೆಲಸ ವನ್ನು ಬೇರೊಬ್ಬನಿಗೆ ವಹಿಸದೆ ತಾನೇ ಸ್ವಂತವಾಗಿ ನಡೆಸುತ್ತಾನೆ. ಶಕುನಿ 'ನಾಟಿ ವಾಸಗೆ'ಗಳನ್ನು ಸಮಕಟ್ಟಿದುದೆಷ್ಟೋ ಅಷ್ಟೆ! ಅಲ್ಲದೆ ಪಂಪನ ದುರ್ಯೋಧನನು

---

[1] 'ಅನಘ ಸುಹೃದ್ದ್ಯೂತಂಬು ಇಂ
ದೊನರಿಂತಮು ಪ್ರೊದ್ದು ಪೋಕಯನು ನಗುಜೂದಂ
ಬುನುಕುಂ ಬ್ರಿಯುಡವು ದಕ್ಷುಡ
ವನ ವಿಂದುಮು ನಿನ್ನು ಬ್ರೀತಿನಕ್ಷಜ್ಞುಲಚೇನ್'

[2] 'ಅನಘ ಮಾ ಮಾಮ ನಾಕೈ ಕಡಂಗಿ ಜೂದ
ಮಾಡೆಡಿ ನೀ ತ್ಹೋಡ ಗಾದು ನಾಕ.

ಹೀಗೆ ಇದ್ದಕ್ಕಿದ್ದಂತೆ ದ್ಯೂತದ ಪ್ರಸ್ತಾಪವೆತ್ತುವುದಿಲ್ಲ. ಮೊದಲು ಬೇರೆಯವರು ಧರ್ಮರಾಯನ ಇದಿರಿನಲ್ಲಿ ಪಗಡೆಯಾಡಿ ಅವನ ಮನಸ್ಸಿನಲ್ಲಿ ದ್ಯೂತದ ಚಪಲವನ್ನು ಪ್ರಚೋದಿಸಿರುವಾಗ ದುರ್ಯೋಧನನು ಅವನನ್ನು ದ್ಯೂತಕ್ರೀಡೆಗೆ ಆಹ್ವಾನಿಸಲು ಯುಧಿಷ್ಠಿರನಿಗೆ ಆಡುವ ಮನಸ್ಸಾಗಿ ಒಪ್ಪಿಕೊಂಡನು. ಇಲ್ಲಿ ದ್ಯೂತವು ಹೆಚ್ಚು ಸಹಜವಾದ ರೀತಿಯಲ್ಲಿ ಆರಂಭವಾಗಿದೆ. ನನ್ನಯನ ಭಾರತದಲ್ಲಿ ನಡೆದಂತೆ ಇಲ್ಲಿ ದ್ಯೂತದ ಪ್ರಸ್ತಾಪ ಯಾವ ಪೂರ್ವಪೀಠಿಕೆಯೂ ಇಲ್ಲದೆ ಹಟಾತ್ತಾಗಿ ಬರುವುದಿಲ್ಲ. ಯಾವಾಗಲೂ ಜೂಜು ಆಡುವವರಿಗಿಂತ ನೋಡುವವರಿಗೇ ಹೆಚ್ಚು ಆವೇಶವನ್ನುಂಟು ಮಾಡುವುದೆಂದು ಬಲ್ಲವರು ಹೇಳುವುದುಂಟು. ಇತರರು ಆಡುವುದನ್ನು ಕಂಡಾಗ ಜೂಜುಗಾರರು ತಮ್ಮ ಆಸೆಯನ್ನು ನಿಗ್ರಹಿಸಿಕೊಳ್ಳುವುದು ಸಾಧ್ಯವಲ್ಲ.[1] ಧರ್ಮರಾಯನಿಗೂ ಹಾಗೆಯೇ ಆಯಿತು. ಆ ಮುಹೂರ್ತದಲ್ಲಿಯೇ ಆಟಕ್ಕೆ ಆಹ್ವಾನವೂ ಬರಲು ಅವನು ಹಿಂದು ಮುಂದು ನೋಡದೆ ಒಪ್ಪಿಕೊಂಡು ಆಟಕ್ಕಿಳಿದೇ ಬಿಟ್ಟನು! ವೈದಿಕ ಬ್ರಾಹ್ಮಣನಾದ ನನ್ನಯನಿಗಿಂತ ರಾಜಾಸ್ಥಾನದ ಪಂಪನಿಗೆ ಈ ದ್ಯೂತವ್ಯಸನದ ಬಗೆ ಚೆನ್ನಾಗಿ ಅನುಭವಕ್ಕೆ ಬಂದಿರಬೇಕು. ದುರ್ಯೋಧನನು ತನ್ನ ಪರವಾಗಿ ಶಕುನಿ ಮಾವನೇ ಆಡುವನೆಂದು ಹೇಳಿದಾಗ ಧರ್ಮರಾಯನ ಮನಸ್ಸಿನಲ್ಲಿ ಸಂಶಯ ಮೂಡದೆ ಇರಲಿಲ್ಲ. 'ಅನ್ಯುಲಕಯಿ ಯನ್ಯುಲು ಜೂದಂಬಾಡುಟಯೆಂತಯು ವಿಷಮುಂಬು' (ಅನ್ಯರಿಗಾಗಿ ಅನ್ಯರು ದ್ಯೂತವಾಡುವುದು ವಿಷಮ) ಎಂದು ಅವನು ಶಂಕಿಸಿದನಾದರೂ ಅವನು ದುರ್ಯೋಧನನೇ ಆಡಬೇಕೆಂದು ಒತ್ತಾಯಪಡಿಸಲಿಲ್ಲ. 'ಅನ್ಯೇನಾನ್ಯಸ್ಯ ವೈ ದ್ಯೂತಂ ವಿಷಮಂ ಪ್ರತಿಭಾತಿಮೇ' ಎಂದು ವ್ಯಾಸಭಾರತದ ಧರ್ಮರಾಯನೂ ಹೇಳಿದ್ದಾನೆ. ಅಷ್ಟೇಹೊರತು ತಾನೇನೂ ದ್ಯೂತದಿಂದ ಹಿಂತೆಗೆಯಲಿಲ್ಲ; ತನ್ನ ಪರವಾಗಿ ಬೇರೊಬ್ಬನನ್ನು ಜೂಜಿಗೆ ನಿಯಮಿಸುವ ಯೋಚನೆಯನ್ನೂ ಮಾಡಲಿಲ್ಲ. ಶಕುನಿ ಮಹಾಮಾಯಾವಿಯೆಂದು ತಾನೇ ಹಿಂದೆ ವಿದುರನೊಡನೆ ಹೇಳಿದ್ದುದನ್ನು ಆ ಸಮಯದಲ್ಲಿ ದ್ಯೂತವ್ಯಸನಕರ್ಶಿತನಾದ ಧರ್ಮರಾಯನು ಮರೆತಂತೆ ತೋರುತ್ತದೆ.

ಕಪಟಿಯಾದ ದುರ್ಯೋಧನನು ಇಲ್ಲಿ ಶಕುನಿಯ ಸಹಾಯದಿಂದ ಬಹಳ ಚಮತ್ಕಾರವಾಗಿ ಬಲೆ ಬೀಸಿ ಧರ್ಮರಾಯನನ್ನು ಕೆಡವಿದ್ದಾನೆ. ಎಷ್ಟು ಅಪಶಕುನವಾದರೂ ಯಾರೆಷ್ಟು ಅಡ್ಡಿಹೇಳಿದರೂ ಗಮನಿಸದೆ ಅವನು ಜೂಜಿಗೆ ಪ್ರಾರಂಭಿಸಿದನು. 'ನಿಯತಿಃಕೇನ ಲಂಘ್ಯತೇ ಎಂಬ ನುಡಿಯಂ ನನ್ನಿ ಮಾಡಿದನ್' ಇಲ್ಲಿ ಆಡುವವನು ಸುಯೋಧನನೇ ಹೊರತು ಶಕುನಿಯಲ್ಲ. 'ದುರ್ಯೋಧನನೊಕ್ಕಲಂ ಪುಡಿಯೊಳ್ ಪೊರಳ್ವುವಂತೆ ಪಾಸಂಗಿಯಂ ಪೊರಳ್ಚಿ'ದನೆಂದು ಪಂಪನು ವರ್ಣಿಸಿದ್ದಾನೆ. ಮೊದಲು ನಾಲ್ಕು ಆಟ ಸೋತ ಹಾಗೆ ಮಾಡಿ ಎದುರಾಳಿಯನ್ನು ನಂಬಿಸಿ

---

[1] ಈ ಸಂಬಂಧದಲ್ಲಿ 'ಮೃಚ್ಛಕಟಿಕ'ದ ಸಂವಾಹಕನ ಕಥೆ ಸ್ಮರಣೀಯವಾಗಿದೆ.

ಆಮೇಲೆ ಒಂದೊಂದಾಗಿ ದುರ್ಯೋಧನನು ಪಣಗಳನ್ನು ಗೆದ್ದುಕೊಳ್ಳತೊಡಗಿದನು. ಸೋತಂತೆಲ್ಲ ಧರ್ಮರಾಯನಿಗೆ ಆವೇಶ ಹೆಚ್ಚಿತು. ಕ್ರಮಕ್ರಮವಾಗಿ ಅವನು ಹಸ್ತ್ಯಶ್ವರಥಾದಿ ಸಮಸ್ತ ಸೈನ್ಯವನ್ನೂ ಸೋತುಬಿಟ್ಟನು. ಆ ಸಮಯದಲ್ಲಿ ಭೀಮನು ಸಿಟ್ಟುಗೊಂಡು

> • ಭಯಮಱಿಯದ ಕಲಿಯುಂ ಜಾ
> ಗಿಯು ಮಿನಿಸದೆ ನಾಡೆ ಲೋಭಿಯುಂ ಪಂದೆಯು ಮಾ
> ಗಿಯೆ ಬಾಟ್ಸಿಂಗಲ್ಲದೆ ಸೂ
> ಳಿಯ ಕಣ್ ಪಾಸಗೆಯ ಕಣ್ಣ್ಮೇಣುಱುಗುಗುಮೇ

ಎಂದು ದುರ್ಯೋಧನನನ್ನು ಮೂದಲಿಸಿದನು. ಆದರೆ ಕಾರ್ಯಸಾಧಕನಾದ ದುರ್ಯೋಧನನು ಮಾನಧನನೇ ಆದರೂ ಭೀಮನ ಈ ಸೆಣಸು ಮಾತುಗಳಿಗೆ ಸಿಟ್ಟಾಗದೆ ತನ್ನ ಅಸಮಾಧಾನವನ್ನು ನುಂಗಿಕೊಂಡು 'ಮುಂತಣ ಕಜ್ಜಮನೆ ಬಗೆದು' ಆಟದಲ್ಲಿ ಮಗ್ನನಾಗಿದ್ದುಬಿಟ್ಟನು!

ಧರ್ಮರಾಯನು ಪಗಡೆಯಾಡಿ ಜೂಜಿನಲ್ಲಿ ಸೋತನೆಂದು ಹೇಳುವುದು ರೂಢಿಯಾಗಿದೆ. ಆದರೆ ನಮಗೆ ಈಗ ಪರಿಚಿತವಾಗಿರುವಂಥ ಪಗಡೆಯಾಟ ವರ್ಣಿತವಾಗಿಲ್ಲ. ಇಲ್ಲಿ ಜೂಜುಗಾರರು ದಾಳಗಳು ಸೂಚಿಸಿದ ಗರಗಳಿಗೆ ತಕ್ಕಂತೆ ಕಾಯಿಗಳನ್ನು ನಡೆಸಿ ಸೋಲು ಗೆಲವುಗಳನ್ನು ನಿರ್ಣಯಿಸಿಕೊಳ್ಳಲಿಲ್ಲ. ಈ ಆಟದಲ್ಲಿ ಮನುಷ್ಯನ ಬುದ್ಧಿಶಕ್ತಿಯ ಉಪಯೋಗಕ್ಕೆ ಅವಕಾಶವೇ ಇದ್ದಂತೆ ತೋರುವುದಿಲ್ಲ. ಇದು ಕೇವಲ ಅದೃಷ್ಟಪರೀಕ್ಷೆ. ಅಕ್ಷಗಳನ್ನು ಉರುಳಿಸಿದೊಡನೆ ಜಯಾಪಜಯಗಳು ನಿರ್ಧರವಾಗಿ ಬಿಡುತ್ತವೆ—ಹುಡುಗರು ಆಡುವ 'ಸರಿ ಬೆಸ' ಆಟದಲ್ಲಿ ಆದ ಹಾಗೆ!

ಧರ್ಮರಾಯ ದುರ್ಯೋಧನರು ಮೊದಲು ಸುಹೃದ್ದ್ಯೂತವೆಂದೇ ತೊಡಗಿದರಾದರೂ ಪಣವಿಲ್ಲದೆ ಆಟ ಸಾಧ್ಯವೆ? ಅಂಥ ಆಟದಲ್ಲಿ ಆಟಗಾರರಿಗೆ ತೀವ್ರ ಆಸಕ್ತಿ ಹುಟ್ಟುವುದಾದರೂ ಹೇಗೆ? ಆದ್ದರಿಂದ 'ಪಲಗೆಗೆ ಸಾವಿರ ಗದ್ಯಾಣ'ದ ಪಣವು ಏರ್ಪಟ್ಟಿತು. ಯುಧಿಷ್ಠಿರನು ಸೋತು ಪಣಗಳನ್ನು ಕಳೆದುಕೊಂಡ ಹಾಗೆಲ್ಲ ಹೆಚ್ಚು ಹೆಚ್ಚು ಆವೇಶವಶನಾಗಿ ದೊಡ್ಡ ದೊಡ್ಡ ಪಣಗಳನ್ನೊಡ್ಡಿ ತನ್ನ ಭಂಡಾರವನ್ನೇ ಬರಿದು ಮಾಡಿಕೊಂಡನು; ಹಸ್ತ್ಯಶ್ವ ಗಜರಥಗಳನ್ನೂ ಸೂರೆಗೊಟ್ಟನು. ಆದರೂ ಅವನಿಗೆ ಜಯಲಕ್ಷ್ಮಿ ಒಲಿಯಲಿಲ್ಲ. ಕಡೆಗೆ ಬೇರೇನೂ ಮಾರ್ಗ ತೋರದೆ ಧರ್ಮನಂದನನು 'ಎಮ್ಮಾಳ್ವ ನೆಲನೊತ್ತೆ' ಎನ್ನಲು ಸುಯೋಧನನು ಆತುರಪಡದೆ ದೂರಾಲೋಚನೆಮಾಡಿ 'ವರ್ಷಾವಧಿಯೊಳಲ್ಲದೆ ನೆಲನನೊತ್ತೆವಿಡಿಯೆನೆಂದೊಡೆ' ಹನ್ನೆರಡು ವರ್ಷದ ಅರಣ್ಯವಾಸ ಮತ್ತು ಒಂದು ವರ್ಷದ ಅಜ್ಞಾತವಾಸದ ನಿಯಮವನ್ನು ಧರ್ಮನಂದನನೇ ಹೇಳಿದನೆಂದು ಪಂಪನು ವರ್ಣಿಸಿದ್ದಾನೆ. ಒಂದುವೇಳೆ ರಾಜ್ಯವನ್ನು ಪಣವಾಗಿಡಿಸಿ ತಾನು ಗೆದ್ದುಕೊಂಡರೂ ಭೀಷ್ಮ ಧೃತರಾಷ್ಟ್ರಾದಿಗಳು

ರಾಜ್ಯವನ್ನು ತನ್ನ ಪ್ರತಿಕಕ್ಷಿಗೆ ಹಿಂತಿರುಗಿ ಕೊಡಿಸಬಹುದೆಂದು ಸುಯೋಧನನಿಗೆ ಅಂಜಿಕೆ: 'ಗೆಲ್ದಿಂ ಬಟಿಯಂ ಮುಮುಗಂಗಳ್ ಮಗುೞ್ಚಿ ಕೊಡಿಸುವರೆಂಬ ಬಗೆಯೊಳಂ ವಿಕ್ರಮಾರ್ಜುನನುಂ ಭೀಮನುಂ ಯಮಳರುಂ ಎೞೆಪುಕೊಳ್ವರೆಂಬ ಸಂಕೆಯೊಳಂ ಸುಯೋಧನನು ವರ್ಷಾವಧಿಯೊಳಲ್ಲದೆ ನೆಲನನೊತ್ತೆವಿಡಿಯೆನ್' ಎಂದು ಧರ್ಮರಾಯನ ರಾಜ್ಯವನ್ನೇ ದ್ಯೂತದ ಪಣವಾಗಿ ಒಪ್ಪಿಕೊಳ್ಳಲು ನಿರಾಕರಿಸಿದನು. ಇಂತಿಷ್ಟು ವರ್ಷಗಳವರೆಗೆ ರಾಜ್ಯದ ಒಡೆತನವನ್ನು ನೀಡುವ ಒಂದು ಒಪ್ಪಂದವಾದರೆ ಆಮೇಲೆ ಉಪಾಯವಾಗಿ ರಾಜ್ಯವನ್ನು ದಕ್ಕಿಸಿಕೊಳ್ಳಬಹುದೆಂದು ಅವನ ಯೋಚನೆ. ನನ್ನಿಕಾರನಾದ ಧರ್ಮರಾಯನು ತಾನೇ ಸೂಚಿಸಿದ ನಿಯಮವನ್ನು ಮುರಿಯುವುದಿಲ್ಲವೆಂಬುದು ಸುಯೋಧನನಿಗೆ ಗೊತ್ತಿತ್ತು! ತನ್ನ ದ್ಯೂತವ್ಯಸನದಿಂದಲೇ ದ್ರೌಪದಿಗೆ ಅಶ್ರುತಪೂರ್ವವಾದ ಘೋರ ಅಪಮಾನವಾಗಿದ್ದರೂ ಧರ್ಮಪುತ್ರನು ಮತ್ತೆ ದ್ಯೂತವಾಡಿದ ಕಥೆ ವ್ಯಾಸ ಭಾರತದಲ್ಲಿದೆ. ಎಷ್ಟು ದ್ಯೂತವ್ಯಸನಿಯಾದರೂ ಪ್ರತಿಸ್ಪರ್ಧಿಯ ದ್ವೇಷ ದುರಭಿಸಂಧಿಗಳ ಸ್ಪಷ್ಟ ಚಿತ್ರ ಸಿಕ್ಕಿದ ಮೇಲೆಯೂ ಅವನೊಡನೆ ಜೂಜಾಡುವುದುಂಟೆ? ಅನುದ್ಯೂತದ ಪ್ರಸ್ತಾಪ ಪಂಪಭಾರತದಲ್ಲಿಲ್ಲ. ಧರ್ಮರಾಯನೇ ಹನ್ನೆರಡು ವರ್ಷಗಳ ವನವಾಸ ಮತ್ತು ಒಂದು ವರ್ಷದ ಅಜ್ಞಾತವಾಸದ ನಿಬಂಧನೆಯನ್ನು ಮೊದಲೇ ಸೂಚಿಸಿ 'ಒಂದೆ ಪಲಗೆಯೊಳೆ ಗೆಲ್ಲ ಸೋಲಮಪ್ಪಂತು ನನ್ನಿನುಡಿದು ನೆಲನನೊತ್ತೆಯಿಟ್ಟಾಡಿ' ಸೋತನು! ತನ್ನ ರಾಜ್ಯವನ್ನೇ ಸೋತಮೇಲೆ ಧರ್ಮರಾಯನಿಗೆ ಛಲ ಹೆಚ್ಚಿತು. ಮತ್ತೆ ತನ್ನ ಅದೃಷ್ಟವನ್ನೇ ನಂಬಿ ದ್ರೌಪದಿಯನ್ನು ಪಣವಾಗಿಟ್ಟು ಮತ್ತೆ ಸೋತನು.

ಆಂಧ್ರಭಾರತದಲ್ಲಿ ಈ ಪ್ರಸಂಗ ಕೊಂಚ ಭಿನ್ನವಾಗಿದೆ. ಧರ್ಮರಾಯನು ಶಕುನಿಯೊಡನೆ ಪಗಡೆಯಾಟಕ್ಕೆ ತೊಡಗಿ ತನ್ನ ಐಶ್ವರ್ಯವನ್ನೆಲ್ಲಾ ಕಳೆದುಕೊಂಡು ಗಜಸೈನ್ಯ ಅಶ್ವಸೈನ್ಯಗಳನ್ನು ರಥರಥ್ಯಗಳನ್ನೂ ಪಣವಾಗಿಟ್ಟು ಸೋತನು. ಆಗ ವಿದುರನು ರಹಸ್ಯವಾಗಿ ಧೃತರಾಷ್ಟ್ರನನ್ನು ಕಂಡು ದ್ಯೂತದಲ್ಲಿ ಮೋಸದಿಂದ ಯುಧಿಷ್ಠಿರನನ್ನು ಸೋಲಿಸಿ ಅವನ ರಾಜ್ಯೈಶ್ವರ್ಯಗಳನ್ನು ಕಸಿದುಕೊಂಡು ಅಪಮಾನಪಡಿಸಿದರೆ ಮುಂದೆ ಅನರ್ಥ ತಪ್ಪದೆಂದೂ ಕುಲ ವಿನಾಶವೇ ಸಂಭವಿಸುವುದೆಂದೂ ವಿವೇಕ ಹೇಳಿ 'ಈ ದುಷ್ಟ ದ್ಯೂತವನ್ನು ನಿಲ್ಲಿಸು' ಎಂದು ಪ್ರಾರ್ಥಿಸಿದನು. ಆದರೆ ಅಂಧರಾಜನು ಪುತ್ರ ಸ್ನೇಹಪರವಶನಾಗಿ ಏನೂ ಮಾಡಲಾರದೆ ಹೋದನು. ಆಗ ಅವನ ಮನೋದಯವನ್ನು ಗ್ರಹಿಸಿದ ವಿದುರನು ದುರ್ಯೋಧನನಿಗೆ ವಿವೇಕ ಹೇಳಲು ಯತ್ನಿಸಿದನು. ಆದರೆ ಅವನು ವಿದುರನ ಹಿತೋಕ್ತಿಗಳನ್ನು ಕೇಳುವುದುಂಟೆ? ವಿದುರನ ಪ್ರಯತ್ನ ವಿಫಲವಾಯಿತು.

ಶಕುನಿ 'ಇಂದುಕುಲೇಶ್ವರ! ಎಲ್ಲ ಧನವನ್ನೂ ಸೋತಿರುವೆ. ಇನ್ನೇನಿದೆ ನಿನ್ನಲ್ಲಿ? ನೀನು ಪಣವಿಡದೆ ಮುಂದೆ ಆಡಬಯಸೆನು' ಎಂದು ಮೂದಲಿಸಲು ಧರ್ಮರಾಯನು 'ಧಾರುಣೀತಲವನ್ನೆಲ್ಲ' ಪಣವಾಗಿ ಒಡ್ಡಿ ಸೋತುಹೋದನು. ಈ

ಘಟ್ಟದಲ್ಲಿ ನನ್ನಯಭಟ್ಟ ವರ್ಷಾವಧಿಯ ಪ್ರಸ್ತಾಪವನ್ನೇ ಎತ್ತಿಲ್ಲ. ಧರ್ಮರಾಯ 'ಬಲವದ್ವ್ಯಸನಾಭಿಭೂತ'ನಾಗಿ ಸಮಸ್ತ ರಾಜ್ಯವನ್ನೂ ಕಳೆದುಕೊಂಡನು. 'ದೇವಾದಾಯ ಬ್ರಾಹ್ಮದಾಯ.ಗಳನ್ನು ಬಿಟ್ಟು ಉಳಿದ ಮಹೀತಲವನ್ನೂ ಬ್ರಾಹ್ಮಣ ರನ್ನು ಬಿಟ್ಟು ಸಮಸ್ತ ಪ್ರಜೆಗಳನ್ನೂ ರಾಜಪುತ್ರರನ್ನೂ ಒಂದೊಂದು ಆಟಕ್ಕೆ ಪಣವಾಗಿ ಇಟ್ಟು ಯುಧಿಷ್ಠಿರನು ಸೋತನಂತೆ!'[1]

ಇಷ್ಟೆಲ್ಲ ಅನರ್ಥವಾದರೂ ದ್ಯೂತವ್ಯಸನಿಯಾದ ಧರ್ಮರಾಯ ಎಚ್ಚೆತ್ತು ಕೊಳ್ಳಲಿಲ್ಲ. ಅವನು ಮತ್ತೆ ಜೂಜಿಗೆ ತೊಡಗಿ 'ಆಯತ ಬಾಹುಗಳೂ ಆದಿತ್ಯ ತೇಜರೂ ಆದಿ ಭೂಪಾಲಕ ಚರಿತರೂ ಅಭಿಮಾನ ಸತ್ಯರತರೂ ಆದ ತನ್ನ ತಮ್ಮಂದಿ ರನ್ನು ಕ್ರಮವಾಗಿ ಸಹದೇವ ನಕುಲ ವಾಸವಸುತ ಭೀಮಸೇನರನ್ನು' ಪಣವಾಗಿ ಒಡ್ಡಿ ಸೋತು ಅವರನ್ನು ದಾಸ್ಯಕ್ಕೆ ಗುರಿಮಾಡಿದನು. ಕೊನೆಗೆ ಧರ್ಮರಾಯನು ತನ್ನನೇ ಪಣವಾಗಿ ಒಡ್ಡಿಕೊಂಡು ಸೋತಮೇಲೆ ಶಕುನಿಯು ತನ್ನ ಸಹಜ ದುರ್ಬುದ್ಧಿ ಯನ್ನು ಮೆರೆದು 'ರಾಜನೇ, ಹೀಗೆ ನಿನ್ನನ್ನೇ ಏಕೆ ಒಡ್ಡಿಕೊಂಡೆ? ನಿನಗೆ ಇನ್ನೂ ಧನವಿದೆ. ಕಮಲಾಕ್ಷಿಯಾದ ಪಾಂಚಾಲಿಯನ್ನೇಕೆ ಮರೆತೆ? ಅವಳು ನಿನ್ನ ಸ್ವತ್ತಲ್ಲವೆ?'[2] ಎಂದು ಪ್ರಶ್ನಿಸಿದನಂತೆ. ಶಕುನಿಯ ಈ ಮೂದಲಿಕೆಯ ಹಿಂದಿನ ದುರುದ್ದೇಶ ದ್ಯೂತಪ್ರಮತ್ತನಾದ ಯಮನಂದನನಿಗೆ ಆಗ ಗೋಚರಿಸಲಿಲ್ಲ. ಅವನು ಸ್ವಲ್ಪವೂ ಯೋಚಿಸದೆ 'ರೂಪಶೀಲ ಸಂಪತ್ತುಳ್ಳ ದ್ರೌಪದಿಯನ್ನೊಡ್ಡುತ್ತೇನೆ' ಎಂದು ನುಡಿದು ದಾಳ ಉರುಳಿಸಿ ಸೋತುಬಿಟ್ಟನು!

ಪಂಪಭಾರತದಲ್ಲಿ ಧರ್ಮರಾಯನು ತನ್ನ ತಮ್ಮಂದಿರನ್ನು ಪಣವಾಗಿಡುವ ಪ್ರಸಂಗವಾಗಲಿ ತನ್ನನ್ನೇ ಒಡ್ಡಿ ಸೋಲುವ ಪ್ರಸಂಗವಾಗಲಿ ಇಲ್ಲ. ದ್ರೌಪದಿಯನ್ನು ಪಣವಾಗಿಡಲು ಶಕುನಿಯ ಪ್ರೇರಣೆ ಏನೂ ಇಲ್ಲ, 'ವಿಕ್ರಮಾರ್ಜುನ ವಿಜಯ'ದಲ್ಲಿ! ಈ ಪ್ರಕರಣವನ್ನು ಹೆಚ್ಚಾಗಿ ಲಂಬಿಸಲು ಮನಸ್ಸಾಗಲಿಲ್ಲ, ಪಂಪನಿಗೆ. ಆದ್ದರಿಂದಲೇ ಅವನು ಯುಧಿಷ್ಠಿರನು ದ್ರೌಪದಿಯನ್ನು ಜೂಜಿನಲ್ಲಿ ಪಣವಾಗಿಟ್ಟು ಸೋತ ವೃತ್ತಾಂತವನ್ನು ಅತ್ಯಂತ ಸಂಕ್ಷೇಪವಾಗಿ ಹೇಳಿ 'ಏನೇನಾಗದೊ ಪಾಪದ ಫಳಮೆಯ್ದೆ ವಂದ ದೆವಸದೊಳಾರ್ಗಂ' ಎಂದು ಉದ್ಗಾರ ತೆಗೆದು ಈ ಪ್ರಕರಣಕ್ಕೆ ಮುಕ್ತಾಯ ಹಾಡಿಬಿಟ್ಟದ್ದಾನೆ. ಅಲ್ಲದೆ ಪಂಪನ ಕಲ್ಪನೆಯಂತೆ ದ್ರೌಪದಿ ಧರ್ಮರಾಯನ

---

1 ದೇವಭೋಗ ಬ್ರಾಹ್ಮಣ ವೃತ್ತುಲುದಕ್ಕ ದಕ್ಕಿನ ಮಹೀತಲಂಬುನು ಬ್ರಾಹ್ಮಣುಲುದಕ್ಕ ಸರ್ವ ಪ್ರಕೃತಿಜನುಲನು ರಾಜಪುತ್ರುಲನೊಕ್ಕೊಕ್ಕ ಯೊಡ್ಡುನನೊಡ್ಡಿ ಯೋಟುಪಡಿಯೆ

2 .... ... ಇಟ್ಲೇಲ ನಿನ್ನೊಡ್ಡಿತಧಿಪ ನೀಕುನೊಂಡು ಧನಮು ಗಲದು ಮಱಚಿತೆಟ್ಲು ಕಮಲಾಕ್ಷಿ ಪಾಂಚಾಲಕನ್ಯ ನೀಕು ಧನಮು ಗಾದೆ।

ಸಭಾ-II-196

ಹೆಂಡತಿಯೇ ಅಲ್ಲ. ಅವಳು ವಿಕ್ರಮಾರ್ಜುನನ ಧರ್ಮಪತ್ನಿ. ಅವಳನ್ನು ಅರ್ಜುನನಿಗೊಬ್ಬನಿಗೇ ಮದುವೆ ಮಾಡಿಸಿದ ಪಂಪ ಈ ಪ್ರಸಂಗದಲ್ಲಿ ಅದನ್ನು ಸಂಪೂರ್ಣವಾಗಿ ಮರೆತಂತೆ ತೋರುತ್ತದೆ !

ನನ್ನಯಭಟ್ಟ ವ್ಯಾಸರ ಕಥಾ ಸೂತ್ರವನ್ನೇ ಅನುಸರಿಸಿದ್ದಾನೆ ; ಪಂಪನಂತೆ ಅವನು ಸ್ವಾತಂತ್ರ್ಯ ವಹಿಸಿಲ್ಲ. ರಾಜಸೂಯ ಮಾಡಿದ ಪ್ರಭುವೂ ಆ ಯಾಗಕ್ಕೆ ಸಹಾಯಕರಾದ ಅವನ ತಮ್ಮಂದಿರೂ ದ್ರೌಪದೀ ಸಹಿತರಾಗಿ ಕೌರವನ ದಾಸ್ಯಕ್ಕೆ ಗುರಿಯಾದ ಕಥೆಯನ್ನು ನನ್ನಯಭಾರತದಲ್ಲಿ ಕಾಣಬಹುದು .

ಧರ್ಮರಾಯನು ತನ್ನ ಸಮಸ್ತ ಭಂಡಾರವನ್ನೂ ಚತುರಂಗ ಸೈನ್ಯವನ್ನೂ ರಾಜ್ಯವನ್ನೂ ಸೋತು ಕಳೆದುಕೊಂಡಮೇಲೆ ತನ್ನ ತಮ್ಮಂದಿರನ್ನೂ ಕೊನೆಗೆ ತನ್ನನ್ನೂ ಪಣವಾಗಿಟ್ಟು ಸೋತು ದುರ್ಯೋಧನನ 'ದಾಸ'ನಾದನು. ಅನಂತರ ಅವನು ಪಾಂಚಾಲಿಯನ್ನು ಪಣವಾಗಿಟ್ಟು ಸೋತು ಅವಳನ್ನೂ 'ದಾಸ್ಯ'ಕ್ಕೆ ಗುರಿ ಮಾಡಿದನು. ಆಗ ದುರ್ಯೋಧನನು ಜಯೋನ್ಮತ್ತನಾಗಿ ಮುಂದುಗಾಣದೆ ದ್ರೌಪದಿಯನ್ನು ಸಭೆಗೆ ಕರೆತರುವಂತೆ ವಿದುರನಿಗೆ ಆಜ್ಞಾಪಿಸಿದನು. ಆಗ ಧರ್ಮಜ್ಞನಾದ ವಿದುರನು 'ತಿಳಿದು ತಿಳಿದೂ ಸರ್ಪಗಳನ್ನು ಸಿಟ್ಟಿಗೆಬ್ಬಿಸುವ ಮೂರ್ಖನಾಗುವೆಯೇಕೆ ? ದ್ಯೂತದ ಫಲ ಸಹ ಬಿದಿರಿನ ಫಲದಂತೆ ಮೂಲವಿನಾಶಕ್ಕೆ ಕಾರಣವಾಗುವುದು'[1] ಎಂದು ಎಚ್ಚರಿಸಿದನಾದರೂ ಅವನ ಮಾತಿಗೆ ಎಚ್ಚತ್ತುಕೊಳ್ಳುವ ಸ್ಥಿತಿಯಲ್ಲಿ ದುರ್ಯೋಧನನಿರಲಿಲ್ಲ. ಅವನು ಒಡನೆಯೇ ಪ್ರಾತಿಕಾಮಿಯೆಂಬವನನ್ನು ಕರೆದು 'ನೀನು ಹೋಗಿ ದ್ರೌಪದಿಯನ್ನು ಕರೆದು ತಾ' ಎಂದು ಆಜ್ಞಾಪಿಸಿದನು.

ಪ್ರಾತಿಕಾಮಿಯು ಅಂತಃಪುರಕ್ಕೆ ಹೋಗಿ ದ್ರೌಪದಿಗೆ ಭಕ್ತಿಯಿಂದ ನಮಸ್ಕಾರ ಮಾಡಿ ಧರ್ಮರಾಯನು ಜೂಜಿನಲ್ಲಿ ಸೋತ ವೃತ್ತಾಂತವನ್ನು ತಿಳಿಸಿ ಆಕೆ ರಾಜಸಭೆಗೆ ಬರಬೇಕೆಂದು ತಿಳಿಸಿದನು. ಆಗ ಅವಳು 'ಯಾವ ಯುಗದಲ್ಲಿಯೂ ಎಂಥ ದುಷ್ಟಕಿತವನೇ ಆದರೂ ತನ್ನ ಹೆಂಡತಿಯನ್ನೇ ಪಣವಾಗಿ ಒಡ್ಡಿ ಸೋತ ಭರ್ತನುಂಟೆ? ಇದು ಬಹಳ ಅಪೂರ್ವ ಸಂಗತಿಯೇ ಆಯಿತು. ಇಂದುಕುಲಜನು ಮೊದಲು ತನ್ನನ್ನು ಸೋತು ಆಮೇಲೆ ನನ್ನನ್ನು ಸೋತನೆ? ಅಥವಾ ಮೊದಲೇ ನನ್ನನ್ನು ಸೋತನೆ, ಅಣ್ಣ, ನಿನಗೆ ತಿಳಿದಿದ್ದರೆ ಹೇಳು. ತಿಳಿಯದಿದ್ದರೆ ಹೋಗಿ ಆ 'ಕಿತವ'ನನ್ನು ಕೇಳಿ ಬಂದು ಹೇಳು. ಆಮೇಲೆ ನನ್ನನ್ನು ಕರೆದುಕೊಂಡು

---

1. 'ಏಲಯಾಶೀ ವಿಷಂಬುಲ ನೆಱಿಂಗಿಯೆಱಿಂಗಿ ಮೂರ್ಖವೃತ್ತಿ
ಯಲಿಗಿಂಚೆದು ? ಜೂದಂಬುನ ನೆಗ್ಗು ಪುಟ್ಟು ದೀನನಯ್ಯೆಡು
ಫಲಂಬು ವೇಣುಫಲಂಬು ನುಂಬೋಲೆ ಸಹ ಮೂಲವಿನಾಶಂಬುನಕು
ನಿಮಿತ್ತಂಬಗುನ್'

ಹೋಗುವೆಯಂತೆ '[1] ಎಂಬಳು. ಅವನು ಸಭೆಗೆ ಹಿಂತಿರುಗಿ ದ್ರೌಪದಿಯ ಪ್ರಶ್ನೆಯನ್ನು ಧರ್ಮರಾಯನಿಗೆ ವರದಿ ಮಾಡಿದನು. ಆದರೆ ಅವನು 'ದುರೋದರ ಪರಾಜಯ ದುಃಖಚೇತಸ್ಕ'ನಾಗಿದ್ದು ಪ್ರಾತಿಕಾಮಿಗೆ ಏನೂ ಪ್ರತಿವಚನವನ್ನೇ ನುಡಿಯಲಿಲ್ಲ. ಆಗ ಅವನು ದುರ್ಯೋಧನನಿಗೆ ನಡೆದ ವೃತ್ತಾಂತವನ್ನು ಹೇಳಲು ಅವನು 'ಆ ಧರ್ಮಸಂದೇಹ ಈ ಸಭೆಯಲ್ಲಿಯೇ ಪರಿಹಾರವಾಗುವುದು, ಅವಳನ್ನು ಬೇಗ ಕರೆದುಕೊಂಡು ಬಾ' ಎಂದು ಆಜ್ಞಾಪಿಸಿದನು. ಆಗ ವಿಧಿಯಿಲ್ಲದೆ ದ್ರೌಪದಿ 'ಏಕವಸ್ತ್ರಯುನಧೋನೀವಿಯುನವಿರಳಗಳಿತ ನಯನೋದಕಬಿಂದು ಸಂದೋಹ ಪರಿಪೀಡ್ಯಮಾನ ಪೀನಸ್ತನ ಪರಿಧಾನಾಂತರೆಯು' ಆಗಿ ಪ್ರಾತಿಕಾಮಿಯ ಹಿಂದೆ ಸಭೆಗೆ ಬಂದು ಕುರುವೃದ್ಧನ ಸಮೀಪದಲ್ಲಿ ನಿಂತಳು. ಇದನ್ನು ನೋಡಲಾರದೆ ಪಾಂಡವರು ಲಜ್ಜಾವನಿತರಾದರು.

ದ್ರೌಪದಿಯು ಪ್ರಾತಿಕಾಮಿಯ ಹಿಂದೆ ಸಭೆಗೆ ಬಂದವಳು ಕುರುವೃದ್ಧನ ಬಳಿ ನಿಂತುದನ್ನು ನೋಡಿ ಜಯೋನ್ಮತ್ತನಾದ ಸುಯೋಧನನು 'ಈ ಪ್ರಾತಿಕಾಮಿ ವೃಕೋದರನಿಗೆ ಅಂಜಿದ್ದಾನೆ. ನೀನು ಹೋಗಿ ದ್ರೌಪದಿಯನ್ನು ಎಳೆದು ತಾ' ಎಂದು ದುಶ್ಶಾಸನನಿಗೆ ಆಜ್ಞಾಪಿಸಿದನು. ನಿರ್ದಯನೂ ಪಾಪಚಿತ್ತನೂ ಆದ ದುಶ್ಶಾಸನನ ಬರುವಿಕೆಯನ್ನು ತಿಳಿದ ದ್ರೌಪದಿ ಬಹಳ ಭಯಪಟ್ಟು ಗಾಂಧಾರಿಯ ಬಳಿಗೆ ಹೋಗಲು ಪ್ರಯತ್ನಿಸಿದಳಾದರೂ ಪ್ರಯೋಜನವಾಗಲಿಲ್ಲ. ದುಶ್ಶಾಸನನು ಓಡಿಬಂದು ಅವಳನ್ನು ತಡೆದನು. ಆಗ ಅವಳು ವಿಧಿಯಿಲ್ಲದೆ 'ನಾನು ರಜಸ್ವಲೆ. ನನ್ನನ್ನು ಮುಟ್ಟದಿರು. ಏಕವಸ್ತ್ರೆಯಾಗಿರುವ ನಾನು ಗುರು ಬಂಧುಜನಗಳ ನಡುವೆ ಸಭೆಗೆ ಬರಲು ಹೇಗೆ ಸಾಧ್ಯ?' ಎಂದು ಪ್ರಶ್ನಿಸಿದಳು. ದುಶ್ಶಾಸನನು ಅದೇನನ್ನೂ ಕೇಳದೆ 'ನೀನು ಏಕವಸ್ತ್ರೆಯಾದರೇನು ವಿವಸ್ತ್ರೆಯಾದರೇನು?' ಎಂದು ಗರ್ಜಿಸಿ ಅವಳ ತಲೆಗೂದಲನ್ನು ಹಿಡಿದು ಅವಳನ್ನು ಸಭೆಗೆ ಎಳೆದು ತಂದನು. ದ್ರೌಪದಿ ಅಸಹಾಯಳಾಗಿ ಆ ಸಭೆಯ ಮಧ್ಯದಲ್ಲಿ ನಿಂತು ದುಶ್ಶಾಸನನ ದೌರ್ಜನ್ಯವನ್ನು ಹಿರಿಯರಿಗೆ ದೂರಿಕೊಂಡಳು. ಆದರೆ ಅವಳ ಮೊರೆಯನ್ನು ಆ ಸಭೆಯಲ್ಲಿ ಯಾರೂ ಕೇಳಿಸಿಕೊಳ್ಳಲಿಲ್ಲ! ದ್ರೌಪದಿ ಭೀತಳಾದಳು. 'ಅನೇಕ ಧರ್ಮಜ್ಞರಿಂದ ಕೂಡಿದ ಈ ಭರತವೀರರ ವಂಶವು ಇಂದು ಅಧರ್ಮ ಸಂಪದದಿಂದ ಅತಿನಿಂದ್ಯವಾಯಿತು.

---

1 ಏಯುಗಂಬುನಂದು ನೆಟ್ಟಿದುಷ್ಕೃತವುಂಡು ಭಾರ್ಯನೊಡ್ಡಿಯೋ
ಟುಪಡಿನ ಭರ್ತ ಗಲಡೆ ಯಿದಿ ವಿನಂಗ ಗಡುನಪೂರ್ವಂಬಯ್ಯೆ
ನಿಟ್ಲು ಸೆಯುನೊಕ್ಕೊ ಯಿಂದು ಕುಲಂಡು ಮುನ್ನು ತನ್ನೋಟುವಡಿ
ಮಱಿ ನನ್ನುನೋಟುವಡಿಯೆನೊ ನನ್ನುಮುನ್ನೋಟುವಡಿ ವಿಭುಂಡು
ಗ್ರನ್ನೋಟು ವಡಿಯೆನೋ ಯನ್ನನಾಕು ನೆಱಗಜೆಪ್ಪುಮು ದೀನಿ
ನೀವೆಱುಗುದೇನಿ ಎಱುಂಗವೇನಿ ಯಕ್ಕತವುನಡಿಗಿವಚ್ಚಿ ಮಱಿ
ನನ್ನುಂದೋಡ್ಕೊನಿ ಪೋವನಗುನ್'

ಎಂದು ಬಗೆದು ಕೃಷ್ಣನನ್ನು ಸ್ಮರಿಸಿಕೊಂಡಳು.'[1] 'ಜಗತ್ರಯ ವಿಜಯ ಭುಜ ವೀರ್ಯ ಸನಾಥರಾದ ನಾಥರನ್ನುಳ್ಳವಳಾಗಿಯೂ ಪಾಂಚಾಲಿ ಅನಾಥೆಯಂತೆ ಭಯಾರ್ತಳಾಗಿ ಆಪ್ತಜನ ಶರಣ್ಯನಾದ ಜಗನ್ನಾಥ ಜನಾರ್ದನನನ್ನು ಸ್ಮರಿಸುತ್ತ ಕಪಟದ್ಯೂತ ಮಧುಮದೋನ್ಮತ್ತನಾದ ಧರ್ಮಪುತ್ರನ ನಿಮಿತ್ತದಿಂದುದ್ಗತವಾದ ಪಾಂಡವ ಪರಾಜಯ ದಹನವನ್ನು ತನ್ನ ರೂಕ್ಷಕಟಾಕ್ಷ ವೀಕ್ಷಣ ವಚನಗಳಲ್ಲಿ' ಹರಿಯಿಸುತ್ತಿದ್ದ ದ್ರೌಪದಿಯನ್ನು ಕಂಡು ಭೀಮಸೇನನು ಕೋಪಾವಿಷ್ಟನಾಗಿ ಪಾಪ ದ್ಯೂತದಲ್ಲಿ ಪ್ರವರ್ತಿಸಿ ಅಧರ್ಮವನ್ನಾಚರಿಸಿದ ಯುಧಿಷ್ಠಿರನ ಕೈಗಳನ್ನು ಸುಡ ಬೇಕೆಂದು ಗರ್ಜಿಸಿ ದ್ರೌಪದಿಯನ್ನು ಪಾಪದ್ಯೂತದಲ್ಲಿ ಪಣವಾಗಿಟ್ಟದು ದೊಡ್ಡ ತಪ್ಪೆಂದು ಅಣ್ಣನನ್ನು ಆಕ್ಷೇಪಿಸಿದನು. ಅರ್ಜುನ ಅವನನ್ನು ಸಾಂತ್ವನಗೊಳಿಸಲು ಬಹಳ ಶ್ರಮಪಡಬೇಕಾಯಿತು. ಸುಹೃದ್ಯೂತ ಧರ್ಮಯುದ್ಧಗಳೆರಡೂ ಕ್ಷತ್ರಿಯ ಕರ್ತವ್ಯಗಳೆಂದೂ ಅವುಗಳಿಗೆ ಕರೆ ಬಂದಾಗ ವಿಮುಖರಾಗುವುದು ಶುಭಕ್ಷಾತ್ರಧರ್ಮಕ್ಕೆ ವಿರುದ್ಧವೆಂದೂ ಅರ್ಜುನ ಭೀಮನಿಗೆ ಬಗೆಬಗೆಯಾಗಿ ಸಮಾಧಾನ ಹೇಳ ಬೇಕಾಯಿತು !

ಕೌರವರಲ್ಲಿ ಒಬ್ಬನಾದ ವಿಕರ್ಣನು 'ಅನ್ಯಾಯ ಶ್ರವಣ ವಿಕರ್ಣರಾಗಿ' ಮಿಣ್ಣನಿದ್ದ ಸಭ್ಯರನ್ನು ಎಚ್ಚರಿಸಿ ಸಮಚಿತ್ತರಾದ ಬುದ್ಧಿವಂತರು ದ್ರೌಪದಿಯ ಪ್ರಶ್ನೆಗೆ ತಕ್ಕ ಉತ್ತರ ಕೊಡದಿದ್ದರೆ ನರಕಭಾಜನರಾಗುವರೆಂದು ಘೋಷಿಸಿದನು. ಧರ್ಮಪುತ್ರನು ತನ್ನನ್ನೇ ಸೋತುಕೊಂಡು ದಾಸನಾದ ಮೇಲೆ ದ್ರೌಪದಿಯನ್ನು ಪಣವಿಟ್ಟು ಜೂಜಾಡಲು ಅವನಿಗೆ ಅರ್ಹತೆಯಿರಲಿಲ್ಲವೆಂದು ದ್ರೌಪದಿಯ ಆಕ್ಷೇಪಣೆ. ವಿಕರ್ಣನು ತನ್ನ ಮಾತಿಗೆ ದ್ರೋಣ ಭೀಷ್ಮ ವಿದುರಾದಿಗಳು ಯಾರೂ ಉತ್ತರ ನೀಡದೆ ಇದ್ದುದನ್ನು ಕಂಡು ಅವನೇ ನ್ಯಾಯತೀರ್ಮಾನ ಹೇಳಿದನು. 'ಜೂಜು, ಬೇಟೆ, ಪಾನ, ಬಹುಭಕ್ಷಣಾಸಕ್ತಿ ಎಂಬ ನಾಲ್ಕು ದುರ್ವ್ಯಸನಗಳಿಗೆ ಸಿಕ್ಕಿದ ಪುರುಷನು ಧರ್ಮವನ್ನು ಬಿಟ್ಟು ವರ್ತಿಸುತ್ತಾನೆ. ಅಂಥವನ ಕೃತ್ಯಗಳು ಒಪ್ಪತಕ್ಕವಲ್ಲ. ಪರಾಜಿತನಾದ ಧರ್ಮರಾಯನು ದ್ಯೂತವ್ಯಸನದಿಂದ ಪಾಂಡವರೆಲ್ಲರಿಗೂ ಸಾಧಾರಣ ಧನವಾದ ಪಾಂಚಾಲಿಯನ್ನು ಪಣವಾಗಿಟ್ಟದ್ದು ಅಧರ್ಮ. ಆದ್ದರಿಂದ ದ್ರೌಪದಿ ಅಧರ್ಮವಿಜಿತೆ. ಆ ಕೋಮಲೆಯನ್ನು ಇಲ್ಲಿಗೆ ಕರೆತಂದದ್ದು ಅನ್ಯಾಯ.'

ಆದರೆ ವಿಕರ್ಣನ ಈ ನ್ಯಾಯತೀರ್ಮಾನವನ್ನು ಆ ಸಭೆಯಲ್ಲಿ ಯಾರು ಗೌರವಿಸಬೇಕು? ಆಗ ಕರ್ಣನು 'ಅಧಿಕ ಪ್ರಸಂಗಿ'ಯಾದ ವಿಕರ್ಣನನ್ನು ಭರ್ತ್ಸನೆ ಮಾಡಿದುದೇ ಅಲ್ಲದೆ ದ್ರೌಪದಿಯು ಅನೇಕ ಭರ್ತೃಕೆಯಾದ ಬಂಧಕಿ

---

[1] ಸರ್ವಧರ್ಮಸಂ । ವಿದುಲನ ಸುನ್ನ ಯೀ ಭರತವೀರುಲ
ವಂಶಮು ನೇಡಧರ್ಮಸಂ । ಪದನತಿ ನಿಂದ್ಯಮಯ್ಯೆನನಿ ಭಾಮಿನಿ
ಗೃಷ್ಣುದಲಂಚೆ ಭೀತಯ್ಯೆ

ಯೆಂದೂ ಅಂಥವಳನ್ನು ವಿವಸ್ತ್ರಳನ್ನಾಗಿ ಮಾಡಿ ಸಭೆಗೆ ಕರೆತಂದರೂ ಧರ್ಮ ವಿರೋಧವಲ್ಲವೆಂದೂ ನೀಚಾತಿನೀಚವಾದ ಮಾತುಗಳನ್ನಾಡಿದನು. ಇದನ್ನು ಕೇಳಿದ ದುರ್ಯೋಧನನು ಪಾಂಡವರ ಮತ್ತು ದ್ರೌಪದಿಯ ವಸ್ತ್ರಗಳನ್ನು ಸೆಳೆದು ಕೊಳ್ಳುವಂತೆ ಆಜ್ಞೆ ಮಾಡಿದನು. ಹೀಗೆ ಕರ್ಣನು ಅಕಸ್ಮಾತ್ ಆಡಿದ ಒಂದು ಮಾತೇದ್ರೌಪದಿಯ ವಸ್ತ್ರಾಪಹರಣಕ್ಕೆ ನಿಮಿತ್ತವಾಯಿತು !

ಪಂಪನು ಈ ಕಥೆಯನ್ನು ಇಷ್ಟು ದೀರ್ಘವಾಗಿ ಬೆಳೆಸಿಲ್ಲ. ದ್ಯೂತ ಮುಗಿದ ಮೇಲೆ ದುರ್ಯೋಧನನು 'ಗೆಲ್ದ ಕಸವರಮೆಲ್ಲಂ ಬಂದುದು ಪಾಂಚಾಳ ರಾಜ ತನೂಜೆಯೊರ್ವಳ್ ಬಂದಳಿಲ್ಲ. ಆಕೆಯಂ ತನ್ನಿಂ' ಎಂದು ಪ್ರಾತಿಕಾಮಿಯನ್ನೂ ದುಶ್ಶಾಸನನನ್ನೂ ಒಟ್ಟಿಗೆ ಕಳುಹಿಸಿದನು. ಅವರು ಆಗಲೇ ಬೀಡಿಗೆ ಹೋಗಿ 'ಪಾಂಚಾಲಿಯಂ ಕಣ್ಗೆಡೆ ಜಡಿದು ಮುಡಿಯಂ ಪಿಡಿದು ತನ್ಮಧ್ಯದಿಂ ಸಭಾ ಮಧ್ಯಕ್ಕೆ' ತಂದರು. ಸಭೆಯಲ್ಲಿ ಭೀಷ್ಮ ಕೃಪ ದ್ರೋಣಾದಿಗಳು ಬೇಡ ಬೇಡವೆಂದರೂ ಲಕ್ಷ್ಯ ಮಾಡದೆ 'ಉಟ್ಟ ಉಡುವರಂ ಕೆಯ್ದಂದು ದುಶ್ಶಾಸನಂ ತನಗಂ ಮೆಲ್ಲನೆ ಮೃತ್ಯು ಸಾರೆ ತೆಗೆದಂ ಧಮ್ಮಿಲ್ಲಮಂ ಕೃಷ್ಣೆಯಾ.' ಆಗ ಭೀಮು ದ್ರೌಪದಿಯ ದುಃಖದಿಂದ ನೊಂದು ಕೌರವರ ವಧೆ ಮಾಡುವುದಾಗಿ ಪ್ರತಿಜ್ಞೆ ಮಾಡಿದನು. ಅವನ ಪ್ರತಿಜ್ಞಾ ವಚನಗಳನ್ನು ಕೇಳಿ 'ಕೌರವರ್ ಕಡಲ ನಡುವಣ ಪರ್ವತದಂತಳ್ಳಾಡಿ' ಹೋದರು. ಆಗ ಬುದ್ಧಿವೃದ್ಧನಾದ ಭೀಷ್ಮನು ಧೃತರಾಷ್ಟ್ರನಿಗೆ ಮುಂದೊದಗಲಿರುವ ಅನರ್ಥವನ್ನು ತಪ್ಪಿಸಲು ಯಾರಿಗೂ ಸಾಧ್ಯವಲ್ಲವೆಂದೂ 'ಕೈ ಮೀರಿದ ಮನೆವಾರ್ತೆಗೆ ಬುದ್ಧಿ ಹೇಳಲು' ಅವಕಾಶವಿಲ್ಲವೆಂದೂ ಹೇಳಿ ತನ್ನ ನಿವಾಸಕ್ಕೆ ಹೊರಟುಹೋದನು. ಆಗ ಧೃತರಾಷ್ಟ್ರನು ಏನೇನು ಹೇಳಿದರೂ ದುರ್ಯೋಧನನು ಒಪ್ಪದಿರಲು ನಿರಾಶನಾಗಿ ಕೊನೆಗೆ 'ದ್ರೌಪದಿ ಪರಸ್ತ್ರೀಯಂ ನಮ್ಮ ಮನೆಯೊಳಿರಿಸುವುದುಚಿತಮಲ್ಲೆಂದು' ಕಳುಹಿಸಿದನು. ಮೊದಲೇ ಆಗಿದ್ದ ಒಪ್ಪಂದದಂತೆ ಪಾಂಡವರು ವನವಾಸಕ್ಕೆ ಹೊರಟುಹೋದರು.

ಪಂಪಭಾರತದಲ್ಲಿ ದ್ರೌಪದಿಯ ವಸ್ತ್ರಾಪಹರಣದ ಕಥೆಯಿಲ್ಲವಾದರೂ ದುಶ್ಶಾ ಸನನು ಅವಳ 'ಉಟ್ಟುದುವರಂ ಕೈದಂದ'ನೆಂಬ ಮಾತು ಬಂದಿದೆ. ಶ್ರೀ ಮಹಾ ಭಾರತದಲ್ಲಿ ಈ ವೃತ್ತಾಂತವಿರುವ ಸಂಗತಿ ಪಂಪನಿಗೆ ತಿಳಿದಿತ್ತು. ಅವನು ಬುದ್ಧಿ ಪೂರ್ವಕವಾಗಿಯೇ ಅದನ್ನು ಬಿಟ್ಟುಬಿಟ್ಟದ್ದಾನೆ. ದ್ರೌಪದಿಗೆ ಇಂಥ ಕ್ರೂರವಾದ ಅಪಮಾನ ನಡೆದ ಮೇಲೆ ಮತ್ತೆ ಧರ್ಮರಾಯನು ಹನ್ನೆರಡು ವರ್ಷ ವನವಾಸ ಮತ್ತು ಒಂದು ವರ್ಷ ಅಜ್ಞಾತವಾಸ ಮಾಡುವ ಪಣವನ್ನು ಗೊತ್ತುಮಾಡಿಕೊಂಡು ಎರಡ ನೆಯ ಬಾರಿ ಜೂಜಾಡಲು ಸಿದ್ಧನಾದನೆಂದರೆ ಅದು ಇನ್ನೆಷ್ಟು ಪ್ರಬಲವಾದ ದ್ಯೂತ ವ್ಯಸನವೋ ಧರ್ಮರಾಯನದು ! ಭಾರತ ಕಥೆಯಲ್ಲಿ ಇದು ಒಂದು ನುಂಗಲಾರದ ತುತ್ತೇ ಸರಿ. ಸಭೆಯಲ್ಲಿ ಪಾಂಚಾಲಿಗೆ ಅಪಮಾನ ನಡೆದಾಗ ಭೀಮಾರ್ಜುನರು ಕೋಪದಿಂದ ಪ್ರತಿಜ್ಞೆಗಳನ್ನೇ ಮಾಡಿದವರು ಅಣ್ಣನು ಮತ್ತೆ ಶಕುನಿಯೊಡನೆ ಜೂಜ

ಗಿಳಿದಾಗ ಒಪ್ಪಿ ಸುಮ್ಮನಿದ್ದರೆ? ಭೀಮನು ಯುಧಿಷ್ಠಿರನ ಮೇಲೆಯೇ ಸಿಟ್ಟು ಗೊಂಡು ಪಾಪದ್ಯೂತವನ್ನಾಡಿದ ಅವನ ತೋಳುಗಳನ್ನೇ ಸುಡಲು ಸಿದ್ಧನಾದವನು[1] ಅನುದ್ಯೂತದ ಪ್ರಸಂಗದಲ್ಲಿ ತೆಪ್ಪಗಿರುವುದು ಸಹಜವೆನಿಸುವುದಿಲ್ಲ. ದ್ರೌಪದಿ ಏನು ಬಾಯಿಸತ್ತವಳೆ? ಕ್ರೂರವಾದ ಅಪಮಾನವನ್ನು ತಾನೇ ಅನುಭವಿಸಿದ್ದು ಅವಳು ಧರ್ಮರಾಯನನ್ನು ಜೂಜಿನಿಂದ ತಡೆಯಲು ಪ್ರಯತ್ನವನ್ನಾದರೂ ಮಾಡದಿರುವುದು ಸಂಭವವೆಂದು ತೋರುವುದಿಲ್ಲ. ಅನುದ್ಯೂತ ಜಗದ್ವಿಪರೀತವಾದ ನಡತೆಯೇ ಸರಿ. ಅಥವಾ ಕರೆದಾಗಲೆಲ್ಲಾ ಜೂಜಾಡುವುದು 'ನಿರ್ಮಲ ಕ್ಷಾತ್ರ ಧರ್ಮ' ವೆಂದು ನಂಬಿದ ಧರ್ಮರಾಯನು ಎರಡನೆಯ ಸಲವೂ ಜೂಜಿಗೆ ಸಿದ್ಧನಾಗಿರಬಹುದೇನೋ! ದುರ್ಯೋಧನನ ದುರಭಿಸಂಧಿ ಶಕುನಿಯ ಕಪಟತಂತ್ರ ಎಲ್ಲವೂ ಕರತಲಾಮಲಕವಾಗಿ ತಿಳಿದ ಮೇಲೆಯೂ ಧರ್ಮರಾಯನು ಜೂಜಿಗೆ ಒಪ್ಪಿದನೆಂದು ನಂಬುವುದು ಸುಲಭವಲ್ಲ. ಆದ್ದರಿಂದ ಈ ಪ್ರಸಂಗದಲ್ಲಿ ಪಂಪನ ಕಲ್ಪನೆ ಔಚಿತ್ಯ ಪರಿಪೂರ್ಣವಾಗಿವೆಯೆಂದು ತೋರುತ್ತದೆ.

ದ್ರೌಪದಿಯ ವಸ್ತ್ರಾಪಹರಣದ ಕಥೆ ಪ್ರಸಿದ್ಧವಾದದ್ದು. ದುರ್ಯೋಧನನ ಆಣತಿಯಂತೆ ದುಶ್ಶಾಸನನು ದ್ರೌಪದಿಯನ್ನು ಸಭಾಮಧ್ಯಕ್ಕೆ ಎಳೆತಂದು ನಿಲ್ಲಿಸಲು ಅವಳು ಪ್ರಾತಿಕಾಮಿಯ ಕೈಲಿ ಹೇಳಿ ಕಳುಹಿಸಿದ್ದ ಪ್ರಶ್ನೆಯನ್ನೇ ಮತ್ತೆ ಕೇಳಿದಳು. ಯುಧಿಷ್ಠಿರನು ತನ್ನನ್ನು ತಾನು ಜೂಜಿನಲ್ಲಿ ಸೋತುಕೊಂಡು ತರುವಾಯ ಬೇರೊಬ್ಬರನ್ನು ಸೋಲಲು ಅವನಿಗೆ ಅಧಿಕಾರವಿತ್ತೆ? ಈ ಪ್ರಶ್ನೆಗೆ ಯಾರು ಉತ್ತರ ಹೇಳಬೇಕು? ಸ್ವಯಂ ಭೀಷ್ಮರೇ ಅದಕ್ಕೇನೂ ಉತ್ತರ ಹೇಳಲಾರದೆ ಧರ್ಮರಾಯನೇ ಅವಳ ಸಂದೇಹವನ್ನು ನಿವಾರಿಸಬಲ್ಲವನೆಂದು ಹೇಳಿಬಿಟ್ಟರು. ಧರ್ಮರಾಯನು ದ್ಯೂತಪರಾಜಿತನಾಗಿ ನೊಂದು ತಲೆ ಬಗ್ಗಿಸಿ ಕುಳಿತುಬಿಟ್ಟಿದ್ದನು. ಅವನು ದ್ರೌಪದಿಗೆ ಪ್ರತಿವಚನವನ್ನೇ ಕೊಡಲಿಲ್ಲ. ಈ ಮಧ್ಯೆ ಕೌರವನು ಪಾಂಡವರ ಮೌನದಿಂದ ಧೈರ್ಯವಹಿಸಿ ದ್ರೌಪದಿಯ ಸೀರೆಯನ್ನು ಸೆಳೆಯುವಂತೆ ತನ್ನ ತಮ್ಮನಿಗೆ ಸೂಚಿಸಲು ಅವನು ವಿಚಾರವೇ ಇಲ್ಲದೆ ಅವಳ ಸೆರಗು ಹಿಡಿದೆಳೆದನು. ದ್ರೌಪದಿ ಭೀತಳಾಗಿ ಕೃಷ್ಣನನ್ನು ಮನಸ್ಸಿನಲ್ಲಿ ಧ್ಯಾನಿಸಿದಳು. ಅವಳ ಸೀರೆ ಅಕ್ಷಯವಾಯಿತು! ದುಶ್ಶಾಸನನು ಸೀರೆಯನ್ನು ಸೆಳೆದು ಕೈ ಸೋತು ಉಕ್ಕುಗುಂದಿದನು. ಅವನು ಎಳೆದುಹಾಕಿದ ಬಟ್ಟೆ ಬೆಟ್ಟದ ಹಾಗೆ ರಾಶಿ ಬಿತ್ತು.

ದ್ರೌಪದಿ ದುಶ್ಶಾಸನನಿಂದ ಅಪಮಾನಿತಳಾದಾಗ ಕೃಷ್ಣನನ್ನು ಸ್ಮರಿಸಿದಳೆಂದು ನನ್ನಯಭಟ್ಟ ಹೇಳಿರುವನೇ ಹೊರತು ಅವಳು ಶ್ರೀಕೃಷ್ಣನನ್ನು ವಿಶೇಷವಾಗಿ ಸ್ತೋತ್ರ ಮಾಡಿದಳೆಂದಾಗಲಿ ಅವಳ ಪ್ರಾರ್ಥನೆಗೆ ಕರಗಿ ಕೃಷ್ಣನು ಪ್ರತ್ಯಕ್ಷನಾದನೆಂದಾಗಲಿ

---

1 'ಬಾಹುತೇ ಸಂಪ್ರದಕ್ಷಾಮಿ ಸಹದೇವಾಗ್ನಿ ಮಾನಯ 2-61-2.
'ಪಾಪದ್ಯೂತಂಬುನ ಬ್ರವರ್ತಿಂಚಿಯು ಧರ್ಮ ಪ್ರವೃತ್ತುಂಡವ ಯಿತಿಕಾವುನ ಭವದ್ಬಾಹುದಾಹಂಬು ಸೇಯುವಲಯು' ಆಂಧ್ರಭಾರತ

ಹೇಳಿಲ್ಲ. ಮೂಲಭಾರತದಲ್ಲಿ ದ್ರೌಪದಿ ಶ್ರೀಕೃಷ್ಣನನ್ನು ಬಹಳವಾಗಿ ಸ್ತೋತ್ರ ಮಾಡಿದ್ದಾಳೆ :

> ಆಕೃಷ್ಯಮಾಣೇ ವಸನೇ ದ್ರೌಪದ್ಯಾ ಚಿಂತಿತೋ ಹರಿಃ
> ಗೋವಿಂದ ದ್ವಾರಕಾವಾಸಿನ್ ಕೃಷ್ಣ ಗೋಪೀಜನಪ್ರಿಯ
> ಕೌರವೈಃ ಪರಿಭೂತಾಂ ಮಾಂ ಕಿಂ ನಜಾನಾಸಿ ಕೇಶವ
> ಹೇ ನಾಥ ಹೇ ರಮಾನಾಥ ಪ್ರಜಾನಾಥಾರ್ತಿ ನಾಶನ
> ಕೌರವಾರ್ಣವ ಮಗ್ನಾನಾಂ ಮಾಮುದ್ಧರಸ್ವ ಜನಾರ್ದನ
> ಕೃಷ್ಣ ಕೃಷ್ಣ ಮಹಾಯೋಗಿನ್ ವಿಶ್ವಾತ್ಮನ್ ವಿಶ್ವಭಾವನ
> ಪ್ರಪನ್ನಾಂ ಪಾಹಿ ಗೋವಿಂದ ಕುರುಮಧ್ಯೇऽ ವಸಿ'ದತೀಂ

ಭಗವಂತನನ್ನು ಸ್ತೋತ್ರಮಾಡುತ್ತ ದುಃಖಿತಳಾದ ದ್ರೌಪದಿಯು ಕೈಯಿಂದ ಮುಖ ಮುಚ್ಚಿಕೊಂಡು ವಿಶೇಷವಾಗಿ ಅತ್ತಳಂತೆ!

ನನ್ನಯಭಟ್ಟನು ಈ ಭಾಗವನ್ನು ಅನುವಾದ ಮಾಡಿಲ್ಲ. ಸಾಮಾನ್ಯವಾಗಿ ಆಂಧ್ರ ಭಾರತಕರ್ತ ಮೂಲಕಥೆಯನ್ನೇ ಅನುಸರಿಸಿ ಬರೆಯುವವನು, ವಿಸ್ತಾರವಾದ ಭಾಗಗಳನ್ನು ಸಂಗ್ರಹಿಸಿ ಬರೆದಿರುವನೇ ಹೊರತು ಮುಖ್ಯವಾದ ಯಾವ ಭಾಗವನ್ನೂ ಕೈಬಿಟ್ಟಿಲ್ಲ. ಪಂಪನಂತೆ ಸ್ವತಂತ್ರಕಲ್ಪನೆಗಳನ್ನೂ ತಂದು ಜೋಡಿಸಿಲ್ಲ. ಅಂಥವನು ವಸ್ತ್ರಾಪಹರಣದಂಥ ಪ್ರಧಾನ ಸನ್ನಿವೇಶದಲ್ಲಿ ದ್ರೌಪದಿ ಭಗವಂತನನ್ನು ಸ್ತೋತ್ರ ಮಾಡಿದ ಸಂಗತಿಯನ್ನೇ ಹೇಳದೆ ಬಿಡುವುದು ಸಂಭವವಲ್ಲ. ಬೇರೆ ಸಂದರ್ಭಗಳಲ್ಲೂ ನನ್ನಯ ಶ್ರೀಕೃಷ್ಣನ ದೈವತ್ವವನ್ನು ಧಾರಾಳವಾಗಿ ಕೊಂಡಾಡಿದ್ದಾನೆ. ಆದ್ದರಿಂದ ನನ್ನಯನಿಗೆ ದೊರೆತಿದ್ದ ಸಂಸ್ಕೃತಭಾರತದ ಪ್ರತಿಯಲ್ಲಿ ಈ ಶ್ಲೋಕಗಳು ಬಹುಶಃ ಇದ್ದಿರಲಾರವೆಂದು ಊಹಿಸಬಹುದು. ನನ್ನಯನ ಕಾಲಾನಂತರ ಈ ಶ್ಲೋಕಗಳು ಭಾರತದಲ್ಲಿ ಸೇರ್ಪಡೆಯಾಗಿರಬಹುದು.

ದ್ರೌಪದಿಯ ಸ್ತೋತ್ರ ದ್ವಾರಕಿಯಲ್ಲಿ ಪತ್ನೀ ಸಮೇತನಾಗಿದ್ದ ಕೃಷ್ಣನಿಗೆ ಕೇಳಿಸಿ ಅವನು ಅಕ್ಷಯ ವಸ್ತ್ರವನ್ನು ಅನುಗ್ರಹಿಸಿದನು. ಪಂಪಭಾರತದಲ್ಲಿ ಈ ಪ್ರಸ್ತಾಪವೇ ಇಲ್ಲ. ದುಶ್ಶಾಸನನು ದ್ರೌಪದಿಯ ಧಮ್ಮಿಲ್ಲಕ್ಕೆ ಕೈ ಹಾಕಿದಾಗ ಭೀಮನ ಕಣ್ಣಲ್ಲಿ ನೆತ್ತರು ತುಳುಕಿತು. ಅವನು ಮಹಾ ಕ್ರೂರಪ್ರತಿಜ್ಞೆ ಮಾಡಿದನು. 'ನೋಡಿದಂ ಕಲುಷದಿಂ ಗಾಂಡೀವಿ ಗಾಂಡೀವಮಂ', 'ನಕುಲ ಸಹದೇವರಿರ್ವರು ಮಕಾಲ ಕಾಲಾಗ್ನಿ ರೂಪಮಂ ಕೈಕೊಂಡರ್.' ಇವರನ್ನೆಲ್ಲ ಸಮಾಧಾನ ಪಡಿಸುವುದು ಧರ್ಮಪುತ್ರನಿಗೆ ಕಷ್ಟವಾಯಿತು. ಆ ಸಮಯದಲ್ಲಿ ದ್ರೌಪದಿಯು ಕೋಪದಿಂದ ಶಪಥ ಮಾಡಿದಳು :

> ಮುಡಿಯಂ ಪಿಡಿದೆಳೆದವನಂ
> ಮುಡಿಯಿಸಿ ಮತ್ತವನ ಕರುಳ ಪಿಣಿಲಿಂದೆನ್ನಂ
> ಮುಡಿಯಿಸುಗಾ ಮುಡಿಯಂ ದಲ್
> ಮುಡಿಯೆಂ ಗಳ ಮಾಗಳಂತೆ ಯೆನ್ನಯ ಮುಡಿಯಂ

ಈ ಮಾತುಗಳನ್ನು ಕೇಳಿ ಭೀಮಸೇನನ ಸೈರಣೆಯ ಕಟ್ಟೆ ಕಿತ್ತು ಹೋಯಿತು. ಮೊದಲೇ ಕೋಪಗೊಂಡಿದ್ದ ಭೀಮಸೇನನಿಗೆ ದ್ರೌಪದಿಯ ಶಪಥದಿಂದ 'ಮರುಳ್ಗೆ ಧೂಪಮಂ ತೋಱಿದ ಮಾೞ್ಕೆ'ಯಾಗಿ ಹೋಯಿತು. ಅವನು ದುಶ್ಶಾಸನನ ವಧೆ ಮಾಡಿ ಅವನ ಕರುಳುಗಳಿಂದ ದ್ರೌಪದಿಯ ಮುಡಿಯನ್ನು ಕಟ್ಟುವುದಾಗಿಯೂ ದುರ್ಯೋಧನನ ತೊಡೆಗಳನ್ನು ಗದೆಯಿಂದ ನುಚ್ಚುನೂರು ಮಾಡುವುದಾಗಿಯೂ ಪ್ರತಿಜ್ಞೆ ಮಾಡಿದನು. ಅಷ್ಟು ಸಾಲದೆ ಸಮಸ್ತ ಸಭಿಕರನ್ನೂ ಸಾಕ್ಷಿಯಾಗಿಟ್ಟು ಕೊಂಡು 'ಬಿಗುರ್ತೀ ಕೌರವರ್ ಕೂಡೆ ನೂರ್ವರುಮಂ ಕೊಲ್ವೆನಿದೆನ್ನ ಪೂಣ್ಕೆ' ಎಂದು ಘೋಷಿಸಿದನು. ಅವನ ಗರ್ಜನೆ ಕೇಳಿ ಕೌರವರು ಭೀತಿಯಿಂದ ಕುಗ್ಗಿ ಹೋದರು. ಭೀಷ್ಮನು ಶಶಿವಂಶವು ದುಷ್ಟನಾದ ದುರ್ಯೋಧನನಿಂದ ಉಱಿದು ಹೋಗುವುದೆಂದು ಹೇಳಿ ಸಭೆಯಿಂದ ಎದ್ದುಹೋದನು. ಧೃತರಾಷ್ಟ್ರನು ಬೇರೇನೂ ದಿಕ್ಕು ತೋರದೆ ದ್ರೌಪದೀ ಪಾಂಡವರನ್ನು ಸಂತೈಸಿ ಕಳುಹಿಸಿಕೊಟ್ಟನು. ಅವರು ಕಾಡಿಗೆ ಪ್ರಯಾಣ ಮಾಡಿದರು. ಇಲ್ಲಿ ಕಥೆಯ ಘಟನಾವಳಿ ಮಹಾವೇಗದಿಂದ ಸಾಗಿ ಪಾಂಡವರ ವನಪ್ರಯಾಣದಲ್ಲಿ ಪರ್ಯವಸಾನ ಹೊಂದುತ್ತದೆ. ಇಲ್ಲಿ ಶ್ರೀಕೃಷ್ಣನ ಪ್ರಸ್ತಾಪವೇ ಇಲ್ಲ. ಒಂದು ಘಟನೆಯ ಫಲವಾಗಿ ಇನ್ನೊಂದು ಉದ್ಭವಿಸಿ ಕಥೆ ತನ್ನ ಸಹಜತೆಯಿಂದ ಶೋಭಿಸುತ್ತದೆ. ಇಲ್ಲಿ ಯಾವ ಪವಾಡದ ವರ್ಣನೆಯೂ ಇಲ್ಲ. ಇಲ್ಲಿ ವಿಕರ್ಣ ವಿದುರರ ಚರ್ಚೆಯಾಗಲಿ ಕರ್ಣನ ನೀಚ ವಾಕ್ಯಗಳಾಗಲಿ ಇಲ್ಲ. ಮಹಾಭಾರತದ ಕಥೆಯ ಪ್ರಕಾರ ಈ ಸನ್ನಿವೇಶದಲ್ಲಿ ಕರ್ಣನಾಡುವ ಮಾತುಗಳು ವೀರನಿಗೆ ತಕ್ಕುವಲ್ಲ. ಅಸಹಾಯಳಾಗಿ ಸಿಕ್ಕುಬಿದ್ದ ಮಹಿಳೆಯೊಬ್ಬಳನ್ನು ಕುರಿತು ಅಪಹಾಸ್ಯದ ಮಾತುಗಳನ್ನಾಡುವುದು ಕರ್ಣನಂಥವ ನಿಗೆ ಭೂಷಣವಲ್ಲ. 'ಕರ್ಣನ ಪಡೆ ಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ' ಎಂದು ಭಾವಿಸಿದ ಪಂಪ ಈ ಪ್ರಸಂಗದಲ್ಲಿ ಕರ್ಣನ ಪ್ರಸ್ತಾಪವನ್ನೇ ತರದೆ ಬಿಟ್ಟಿರುವುದು ಬಹಳ ಸಮಂಜಸವಾಗಿದೆ. ಇಲ್ಲಿ ದ್ರೌಪದಿಗೆ ಇನ್ನು ಹೆಚ್ಚಿನ ಅಪ ಮಾನವಾಗದೆ ತಪ್ಪಿದುದಕ್ಕೆ ಕಾರಣ ಭೀಮಸೇನನ ಪ್ರತಿಜ್ಞಾ ವಚನ, ಭೀಷ್ಮರ ಎಚ್ಚರಿಕೆಯ ಮಾತು, ಧೃತರಾಷ್ಟ್ರನ ಅಂತರಂಗದಲ್ಲಿ ಮೂಡಿದ ಭೀತಿ, ಇಷ್ಟೇ ಹೊರತು ಬೇರಾವ ಅದ್ಭುತ ವ್ಯಾಪಾರವೂ ಅಲ್ಲ. !

ಪಂಪಭಾರತದಲ್ಲಿ ದ್ರೌಪದಿಯ ಕೇಶಾಪಕೃಷ್ಟಿಯೇ ಭೀಮನ ರೌದ್ರ ಕೋಪ ವನ್ನು ಕೆರಳಿಸಿ ಅವನಿಂದ ಘೋರ ಪ್ರತಿಜ್ಞೆಗಳನ್ನು ಮಾಡಿಸಿತು. ಅದಕ್ಕೆ ವಸ್ತ್ರಾಪ ಹರಣದಂಥ ನೀಚಪ್ರಯತ್ನ ಅವಶ್ಯಕವಾಗಲಿಲ್ಲ. ದ್ರೌಪದಿಯ 'ಕೇಶಪಾಶ ಪ್ರಪಂಚ' ದಲ್ಲಿಯೇ ಕೌರವ ಕುಲವು ಅಡಗಿ ಹೋಯಿತೆಂದು ಪಂಪ ಬೇರೊಂದು ಸಂದರ್ಭದಲ್ಲಿ ಹೇಳಿದ್ದಾನೆ. ಭೀಮನು ಸಮಸ್ತ ದಾಯಾದರನ್ನೂ ಕೊಲ್ಲುವೆನೆಂದು ಘೋರ ಪ್ರತಿಜ್ಞೆ ಮಾಡಲು ಕಾರಣವಾದ ಅಪರಾಧವೂ ಅಷ್ಟೇ ಘೋರವಾಗಿರಬೇಕೆಂದೂ ದ್ರೌಪದಿಯ ಮುಂದಲೆಯ ಕೂದಲನ್ನು ದುಶ್ಶಾಸನನು ಹಿಡಿದೆಳೆದ ಮಾತ್ರದಿಂದ ಇಂಥ

ಪ್ರತಿಕ್ರಿಯೆ ಬರುವುದು ಸಂಭವವಲ್ಲವೆಂದೂ ಭಾವಿಸುವವರುಂಟು. ಆದರೆ ಈ ಭಾವನೆ ಸಲ್ಲದು. ಅಂತಃಪುರವಾಸಿನಿಯಾದ ಮಹಾರಾಜ್ಞಿಯೊಬ್ಬಳನ್ನು ಅವಳ ಇಷ್ಟಕ್ಕೆ ವಿರೋಧವಾಗಿ ಬಲವಂತದಿಂದ ಸಭೆಗೆ ಎಳೆದು ತಂದದ್ದು ಮಹಾಪರಾಧ ವಲ್ಲವೆ? ಪಾಂಡವರ ಪಟ್ಟದ ರಾಣಿಯನ್ನು ದಾಸಿಯೆಂದು ಕರೆದು ಅವಮಾನ ಪಡಿಸಿದ ಪಾತಕಿಗಳಿಗೆ ಬೇರೇನು ಶಿಕ್ಷೆ ಸಮನಾದೀತು?

ವ್ಯಾಸರು ಭಾರತವನ್ನು ರಚಿಸಿದಾಗ ದ್ರೌಪದಿಯ ವಸ್ತ್ರಾಪಹರಣ ಕಥೆಯನ್ನು ಹೇಳಿದ್ದರೆ?[1] ಅಥವಾ ಆಮೇಲಿನ ವಿಷ್ಣುಭಕ್ತರು ಈ ಪ್ರಸಂಗವನ್ನು ಸೇರಿಸಿದರೆ? ಈ ಕಥೆ ಯಾವಾಗ ಪ್ರಚಾರಕ್ಕೆ ಬಂದಿತು? ಮಹಾಭಾರತಕ್ಕೆ ಅದು ಸೇರ್ಪಡೆಯಾ ದುದು ಯಾವ ಕಾಲದಲ್ಲಿ? ಈ ಪ್ರಶ್ನೆಗಳಿಗೆ ಉತ್ತರ ಸುಲಭವಲ್ಲ. ಇದನ್ನು ಹೀಗೆಯೇ ಸರಿಯೆಂದು ನಿರ್ಧರಿಸಲು ಶಕ್ಯವಲ್ಲ. ಒಂದು ವೇಳೆ ಈ ಕಥೆ ವ್ಯಾಸರ ಅನಂತರ ಯಾರೋ ಕಟ್ಟಿ ಮಹಾಭಾರತದಲ್ಲಿ ಸೇರಿಸಿದರೆಂದು ಭಾವಿಸಿದರೂ ಈ ಸೇರ್ಪಡೆ ಬಹಳ ಹಿಂದಿನ ಕಾಲದಲ್ಲಿಯೇ ಆಗಿಬಿಟ್ಟದ್ದಿತು. ಏಕೆಂದರೆ ಭಾಸ ಕವಿಯ 'ದೂತವಾಕ್ಯ'ದಲ್ಲಿ ಕೃಷ್ಣನು ಪಾಂಡವ ದೂತನಾಗಿ ದುರ್ಯೋಧನನ ಸಭೆಗೆ ಹೋದಾಗ ಅವನು ದ್ರೌಪದಿಯ ವಸ್ತ್ರಾಪಹರಣದ ಚಿತ್ರವೊಂದನ್ನು ನೋಡುತ್ತ ಕುಳಿತಿದ್ದನೆಂದು ಹೇಳಿದೆ. 'ದೂತ ಘಟೋತ್ಕಚ'ದಲ್ಲಿಯೂ ಕೌರವರು ಅತ್ತಿಗೆಗೆ ಮಾಡಿದ ಅಪಮಾನದ ಪ್ರಸ್ತಾಪ ಬಂದಿದೆ. ಆದ್ದರಿಂದ ಭಾಸನ ಕಾಲಕ್ಕೇ ಈ ಕಥೆ ಪ್ರಚಾರದಲ್ಲಿತ್ತೆಂಬುದರಲ್ಲಿ ಸಂಶಯವಿಲ್ಲ. ಆದರೆ ಈ ಕಥೆಯನ್ನು ಭಾಸನು ವ್ಯಾಸಭಾರತದಿಂದ ತೆಗೆದುಕೊಂಡನೋ ಅಥವಾ ತನ್ನ ಕಾಲಕ್ಕೆ ಕೇರಳದಲ್ಲಿ ಪ್ರಚುರ ವಾಗಿದ್ದ ಜಾನಪದ ಸಾಹಿತ್ಯದಿಂದ ತೆಗೆದುಕೊಂಡನೋ ತಿಳಿಯದು.

ವಸ್ತ್ರಾಪಹರಣ ಕಥೆಯನ್ನು ವ್ಯಾಸರೇ ಬರೆದಿರಲಾರರೆಂದು ಊಹಿಸಲು ಕೆಲವು ಕಾರಣಗಳನ್ನು ಹೇಳಬಹುದು. ಮುಂದೆ ಅರಣ್ಯದಲ್ಲಿದ್ದ ಪಾಂಡವರನ್ನು ಕಾಣಲು ಕೃಷ್ಣನು ಹೋದಾಗ ಅವನೊಡನೆ ದ್ರೌಪದಿ ತನ್ನ ದುಃಖವನ್ನು ಹೇಳಿಕೊಳ್ಳುತ್ತಾಳೆ. ಆದರೆ ಆಗ ವಸ್ತ್ರಾಪಹರಣ ಪ್ರಯತ್ನದ ಮಾತನ್ನು ಹೇಳಿಲ್ಲ. ಶ್ರೀ ಭಾಗವತದಲ್ಲಿ ಶ್ರೀ ಕೃಷ್ಣನು ಪಾಂಡವರಿಗೆ ಮಾಡಿದ ಮಹೋಪಕಾರಗಳನ್ನು ವರ್ಣಿಸುವಾಗ ಅವನು ದ್ರೌಪದಿಗೆ ಅಕ್ಷಯ ವಸ್ತ್ರವನ್ನು ಅನುಗ್ರಹ ಮಾಡಿದ ಸುದ್ದಿಯಿಲ್ಲ. 'ಜೂಜು ಗಾರರಿಂದ ಅಪಹೃತವಾಗಿದ್ದ ಧರ್ಮರಾಯ (ಅಜಾತ ಶತ್ರು) ನ ರಾಜ್ಯವನ್ನು ಸಾಧಿಸಿ ದ್ರೌಪದಿಯ ಕಚಸ್ಪರ್ಶದಿಂದ ಆಯಸ್ಸು ಕುಂದಿದ ರಾಜರನ್ನು ಘಾತಿಸಿದನು'[2]

---

[1] Notes of a study of the preliminary chapters of the Mahabharatha. Pages 117-200.

[2] ಸಾಧಯಿತ್ವಾ ಅಜಾತ ಶತ್ರೋಃ ಸ್ವರಾಜ್ಯಂ ಕಿತವೈರ್ಹೃತಂ
ಘಾತಯಿತ್ವಾ ಅಸತೋ ರಾಜ್ಞಃ ಕಚ ಸ್ಪರ್ಶ ಕ್ಷತಾಯುಷಃ I-8-5.

ಭಗವಂತನ ಗುಣಗಾನ ಮಾಡಹೊರಟ ಭಾಗವತ ಕರ್ತನು ದ್ರೌಪದಿಗೆ ಭಗವಂತನು ಅಕ್ಷಯ ವಸ್ತ್ರವನ್ನು ಅನುಗ್ರಹಿಸಿದ ಸುದ್ದಿಯನ್ನು ಹೇಳಲು ಹಿಂತೆಗೆಯುವುದುಂಟೆ? ಭಾಗವತ ರಚನೆಯಾದ ಆ ಕಾಲಕ್ಕೆ ಆ ಕಥೆ ಇನ್ನೂ ಭಾರತದಲ್ಲಿ ಸೇರ್ಪಡೆಯಾಗದೆ ಇದ್ದಿರಬಹುದೆ? ಅಂತೂ ಭಾಗವತಕಾರನು ಈ ಸುದ್ದಿ ಹೇಳದಿರುವುದು ಮಹಾಭಾರತದಲ್ಲಿಯೇ ಬೇರೆ ಸಂದರ್ಭದಲ್ಲಿ ದ್ರೌಪದಿಯೇ ತನ್ನ ದುಃಖ ಹೇಳಿಕೊಳ್ಳುವಾಗ ಈ ಸಂಗತಿ ಬಿಟ್ಟುಹೋಗಿರುವುದು, ಇವನ್ನೆಲ್ಲ ಗಮನಿಸುವಾಗ ಮೂಲ ಭಾರತದಲ್ಲಿ ಈ ಕಥೆ ಪ್ರಕೃತ ರೂಪದಲ್ಲಿರದೆ ಆಮೇಲೆ ಸೇರ್ಪಡೆ ಹೊಂದಿರಬಹುದೆಂಬ ಊಹೆಗೆ ಪುಷ್ಟಿ ದೊರಕುತ್ತದೆ. ಪಂಪನು ನೋಡಿದ ಸಂಸ್ಕೃತ ಭಾರತದಲ್ಲಿ ಈ ಕಥೆ ಇಲ್ಲದಿರಬಹುದು.

ಅನುದ್ಯೂತ ಅಥವಾ ಪುನರ್ದ್ಯೂತದ ಕಥೆ ಸ್ವಾರಸ್ಯವಾಗಿದೆ. ದ್ರೌಪದಿಗೆ ಧೃತರಾಷ್ಟ್ರನು ಹೇಳಿದಂತೆ ಪಾಂಡವರನ್ನು ದಾಸ್ಯದಿಂದ ಬಿಡುಗಡೆ ಮಾಡಿ ಅವರ ರಾಜ್ಯಕೋಶ ಸೈನ್ಯಗಳನ್ನೆಲ್ಲ ಕೊಡಿಸಿಬಿಟ್ಟನು. ಧರ್ಮರಾಯನು ಅಂಧರಾಜನ ಅನುಜ್ಞೆ ಹೊಂದಿ ಭ್ರಾತೃವರ್ಗಸಹಿತನಾಗಿ ಇಂದ್ರಪ್ರಸ್ಥಕ್ಕೆ ಹೊರಟು ಕೊಂಚದೂರ ಪ್ರಯಾಣ ಮಾಡಿದಾಗ ಪ್ರಾತಿಕಾಮಿಯು ಬಂದು ಧೃತರಾಷ್ಟ್ರನು ಅವನನ್ನು ಪುನಃ ದ್ಯೂತಕ್ಕೆ ಕರೆಯುತ್ತಿರುವನೆಂದು ಹೇಳಿದ ಒಡನೆಯೇ ಹಿಂತಿರುಗಿ ಪಿತೃನಿಯೋಗವು ಅನುಲ್ಲಂಘನೀಯವೆಂಬ ನಿಮಿತ್ತದಿಂದ ಮತ್ತೆ ಶಕುನಿಯೊಡನೆ ಜೂಜಾಡಿ ಹನ್ನೆರಡು ವರ್ಷ ವನವಾಸ ಒಂದು ವರ್ಷ ಅಜ್ಞಾತವಾಸ, ಆ ಕಾಲದಲ್ಲಿ ಗುರುತು ಹಿಡಿದರೆ ಮತ್ತೆ ಹನ್ನೆರಡು ವರ್ಷ ವನವಾಸ ಮಾಡಬೇಕೆಂಬ ನಿಬಂಧನೆಗೆ ಒಳಗಾಗಿ ಕಾಡಿಗೆ ಹೊರಟನೆಂದು ನನ್ನಯ ವರ್ಣಿಸಿದ್ದಾನೆ. ಶಕುನಿ ದುರ್ಯೋಧನರ ಕುಟಿಲ ತಂತ್ರವೆಲ್ಲ ಮನವರಿಕೆಯಾಗಿದ್ದರೂ ಧರ್ಮರಾಯನು ದೊಡ್ಡಪ್ಪನ ಆಣತಿಯನ್ನು ಮೀರಲು ಇಷ್ಟಪಡಲಿಲ್ಲ! ಅದೇನು ದೊಡ್ಡಪ್ಪನ ಮೇಲಿನ ಭಕ್ತಿಯೋ, ಅವನಿಗೆ ದ್ಯೂತದ ಮೇಲಿದ್ದ ದುರ್ದಮ್ಯವಾದ ಆಸೆಯೋ, ತಾನು ಸೋತಿದ್ದ ಸಕಲೈಶ್ವರ್ಯವನ್ನೂ ಹಿಂತಿರುಗಿ ಕೊಡಿಸಿದನೆಂದು ಕೃತಜ್ಞತೆಯೋ ಅಥವಾ ವಿಧಿಯ ಪ್ರೇರಣೆಯೊ!

ದುಶ್ಶಾಸನನು ದ್ರೌಪದಿಯನ್ನು ಬಲವಂತವಾಗಿ ಸಭೆಗೆ ಎಳೆದು ತಂದಾಗ ಭೀಮನು ಕೈಗೊಂಡ ಮಹಾ ರೌದ್ರ ಪ್ರತಿಜ್ಞೆಗಳನ್ನು ಕೇಳಿದಾಗ ಸಮಸ್ತ ಸಭಿಕರೂ ಗಾಬರಿಗೊಂಡರು. ಭೀಮನ ಮಾತು 'ಪ್ರಳಯ ಕಾಳ ಜಳಧರ ನಿನಾದ' ದಂತೆ 'ನೆಲಂ ಮೊಳಗಿದಂತೆ' ಕೇಳಿಸಿತು! ಕೌರವರು 'ಕಡಲ ನಡುವಣ ಪರ್ವತದಂತ ಳ್ಳಾಡಿ' ಹೋದರು. ಕುರುವೃದ್ಧನಾದ ಗಾಂಗೇಯನು ಬಹಳ ವ್ಯಥೆಪಟ್ಟನು. ಮುಂದೆ ಏನಾಗಬಹುದೆಂಬುದರ ಸ್ಪಷ್ಟ ಕಲ್ಪನೆ ಅವನ ಮನಸ್ಸಿಗೆ ಬಂತು.

ಭರತ ಯಯಾತಿ ಕುತ್ಸ ಪುರುಕುತ್ಸ ಪ್ರರೂರವರಿಂದಮಿನ್ನೆಗಂ
ಪರಿವಿಡಿಯಿಂದೆ ಬಂದ ಶಶಿವಂಶ ಮಧೀಗಳಿವಂದಿರಿಂದೆ ನಿ

ತ್ರರಿಸುವುದಕ್ಕು ಮುಂದೆ ಬಗೆದಿರ್ದೊಡೆ ಕೀಲೊಳೆ ಕಿಚ್ಚು ಪುಟ್ಟಿಭೋ
ರ್ಗರೆದುರಿದಂತೆ ನಿನ್ನ ಮಗನಿಂದುರಿದತ್ತಿದನಾರೊ ಬಾರಿಪರ್

ಎಂದು ಅವನು ಬಹಳ ವಿಷಾದದಿಂದ ಧೃತರಾಷ್ಟ್ರನೊಡನೆ ಹೇಳಿಕೊಂಡನಂತೆ!

ದ್ರೌಪದಿಗೆ ಆದ ಅಪಮಾನ 'ಕೀಲೊಳೆ ಪುಟ್ಟಿದ ಕಿಚ್ಚು!' ದ್ಯೂತ ಮಹಾಭಾರತ ಕಥೆಯ ಕೀಲು, ಸುಹೃದ್ದ್ಯೂತವೆಂದು ಆರಂಭವಾಗಿ ಅದು ಪಾಂಡವರ ಸರ್ವಸ್ವಾಪಹರಣದಲ್ಲಿ ಪರ್ಯವಸಾನವಾಯಿತು. ಅದಕ್ಕಿಂತ ಮಿಗಿಲಾಗಿ ಕಪಟ ದ್ಯೂತ ವಿಜಯದಿಂದ ಮದೋನ್ಮತ್ತರಾದ ಕೌರವರು ತಮ್ಮ ಅತ್ತಿಗೆಯನ್ನೇ ಸಭೆಗೆ ಎಳೆದು ತಂದು ಅವಮಾನ ಪಡಿಸಿದರು. ಈ ಅಪಮಾನದ ಫಲವಾಗಿ ಪಾಂಡವ ವೀರರು ಸಮಸ್ತ ಕೌರವರನ್ನೂ ಕೊಂದು ಮುಗಿಸುವ ಪ್ರತಿಜ್ಞೆ ಕೈಗೊಂಡರು. ಕುಲಯುದ್ಧ ಅನಿವಾರ್ಯವಾಯಿತು. ಮಹಾಭಾರತ ಯುದ್ಧಕ್ಕೆ ಇದು ಪೂರ್ವ ಪೀಠಿಕೆಯಾಯಿತು. ಪಂಪನು ಬೇರೆ ಒಂದು ಸಂದರ್ಭದಲ್ಲಿ ಹೇಳಿರುವಂತೆ ದ್ರೌಪದಿಯ 'ಕೇಶಪಾಶ ಪ್ರಪಂಚ'ವೇ ಮಹಾಭಾರತ ಯುದ್ಧಕ್ಕೆ ನಾಂದಿಯಾಯಿತು. ದುಶ್ಶಾಸನನು ದ್ರೌಪದಿಯ ಸಿರಿಮುಡಿಗೆ ಕೈಯಿಕ್ಕಿದಾಗಲೇ ಕೌರವ ಕುಲದ ವಿನಾಶ ನಿಶ್ಚಿತವಾಯಿತು. ದ್ರೌಪದಿಯ ಅಪಮಾನದ ನಿಮಿತ್ತದಿಂದ ಭುಗಿಲೆದ್ದ ಭೀಮಾರ್ಜುನರ ರೋಷಾಗ್ನಿಜ್ವಾಲೆಯಲ್ಲಿ ಕೌರವ ವಂಶ ಉರಿದುಹೋಯಿತು. ಇನ್ನು ಆ ಬೆಂಕಿಯನ್ನು ಆರಿಸಿ ಶಾಂತಿ ಸೌಹಾರ್ದಗಳನ್ನು ಸ್ಥಾಪಿಸುವುದು ಆಗದ ಮಾತೆಂಬುದನ್ನು ಭೀಷ್ಮನು ಅರಿತುಕೊಂಡು ಸಂಕಟದಿಂದ ಅಂಧರಾಜನೊಡನೆ ಆಡಿದ ಮಾತು 'ಕೀಲೊಳೆ ಕಿಚ್ಚು ಪುಟ್ಟಿಭೋರ್ಗರೆದುರಿದಂತೆ ನಿನ್ನ ಮಗನಿಂದುರಿದತ್ತು ಇದನಾರೊ ಬಾರಿಪರ್?' ನಿವಾರಿಸಲು ಯಾರಿಂದಲೂ ಆಗದ ಬೆಂಕಿ ಈ ದ್ವೇಷ. ಕುರುಪಾಂಡವರ ನಡುವೆ ಬೆಳೆದು ಬಂದ ಈ ಹಗೆತನವನ್ನು ಪಂಪ ಕೀಲಿನಲ್ಲಿ ಹುಟ್ಟಿ ಪ್ರಜ್ವಲಿಸಿ ಉರಿಯುವ ದೊಡ್ಡ ಬೆಂಕಿಗೆ ಹೋಲಿಸಿರುವುದು ಅವನ ಸ್ವೋಪಜ್ಞತೆಗೆ ಕುರುಹಾಗಿದೆ. ಗಾಂಡೀವಿಗೆ 'ಕೋಪಾಗ್ನಿ ಕೆಯ್ಗಣ್ಮೆ ಕಣ್ಮಲರೊಳ್' ಬಂದಿತಂತೆ! ನಕುಲ ಸಹದೇವರಂತು 'ಅಕಾಲ ಕಾಲಾಗ್ನಿ ರೂಪ'ರೇ ಆದರು! 'ಆಱದ ಕೋಪ ಪಾವಕ' ಭೀಮನದು! ಅವನ ಕಣ್ಣುಗಳಿಂದ 'ಕಿಡಿಯುಂ ಕೆಂಡಂಗಳುಂ' ಸೂಸಿದುವು! ಇನ್ನು ಕೌರವ ಕುಲ ಹೊತ್ತಿ ಉರಿದು ಭಸ್ಮವಾಗದೆ ಉಳಿಯುವುದುಂಟೆ?

ಪಾಂಡವರು ಪಾಂಚಾಲೀ ಸಮೇತರಾಗಿ ಕಾಡಿಗೆ ಹೊರಟಾಗ ಹಸ್ತಿನಾವತಿಯ ಪ್ರಜೆಗಳ ಮನಸ್ಸಿನಲ್ಲಿ ಮೂಡಿದ ಕಳವಳವನ್ನು ಪಂಪ ಬಹಳ ಸಹಜ ರೀತಿಯಲ್ಲಿ ಚಿತ್ರಿಸಿದ್ದಾನೆ. ಪಾಂಡವರ ಒಳ್ಳೆಯತನ, ಪರಾಕ್ರಮ, ಪ್ರಜಾಪ್ರೇಮಗಳನ್ನು ಅವರು ಬಲ್ಲರು. ಅವರು ಹಿಂದೆ ತಮ್ಮ ನಗರದಿಂದ ವಾರಣಾವತಕ್ಕೆ ಹೋದುದನ್ನು ಕಂಡಿದ್ದರು. ಮತ್ತೆ ಧೃತರಾಷ್ಟ್ರನು ಅವರನ್ನು ಇಂದ್ರಪ್ರಸ್ಥಕ್ಕೆ ಕಳುಹಿಸಿದುದನ್ನೂ ಅವರು ನೋಡಿದ್ದರು. ಆದರೆ ಈಗ ಪಾಂಡವರು ಬೇರೊಂದು ಪಟ್ಟಣಕ್ಕೆ ರಾಜರಾಗಿ ಹೋಗುತ್ತಿಲ್ಲ. ಸರ್ವಸ್ವವನ್ನೂ ಕಳೆದುಕೊಂಡು ನಿರ್ಗತಿಕರಾಗಿ ಕಾಡಿಗೆ ಹೋಗುತ್ತಿ

ದ್ದಾರೆ. ಅವರು ಮತ್ತೆ ಪ್ರಭು ಪದವಿಯನ್ನು ಪಡೆಯುವುದೆಂದಿಗೋ? ಈ ಸ್ಥಿತಿಯಲ್ಲಿ ಅವರನ್ನು ಕಂಡು ದುರ್ಯೋಧನನ ಪ್ರಜೆಗಳಿಗೇ ಮರುಕವುಂಟಾಯಿತು.

ಜೂದಾಡಿ ಸೋಲ್ತು ಸನ್ನಿಗೆ
ಮೇದಿನಿಯುಂ ಕೊಟ್ಟು ಪಾಂಡುನಂದನರೀಗಳ್
ಪೋದೊಡಮೇಂ ತಿಣುಕಾಗದೆ
ಪೋದಪುದೇ ನಮ್ಮ ನೃಪತಿಗವು ತವುದಲೆಯೊಳ್
ಜೂದಿನ ಗೆಲ್ಲದೊಳಾದೀ
ಮೇದಿನಿಯಂ ಕಂಡು ಕಜ್ಜಮಂ ಕಾಣದೆ ದು
ರ್ಯೋದನನದೇನದೇಂ ಮರು
ಳಾದನೋ ಬಡಿ ಗಂಡನಿಲ್ಲ ಪಾಲನೆ ಕಂಡಂ

ಎಂದು ಆ ಪುರಜನರು ಮರುಗಿ ಕಣ್ಣೀರಿಕ್ಕಿದರಂತೆ! ಈ ಅನರ್ಥಗಳೆಲ್ಲ 'ದುಶ್ಶಾಸನನೆಂಬ ಶಕುನಿಯೆಂಬ ಬೆಳ್ವೊಱಸಿಂಪಂ' ಸಂಭವಿಸಿದುವೆಂದು ಅವರು ಆಡಿಕೊಂಡರಂತೆ. ಪಂಪ ಶಕುನಿಯನ್ನು 'ಬೆಳ್ವೊಱಸಿ'ಗೆ ಹೋಲಿಸಿರುವುದು ಸ್ವಾರಸ್ಯವಾಗಿದೆ. ಬಹುಶಃ ಗಾಂಧಾರ ದೇಶದಿಂದ ಬಂದ ಅವನು ಬೆಳ್ಳಗೂ ಇದ್ದಿರಬಹುದು. ಬಿಳಿಯ ಪಾರಿವಾಳವು ಅನಿಷ್ಟ ಸೂಚಕ. ಈ 'ಬಿಳಿ ಪಾರಿವಾಳ' ಅರಮನೆಯನ್ನು ಹೊಕ್ಕುದರಿಂದ ವಿನಾಶ ಸಂಭವಿಸಿತು; ಕೌರವರ ಸಾಮೂಹಿಕ ವಧೆ ಖಚಿತವಾಯಿತು. ಆದರೆ ಮುಂದೆ ಒದಗಲಿರುವ ಅನರ್ಥವನ್ನು ಕಾಣಲಾರದೆ ಸದ್ಯದ ಗೆಲುವಿಗೆ ಸಂತೋಷಪಡುತ್ತಿದ್ದ ಆ ಅಂಧರಾಜನ ಮಗ ದುರ್ಯೋಧನನನು ಆ ಪ್ರಜೆಗಳು ಹಾಲು ಕುಡಿಯುವ ಸಂಭ್ರಮದಲ್ಲಿ ಮೇಲೆ ಬೀಳಲಿರುವ ದೊಣ್ಣೆಯನು ಕಾಣದೆ ಹೋದ ಬೆಕ್ಕಿಗೆ ಹೋಲಿಸಿದ್ದಾರೆ. 'ಬಡಿಗಂಡನಿಲ್ಲ ಪಾಲನೆ ಕಂಡಂ' ಪಾಂಡವರು 'ಸುಭದ್ರೆಯನಭಿಮನ್ಯುವೆರಸು ನಾರಾಯಣನಲ್ಲಿಗೆ ದ್ವಾರಾವತಿಗೆ ಕಳಿಪಿ' ಕುಂತಿಯನ್ನು ವಿದುರನ ಮನೆಯಲ್ಲಿರಹೇಳಿ ತಾವು ದ್ರೌಪದಿಯೊಡನೆ ಕಾಮ್ಯಕವನವನ್ನು ಕುರಿತು ಪ್ರಯಾಣ ಮಾಡಿದರು.

ನನ್ನಯಭಟ್ಟ ಈ ಪ್ರಕರಣವನ್ನು ಸ್ವಲ್ಪ ವಿಸ್ತಾರವಾಗಿಯೇ ಪ್ರಸ್ತಾಪಿಸಿದ್ದಾನೆ. ಧರ್ಮರಾಯನು ಕಾಡಿಗೆ ಪ್ರಯಾಣ ಹೊರಡುವ ಮೊದಲು ಹಿರಿಯರಾದ ಭೀಷ್ಮ ಧೃತರಾಷ್ಟ್ರ ವಿದುರರನ್ನೂ ಗುರುಗಳಾದ ಕೃಪ ದ್ರೋಣರನ್ನೂ ನೋಡಬಯಸಿ ಅವರನ್ನು ಆಮಂತ್ರಿಸಿದನೆಂದೂ ಆಗ ವಿದುರನು ಕುಂತಿ ವೃದ್ಧೆಯಾದುದರಿಂದ ವನವಾಸ ಕ್ಲೇಶವನ್ನು ಸಹಿಸಿಕೊಳ್ಳಲಾರಳೆಂದೂ ಆದ್ದರಿಂದ ಅವಳು ತನ್ನ ಮನೆಯಲ್ಲಿ ನಿಲ್ಲಬೇಕೆಂದೂ ತಾನು ಅವಳ ಸೇವೆ ಮಾಡುವುದಾಗಿಯೂ ಸಲಹೆ ಹೇಳಿ ಧರ್ಮರಾಯನನ್ನು ಒಪ್ಪಿಸಿದನೆಂದೂ ನನ್ನಯ ಹೇಳಿದ್ದಾನೆ. ಆಗ ಪಾಂಡುನಂದನರು ತಮ್ಮ ತಾಯಿಯ ಚರಣಗಳಿಗೆ ವಂದಿಸಿದರು. ಆ ತಾಯಿ ದುಃಖವನ್ನು ತಡೆದುಕೊಳ್ಳಲಾರದೆ ಹೋದಳು. ಲಜ್ಜೆಯಿಂದ ಅವನತಾಸ್ಯರಾಗಿ ಅಜಿನ ವಲ್ಕಲ ಧಾರಿಗಳೂ ಮುನಿವೇಷಧರರೂ ಆಗಿದ್ದ ತನ್ನ ಕುಮಾರರ ದುಸ್ಥಿತಿಯನ್ನು ಕಂಡು ಆಕೆ ದುಃಖ

ಪರವಶಳಾದಳು. "ಮಕ್ಕಳಿರಾ, ಇಂಥ ದುರ್ವ್ಯಸನೋಪಹತರಾದ ನಿಮ್ಮನ್ನು ನೋಡದೆ ಮುಂಚೆಯೇ ಸುರಲೋಕಕ್ಕೆ ಹೋದ ಪಾಂಡುಭೂಪತಿ ಪುಣ್ಯಶಾಲಿ. ಮಾದ್ರಿ ತನ್ನ ತಪಃಫಲದಿಂದ ಗಂಡನೊಡನೆ ಸಹಗಮನ ಮಾಡಿ ಧನ್ಯಳಾದಳು. ನಾನೂ ಹಾಗೆಯೇ ಹೋಗದೆ ಮಂದಭಾಗ್ಯಳಾದೆ" ಎಂದು ಗೋಳಾಡಿದಳು. ಅವಳ ಸಂಕಟದ ಮಾತುಗಳನ್ನು ಕೇಳಿ ಪಾಂಡವರೂ, ಸುತ್ತ ಇದ್ದವರೂ ಮಹಾ ದುಃಖಿತರಾಗಿ ಕಣ್ಣೀರುಗರೆದರು.

ಕುಂತಿ ತನ್ನ ಮಕ್ಕಳಿಗೊದಗಿದ ಮಹಾ ವಿಪತ್ತನ್ನು ಕಂಡು ತತ್ತರಿಸಿ ಹೋದಳು. ಆ ತಾಯಿಯ ಮನಸ್ಸಿಗೆ ಆದ ಆಘಾತ ಮಹಾತೀವ್ರವಾದದ್ದು. "ಧರ್ಮಮೂರ್ತಿಗಳೂ ಅಮಿತಸತ್ವರೂ ರಿಪುದ್ರುಮಹುತಾಶನರೂ ಆದ ಭೀಷ್ಮ ದ್ರೋಣ ವಿದುರ ಗೌತಮರು ಎದುರಿಗಿರುವಾಗಲೇ ಇಂಥ ಘೋರ ನಡೆಯಬಹುದೆ? ಧಾರ್ತರಾಷ್ಟ್ರರ ವಂಚನೆಯಿಂದ ಪಾಂಡವರನ್ನು ರಾಷ್ಟ್ರದಿಂದ ಹೊರಡಿಸಬಹುದೆ? ದ್ವಾರಕಾನಾಥ, ಕೇಶವ, ದೈತ್ಯಭೇದಕ, ನಿನ್ನ ಪಾದಪೂಜಕರಾದ ಈ ವೀರರನ್ನು ಕಾಯದೆ ಇರುವುದು ನಿನಗೆ ಧರ್ಮವೇ ? ನೀನು ಧರ್ಮ ನಿರ್ಮಲ ಮಾನಸನಲ್ಲವೆ?" ಎಂದು ಹಲವು ಬಗೆಯಾಗಿ ಕುಂತಿ ಹಲುಬಿದಳು. ಕಡೆಯ ಮಗನಾದ ಸಹದೇವನೂ ಕಾಡಿಗೆ ಹೋಗಬೇಕಾದುದನ್ನು ಕುಂತಿ ಕಂಡು ಕಂಗೆಟ್ಟು "ಅಣ್ಣ ಸಹದೇವ, ನೀನೂ ಅಣ್ಣಂದಿರೊಡನೆ ಅಡವಿಗೆ ಹೋಗುವೆಯಾ ? ನೀನೊಬ್ಬ ನನ್ನ ಬಳಿಯಿದ್ದರೆ ಎಲ್ಲರೂ ಇದ್ದಂತೆ ನನ್ನ ಮನಸ್ಸಿಗೆ ಸಮಾಧಾನವಾಗುತ್ತದೆ" ಎಂದು ಅವಳು ಹಲುಬಿದಳು. ಆದರೆ ಧರ್ಮರಾಯ ಮಾಡಿಕೊಂಡ ಒಪ್ಪಂದ ತಪ್ಪೀತೆ? ಆಗ ದ್ರೌಪದಿ ಅತ್ತೆಗೆ 'ವಿನಯ ವಿನಮಿತೋತ್ತಮಾಂಗ'ಳಾದಳು. ಕುಂತಿ ಕಣ್ಣೀರಿನಲ್ಲಿ ಮುಳುಗಿದಳು. ಅವಳು ದ್ರೌಪದಿಯನ್ನು ಪ್ರೀತಿಯಿಂದ ಆಲಿಂಗಿಸಿಕೊಂಡು "ಧವಳಾಕ್ಷಿ, ನಿನ್ನ ದೆಸೆಯಿಂದ ದ್ರುಪದವಂಶವೂ ಪಾಂಡುವಂಶವೂ ಪವಿತ್ರವಾದುವು! ಅವುಗಳ ಕೀರ್ತಿ ಲೋಕದಲ್ಲಿ ಬೆಳಗಿತು. ನಿನ್ನ ಗಂಡಂದಿರ ಪರಿಚರ್ಯೆ ಮಾಡಲು ಕಾಡಿಗೇ ಹೊರಡುತ್ತಿರುವೆ. ನೀನು ಧನ್ಯಳು" ಎಂದು ಮೆಚ್ಚಿ ಹೃದಯಪೂರ್ವಕ ವಾಗಿ ಹರಸಿ ಬೀಳ್ಕೊಟ್ಟಳು.

ಪಾಂಡವರು ಕಾಡಿಗೆ ಹೊರಟ ಸಮಯದಲ್ಲಿ ಧೃತರಾಷ್ಟ್ರನ ಅರಮನೆಯಲ್ಲಿ ಅನೇಕ ದುರ್ನಿಮಿತ್ತಗಳು ತಲೆದೋರಿದುವು. ಉಲ್ಕಾಪಾತ, ಭೂಕಂಪಗಳು ಸಂಭವಿಸಿದುವಂತೆ! ಆಗ ನಾರದನು ಸಭೆಯವರಿಗೆಲ್ಲ ಕೇಳುವ ಹಾಗೆ 'ಇಂದಿನಿಂದ ಹದಿನಾಲ್ಕನೆಯ ವರ್ಷದಲ್ಲಿ ಭಾರತ ಯುದ್ಧ ನಡೆದು ಪಾಂಡವರು ಗೆಲ್ಲುತ್ತಾರೆ' ಎಂದು ಉಗ್ಗಡಿಸಿದನು.

ಅಂತು ಇಂದ್ರಪ್ರಸ್ಥಪುರದಲ್ಲಿ ಇಪ್ಪತ್ತುಮೂರು ವರ್ಷ ರಾಜ್ಯವಾಳಿದ ನಿತ್ಯ ಸತ್ಯ ವ್ರತರಾದ ವೀರಪಾಂಡವರು ಪಾಪದ್ಯೂತದಲ್ಲಿ ಪರಾಜಿತರಾದ ನಿಮಿತ್ತ ಮಹಾರಣ್ಯಕ್ಕೆ ಹೊರಟುಹೋದರು. ಅವರೊಡನೆ ಅನೇಕ ಬ್ರಾಹ್ಮಣರೂ ಕಾಡಿಗೆ ಹೊರಟರು.

# ೬. ಅರಣ್ಯಪರ್ವ

ಶ್ರೀ ಮಹಾಭಾರತದ ಅರಣ್ಯಪರ್ವವು ಮುನ್ನೂರಕ್ಕೂ ಹೆಚ್ಚಿನ ಅಧ್ಯಾಯಗಳಿಂದ ಕೂಡಿದ ವಿಸ್ತಾರವಾದ ಕಥಾಭಾಗ. ಇದರಲ್ಲಿ ಪಾಂಡವರು ತಮ್ಮ ಒಪ್ಪಂದದಂತೆ ಹನ್ನೆರಡು ವರ್ಷಗಳ ಕಾಲ ಅಡವಿಯಲ್ಲಿದ್ದುಕೊಂಡು ಸಾಧಿಸಿದ ಮಹಾಕಾರ್ಯಗಳ ವರ್ಣನೆಯಿದೆ. ಲೋಕ ಕಂಟಕರಾದ ಕಿರ್ಮೀರಾದಿ ಅನೇಕ ರಕ್ಕಸರನ್ನು ಕೊಂದು ವನವಾಸಿಗಳಾದ ತಪಸ್ವಿಗಳಿಗೆ ನೆಮ್ಮದಿಯನ್ನುಂಟುಮಾಡಿ ಪಾಂಡವರು ಅನೇಕ ಋಷಿಗಳನ್ನು ಕಂಡು ಅವರಿಂದ ಧರ್ಮೋಪದೇಶ ಪಡೆದರು. ವ್ಯಾಸ, ರೋಮಶ, ಶೌನಕ, ಮಾರ್ಕಂಡೇಯಾದಿ ಅನೇಕ ಋಷಿಗಳು ಧರ್ಮರಾಯನನ್ನು ಕಾಣಲು ಕಾಮ್ಯಕವನಕ್ಕೂ ದ್ವೈತವನಕ್ಕೂ ಬಂದರು! ಧರ್ಮೋಪದೇಶ ಮಾಡುವಾಗ ಆ ಜ್ಞಾನಿಗಳು ಅನೇಕ ತೀರ್ಥಕ್ಷೇತ್ರಗಳ ಮಹಿಮೆಯನ್ನು ವರ್ಣಿಸಿದರು; ಅನೇಕ ಪುರಾಣ ಕಥೆಗಳನ್ನು ಹೇಳಿದರು. ದ್ವೈತವನದಲ್ಲಿದ್ದಾಗ ವ್ಯಾಸರು ಬಂದು ಉಪದೇಶಿಸಿದ ಪ್ರಕಾರ ಪಾರ್ಥನು ಇಂದ್ರಕೀಲಕ್ಕೆ ಹೋಗಿ ದೊಡ್ಡ ತಪಸ್ಸನ್ನಾಚರಿಸಿ ಶಿವನ ಕೃಪೆಗೆ ಪಾತ್ರನಾಗಿ ಪಾಶುಪತಾಸ್ತ್ರವನ್ನು ಪಡೆದನು. ಭೀಮ ಹನುಮಂತನ ದರ್ಶನ ಮಾಡಿದ್ದು ಈ ಅವಧಿಯಲ್ಲಿಯೇ. ಚಿತ್ರಾಂಗದನೆಂಬ ಗಂಧರ್ವನನ್ನು ಗೆದ್ದು ಅವನು ಸೆರೆಹಿಡಿದಿದ್ದ ಕೌರವ ಸಹೋದರರನ್ನು ಅರ್ಜುನ ಬಿಡಿಸಿದ ಕಥೆ ಈ ಪರ್ವದಲ್ಲಿಯೇ ವರ್ಣಿತವಾಗಿರುವುದು. ಈ ಎಲ್ಲ ಘಟನಾವಳಿಯನ್ನು ನಿರೂಪಿಸುತ್ತ ಅನೇಕ ಕಥೆ ಉಪಕಥೆಗಳಿಂದ ತುಂಬಿ ಅರಣ್ಯಪರ್ವ ಒಂದು ಕಥಾಕೋಶದಂತೆ ಶೋಭಿಸುತ್ತದೆ.

ಪಂಪನು ತನ್ನ 'ವಿಕ್ರಮಾರ್ಜುನ ವಿಜಯ'ದಲ್ಲಿ ಈ ವಿಸ್ತಾರವಾದ ಪರ್ವದ ಕಥೆಯನ್ನು ಸುಮಾರು ನೂರಿಪ್ಪತ್ತು ಪದ್ಯಗಳಲ್ಲಿ ಹೇಳಿ ಮುಗಿಸಿದ್ದಾನೆ. ಏಳನೆಯ ಆಶ್ವಾಸದ ಮಧ್ಯೆ ಆರಂಭವಾಗಿ ಪಾಂಡವರ ಅರಣ್ಯವಾಸದ ವೃತ್ತಾಂತ ಎಂಟನೆಯ ಆಶ್ವಾಸದ ಮಧ್ಯದಲ್ಲಿಯೇ ಮುಗಿದುಹೋಗಿದೆ! ಪಂಪ ಪಾಂಡವರ ಬದುಕಿನ ಕಥೆಯನ್ನೇ ದೃಷ್ಟಿಯಲ್ಲಿಟ್ಟುಕೊಂಡು ಉಳಿದ ಉಪಾಖ್ಯಾನಗಳನ್ನೆಲ್ಲ ನಿರ್ವಿಚಾರವಾಗಿ ಕೈಬಿಟ್ಟಿದ್ದಾನೆ. ಪಾಂಡವರಿಗೆ ಅಡವಿಯಲ್ಲಿ ಕೌರವರಿಂದ ಒದಗಿದ ಉಪಟಳ, ಅದನ್ನು ನಿವಾರಿಸಿಕೊಂಡ ಬಗೆ, ಮುಂದೆ ಒದಗಲಿರುವ ಭಾರತ ಯುದ್ಧಕ್ಕೆ ಪಾಂಡವರು ಶಕ್ತಿವರ್ಧನ ಮಾಡಿಕೊಂಡ ವಿವರ, ಇವು ಪ್ರಕೃತವೇ ಹೊರತು ಅವರು ಋಷಿಗಳಿಂದ ಕೇಳಿದ ರಾಮಾಯಣ ಕಥೆ, ಅಗಸ್ತ್ಯ ಚರಿತ್ರೆ, ನಲೋಪಾಖ್ಯಾನ, ಸಗರ ಚರಿತ್ರೆ, ಋಷ್ಯಶೃಂಗನ ಕಥೆ ಮುಂತಾದುವು ಅನವಸರವೆಂದು ಪಂಪನ ನಂಬಿಕೆ. ಇವುಗಳನ್ನು ಬಿಟ್ಟಿದರಿಂದ ಭಾರತ ಕಥಾ ಶರೀರಕ್ಕೆ ಏನೂ ಕುಂದಾಗಲಿಲ್ಲವೆಂಬುದು 'ವಿಕ್ರಮಾ

ರ್ಜುನ ವಿಜಯ'ವನ್ನು ಓದುವಾಗ ಸ್ಪಷ್ಟವಾಗುತ್ತದೆ. ಪಂಪನಿಗೆ ಮುಖ್ಯವಾದ ಅರ್ಜುನನ ಪರಾಕ್ರಮದ ಹೊಗಳಿಕೆಗೆ ಈ ಉಪಾಖ್ಯಾನಗಳಿಂದ ತೃಣ ಮಾತ್ರವೂ ಉಪಯೋಗವಾಗುವುದಿಲ್ಲ! ಆದರೆ ಪರಮ ವೈದಿಕನಾದ ನನ್ನಯಭಟ್ಟ ಈ ಎಲ್ಲ ಕಥೆಗಳನ್ನೂ ಪೂರ್ಣವಾಗಿ ಬಿಡಲಾರದೆ ಆದಷ್ಟು ಸಂಕ್ಷೇಪವಾಗಿ ಹೇಳಿದ್ದಾನೆ.

ಆದರೆ ನನ್ನಯ ಅರಣ್ಯಪರ್ವವನ್ನು ಸಂಪೂರ್ಣವಾಗಿ ತೆಲುಗಿಸಲು ಶಕ್ತನಾಗಲಿಲ್ಲ. ನಾಲ್ಕನೆಯ ಆಶ್ವಾಸದ ಮಧ್ಯೆ ನನ್ನಯನ ಕವಿತೆ ನಿಂತುಹೋಗಿದೆ. ಅಜಗರ ರೂಪದಲ್ಲಿ ಬಂದು ಭೀಮನನ್ನು ಹಿಡಿದುಕೊಂಡ ನಹುಷನು ಕೇಳಿದ ಪ್ರಶ್ನೆಗಳಿಗೆಲ್ಲ ಯುಧಿಷ್ಠಿರನು ಸಮರ್ಪಕವಾದ ಉತ್ತರ ಹೇಳಿ ತಮ್ಮನನ್ನು ಬಿಡಿಸಿಕೊಂಡ ಕಥೆಯನ್ನು ಹೇಳಿ ಮುಗಿಸುವ ವೇಳೆಗೆ ನನ್ನಯಭಟ್ಟನು ಪರಂಧಾಮ ಹೊಂದಿದನೆಂದು ತೋರುತ್ತದೆ. ಆಂಧ್ರಭಾರತದ ಅರಣ್ಯಪರ್ವದ ಉಳಿದ ಅರ್ಧವನ್ನು ಬೇರೊಬ್ಬ ಕವಿ ಕೆಲಕಾಲದ ಮೇಲೆ ಬರೆದನು. ಸಂಸ್ಕೃತ ಭಾರತ ಅರಣ್ಯಪರ್ವದ ಮುನ್ನೂರು ಚಿಲ್ಲರೆ ಅಧ್ಯಾಯಗಳ ಕಥಾಸಾರ ತೆಲುಗು ಭಾರತದಲ್ಲಿ ಏಳು ಆಶ್ವಾಸಗಳಲ್ಲಿ ಅಡಕವಾಗಿದೆ.

ಪಾಂಡವರು ಕಪಟ ದ್ಯೂತದಲ್ಲಿ ಸೋತು ತಮ್ಮ ರಾಜ್ಯೈಶ್ವರ್ಯಗಳನ್ನೆಲ್ಲ ಕಳೆದುಕೊಂಡು ಅರಣ್ಯವಾಸದ ನಿಬಂಧನೆಗೆ ಕಟ್ಟುಬಿದ್ದು ಕಾಮ್ಯಕವನಾಭಿಮುಖವಾಗಿ ಹೊರಟರು. ಆ ಕಾಡಿನ ಪರಿಸರವನ್ನು ಸೇರಿದಾಗ ವರ್ಷಾಕಾಲ. ಮಳೆಯಿಂದ ತುಂಬಿಹರಿಯುವ ತೊರೆಗಳಿಂದಲೂ ಹಚ್ಚಗೆ ಹಸುರೆಲೆಗಳಿಂದ ಕೂಡಿ ಶೋಭಿಸುವ ಮರಗಳಿಂದಲೂ ಕೂಡಿ ಅನೇಕ ದುಷ್ಟ ಮೃಗಗಳ ಆವಾಸಸ್ಥಾನವಾಗಿ 'ಸೌಮ್ಯ ಭಯಂಕರಾಕಾರ' ವಾದ ಆ ವನವನ್ನು ಪ್ರವೇಶಿಸಲು ಅವಕಾಶ ಕೊಡದೆ ಆ ವನಾಧಿಪತಿಯಾದ ಕಿಮ್ಮೀರನು ಪಾಂಡವರನ್ನು ಅಡ್ಡಿಪಡಿಸಿದನು. ಆದರೆ ಭೀಮಸೇನನು 'ಸಿಡಿಲ್ದು ಸಿಡಿಲ್ಪೊಯ್ದವೊಲಾಗೆ ಪೊಯ್ದನಿಳೆಯೊಳ್ ಕಿಮ್ಮೀರನಂ ವೀರನಂ!' ಕಿಮ್ಮೀರ ವಧೆಯ ಕಥೆಗೆ ಪಂಪ ಒಂದು ಇಡೀ ಪದ್ಯವನ್ನು ವಿನಿಯೋಗಿಸಿದ್ದಾನೆ. ನನ್ನಯಭಟ್ಟ ಇದೇ ಕಥೆಯನ್ನು ಹತ್ತು ಪದ್ಯಗಳಲ್ಲಿ ನಿರೂಪಿಸಿ ಆ ವನವಾಸಿಗಳಾದ ಋಷಿಗಳಿಗೆ ರಾಕ್ಷಸ ಭಯವನ್ನು ಹೋಗಲಾಡಿಸಿದ ಭೀಮಸೇನನನ್ನೂ ಅವನ ಸೋದರರನ್ನೂ ಧೌಮ್ಯ ಮಹರ್ಷಿಗಳು ವಿಶೇಷವಾಗಿ ಪ್ರಶಂಸೆ ಮಾಡಿ ಆದರಿಸಿದ ಸಂಗತಿಯನ್ನೂ ವರ್ಣಿಸತೊಡಗಿದ್ದಾನೆ. ಪಂಪನಿಗೆ ಋಷಿಗಳ ಹೊಗಳಿಕೆಯನ್ನು ಹೇಳುವ ಅಗತ್ಯ ತೋರಲಿಲ್ಲ. ಅವನು 'ತದ್ವನ ತಪೋಧನರ ಗೋಷ್ಠಿಯೊಳಮಾಟವಿಕರಟ್ಟಟ್ಟಯೊಳಂ ತಮಗಿಂದ್ರಪ್ರಸ್ಥದ ರಾಜ್ಯಶ್ರೀಯಂ ಮಸುಳಿಸು' ವಂತಹ ಜೀವನ ನಡೆಯಿತೆಂದೂ ಪಾಂಡವರು ಅಡವಿಯಲ್ಲಿಯೂ ರಾಜ ಠೀವಿಯಿಂದಲೇ ಬಾಳಿದರೆಂದೂ ವರ್ಣಿಸಿದ್ದಾನೆ.

ಕಿಮ್ಮೀರ ದರ್ಶನಕ್ಕಿಂತ ಮೊದಲೇ ಧರ್ಮರಾಯನು ತನ್ನ ಸಂಗಡ ಕಾಡಿಗೆ ಬಂದ ಅನೇಕ ಬ್ರಾಹ್ಮಣರಿಗೆ ಆಹಾರವೊದಗಿಸುವ ಸಲುವಾಗಿ ಧೌಮ್ಯನ ಸೂಚನೆ

ಯಂತೆ ಸೂರ್ಯನನ್ನು ಆರಾಧಿಸಿ ಒಂದು ಅಕ್ಷಯಪಾತ್ರೆಯನ್ನು ಸಂಪಾದಿಸಿದ ಕಥೆಯನ್ನು ನನ್ನಯಭಟ್ಟ ಹೇಳಿದ್ದಾನೆ. ಸೂರ್ಯನು ಧರ್ಮರಾಯನ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷನಾಗಿ ಒಂದು ತಾಮ್ರಸ್ಥಾಲಿಯನ್ನು ಅವನ ಕೈಲಿಟ್ಟು 'ಈ ಹನ್ನೆರಡು ವರ್ಷಗಳ ಕಾಲದಲ್ಲಿ ವನ್ಯಮೂಲ ಫಲಶಾಕಗಳನ್ನು ಈ ದ್ರುಪದ ರಾಜಪುತ್ರಿಯು ಇದರಲ್ಲಿ ಸಿದ್ಧಪಡಿಸಿದರೆ ಅವು ಅಕ್ಷಯವಾದ ಚತುರ್ವಿಧಾಹಾರಗಳಾಗುವುವು' ಎಂದು ಅನುಗ್ರಹ ಮಾಡಿ ಅಂತರ್ಧಾನನಾದನು! ಅಂದಿನಿಂದ ದ್ರೌಪದಿ ಮಾಡಿದ ಅಡಿಗೆ ಅಕ್ಷಯವಾಗಿ ಸಮಸ್ತ ಋಷಿ ಸಮೂಹಕ್ಕೂ ಬ್ರಾಹ್ಮಣರಿಗೂ ಅತಿಥಿಗಳಿಗೂ ತೃಪ್ತಿಕರವಾದ ಭೋಜನ ಲಭಿಸುತ್ತಿತ್ತು. ಧರ್ಮರಾಯನ ಸಮಸ್ಯೆ ಪರಿಹೃತವಾಯ್ತು. ಪಂಪ ಭಾರತದಲ್ಲಿ ಅಕ್ಷಯ ಪಾತ್ರೆಯ ಪ್ರಸ್ತಾಪವಿಲ್ಲ. ಅಲ್ಲಿ ಪಾಂಡವರ ಸಂಗಡ ಹಸ್ತಿನಾಪುರದ ಬ್ರಾಹ್ಮಣರು ಯಾರೂ ಅಡವಿಗೆ ಹೋಗಲಿಲ್ಲ. ಮೊದಲಿನಿಂದ ಕಾಮ್ಯಕ ವನದಲ್ಲಿಯೇ ಇದ್ದು ತಪಸ್ಸನ್ನಾಚರಿಸುತ್ತಿದ್ದ ಋಷಿಗಳಿಗೆ ಪಾಂಡವರು ಹೊಸದಾಗಿ ಆಹಾರವೊದಗಿಸುವ ಕೆಲಸವೇನಿದೆ? ಆದ್ದರಿಂದ ಪಂಪನ ಯುಧಿಷ್ಠಿರನಿಗೆ ಅಕ್ಷಯ ಪಾತ್ರೆಯ ಅಗತ್ಯವೇ ಒದಗಲಿಲ್ಲ. ನನ್ನಯಭಟ್ಟ ಈ ಅಕ್ಷಯಪಾತ್ರೆಯ ಪ್ರಾಪ್ತಿಯನ್ನೂ ಅದಕ್ಕೂ ಮೊದಲು ಶೌನಕ ಮಹರ್ಷಿ ಧರ್ಮರಾಯನಿಗೆ ರಾಜಧರ್ಮವನ್ನು ಉಪದೇಶಿಸಿದ ಕಥೆಯನ್ನೂ ಹೇಳಿದ್ದಾನೆ.

ಐದು ವರ್ಷಗಳ ಕಾಲ ಪಾಂಡವರು ಕಾಮ್ಯಕವನದಲ್ಲಿ ವಾಸವಾಗಿದ್ದರು. ಆ ಸಮಯದಲ್ಲಿ ಹಸ್ತಿನಾವತಿಯಲ್ಲಿ ದುರ್ಯೋಧನಾದಿಗಳು ಸಮಸ್ತ ಪೃಥ್ವೀರಾಜ್ಯವೂ ತಮ್ಮದೇ ಆಯಿತೆಂಬ ಸಂತೋಷದಿಂದ ಹಿಗ್ಗಿದರೂ ಅಡವಿಯಲ್ಲಿದ್ದ ಪಾಂಡವರ ಮೇಲೆ ದ್ವೇಷವನ್ನು ಕಳೆದುಕೊಂಡಿರಲಿಲ್ಲ. ಭೀಮಾರ್ಜುನರು ವನವಾಸದ ನಿಯಮವನ್ನುಲ್ಲಂಘಿಸಿ ಹಸ್ತಿನಾವತಿಗೆ ನುಗ್ಗಿಯಾರೆಂಬ ಭೀತಿ ಧೃತರಾಷ್ಟ್ರನನ್ನು ಬಾಧಿಸುತ್ತಿತ್ತು.[1] ಆ ಸಮಯದಲ್ಲಿ ಮೈತ್ರೇಯರು ಹಸ್ತಿನಾಪುರಕ್ಕೆ ಹೋಗಿ ಧೃತರಾಷ್ಟ್ರ ಸುಯೋಧನರನ್ನು ಕಂಡು ಪಾಂಡವರೊಡನೆ ಪ್ರೀತಿಯಿಂದ ನಡೆದುಕೊಳ್ಳುವಂತೆ ಹಿತೋಪದೇಶ ನೀಡಿದರು. ಆಗ ಬಲಗರ್ವಿತನಾದ ಸುಯೋಧನನು ಗಹಗಹಿಸಿ ನಕ್ಕು ತನ್ನ ತೊಡೆ ತಟ್ಟಿದನಂತೆ! ಆಗ ಮೈತ್ರೇಯರು 'ಭೀಮನಿಂದ ನಿನಗೆ ಊರುಭಂಗವೊದಗಲಿ' ಎಂದು ಶಾಪ ಹಾಕಿದರು.

ಇತ್ತ ಯಾದವ ಪಾಂಚಾಲರು ಅರಣ್ಯಕ್ಕೆ ಹೋಗಿ ಪಾಂಡವರನ್ನು ಕಂಡು ಕುಶಲ ಪ್ರಶ್ನೆ ಮಾಡಿ ದ್ಯೂತದ ಸಮಾಚಾರವನ್ನೆಲ್ಲ ಕೇಳಿ ತಿಳಿದು ಸಹಾನುಭೂತಿ ವ್ಯಕ್ತಪಡಿಸಿದ ವೃತ್ತಾಂತವನ್ನು ನನ್ನಯ ವರ್ಣಿಸಿದ್ದಾನೆ. ದ್ರೌಪದಿಯ ದುಃಖ

---

1 ಅಮಿತ ಭುಜಶಕ್ತಿ ನಂತಕ। ಸಮುಲಪ್ಪಾಂಡು ಸುತು
ಲಿಂದು ಸೌಭಾತ್ರ ಸ್ನೇಹ ಮುನಕು ವಿಚ್ಛೇದಮುಗಾ। ಸಮು
ಯಾಶಿ ಕ್ರಮಮು ಸೇಯ ಸಮಕಟ್ಟರುಗಾ (ಅರಣ್ಯ I–97.)

ನಿವೇದನವನ್ನು ಕೇಳಿ ಮನಸ್ಸು ಕರಗಿದ ಶ್ರೀಕೃಷ್ಣನು 'ಅವಿನೀತರೂ ವಧ್ಯರೂ ಆದ ಕೌರವ ಪಾಂಡವರನ್ನು ಕೊಂದು ಕುರುಪ್ರವರನಾದ ಧರ್ಮರಾಯನಿಗೆ ಅವನೀ ರಾಜ್ಯಾಭಿಷೇಕ ಮಾಡೋಣ' ಎಂದು ಮುನಿದೆದ್ದಾಗ ಅರ್ಜುನನೇ ಅವನಿಗೆ ಸಮಾಧಾನ ಹೇಳಿದನಂತೆ! (I-124) ಈ ಕಥೆಗಳನ್ನೆಲ್ಲ ಪಂಪ ಹೇಳಿಲ್ಲ.

ಪಾಂಡವರು ಐದು ವರ್ಷ ಕಾಮ್ಯಕ ವನದಲ್ಲಿ ಯಾವ ಗಲಭೆ ಗೊಂದಲಗಳೂ ಇಲ್ಲದೆ ಹೊತ್ತು ಕಳೆದ ಮೇಲೆ ಆ ವನಕ್ಕೆ ಹತ್ತಿರದಲ್ಲಿಯೇ ಇದ್ದ ದ್ವೈತವನದ ಸಸ್ಯ ಸಮೃದ್ಧಿಯನ್ನು ಗಮನಿಸಿ ಅಲ್ಲಿಗೆ ಹೋಗಿ ನಿಂತರು. ಬಹುಶಃ ಕಾಮ್ಯಕದಲ್ಲಿದ್ದಾಗ ಗಜಪುರದಿಂದ ಜನ ಪದೇ ಪದೇ ಬಂದು ಹೋಗುತ್ತಿದ್ದುದರಿಂದ ಅವರಿಗೆ ಬೇಸರ ಬಂದಿರಬಹುದು. ಇತರರಿಗೆ ದುರ್ಗಮವಾಗಿ ತಮಗೆ ವಾಸಕ್ಕೆ ಅನುಕೂಲವಾಗಿ 'ಪಣ್ಬಲ'ಗಳಿಗೆ ಕೊರತೆಯಿಲ್ಲದುದರಿಂದ ತಮ್ಮ ವನವಾಸದ ಅವಧಿ ಮುಗಿಯುವ ತನಕ ಅಲ್ಲಿಯೇ ಇರಬಹುದೆಂದು ಭಾವಿಸಿ 'ದ್ವೈತವನದೊಳದ್ವೈತ ಸಾಹಸ'ರು ಇರುತ್ತಿರಲು ಒಂದುದಿನ ಸೈಂಧವನು ಪಾಂಡವರನ್ನು ಹಿಂಸೆಗೊಳಗುಮಾಡುವ ಉದ್ದೇಶದಿಂದ ನೈಮುರೆಸಿಕೊಂಡು ಬಂದು ಪಾಂಡವರು ಬೇಟೆಗೆ ಹೋಗಿದ್ದ ಸಮಯದಲ್ಲಿ ಆಶ್ರಮದಲ್ಲಿದ್ದ ಪಾಂಚಾಲಿಯನ್ನು ಎತ್ತಿ ರಥದಲ್ಲಿ ಕುಳ್ಳಿರಿಸಿಕೊಂಡು ಹೊರಟನು. ಆದರೆ ಆ ವಾರ್ತೆ ತಿಳಿದ ಭೀಮಾರ್ಜುನರು ಸರ್ರನೆ ಬಂದು ಅವನ ರಥವನ್ನು ಶತಚೂರ್ಣವಾಗಿಸಿ ಅವನನ್ನು ಕೋಡಗಗಟ್ಟು ಕಟ್ಟಿ ಎಳೆತಂದು ಧರ್ಮರಾಯನಿಗೆ ತೋರಿಸಿದರು. ಅವನು ಧರ್ಮರಾಯನಲ್ಲವೆ? ಸೈಂಧವನನ್ನು ಹಂಗಿಸಿ ಛೀಮಾರಿ ಹಾಕಿ 'ನಿನ್ನ ಪರಿಭವಕ್ಕೆ ತಂದು ನಿನ್ನ ಯಶಮಂ ಕಿಡಿಸಿದೆ. ಕೊಂದಡೇ ವಂದಪುದು?' ಎಂದು ನುಡಿದು ಅವನನ್ನು ಬಿಡುಗಡೆ ಮಾಡಿದನು! ಶತ್ರುಶೇಷವನ್ನು ಉಳಿಸಿದ ಹಾಗಾಯಿತು. ಅವನು ಮಹೇಶ್ವರನನ್ನು ಕುರಿತು ತಪಸ್ಸು ಮಾಡಿ ಪಾಂಡವರನ್ನು 'ಒಂದು ದೆವಸದನುವರದೊಳ್' ಗೆಲ್ಲುವ ವರವನ್ನು ಪಡೆಯಲು ನಿರ್ಧರಿಸಿ ಹೊರಟುಹೋದನು. ದ್ರೋಣಾಚಾರ್ಯನು ದ್ರುಪದ ರಾಜನನ್ನು ಸೆರೆಯಿಂದ ಬಿಟ್ಟ ಹಾಗೆ ಆಯಿತು. ಅವನಿಗೆ ಧರ್ಮರಾಯನ ಔದಾರ್ಯ ಅರ್ಥವಾಗಲಿಲ್ಲ. ಅವನ ದ್ವೇಷ ವೃದ್ಧಿಯಾಯಿತೇ ಹೊರತು ಧರ್ಮರಾಯನ ಔದಾರ್ಯ ಜಯದ್ರಥನಲ್ಲಿ ಕೃತಜ್ಞತಾ ಭಾವವನ್ನು ಮೂಡಿಸಲಿಲ್ಲ!

ಇನ್ನೊಂದು ದಿನ ದುರ್ಯೋಧನನು ಬೇಟೆಯ ನೆಪದಿಂದ ಸಮಸ್ತ ಪರಿವಾರ ಸಮೇತನಾಗಿ ದ್ವೈತವನ ಸಮೀಪಕ್ಕೆ ಬಂದು ಪಾಂಡವರಿಗೆ ಕಾಣುವ ಹಾಗೆ ತನ್ನ ವೈಭವದ ಪ್ರದರ್ಶನ ಮಾಡಿದನು. 'ಕಾಡೊಳ್ ಬೇಡರಂತೆ ತೊಟಿಲ್ವ ದಾಯಿಗರ ಕಂದಿ ಕುಂದಿದ ಮೊಗಂಗಳಂ ನೋಡುವುದು ಮೆನ್ನನವರಿಂ ನೋಡಿಸುವುದು ಮಿಾ ಯೆರಡೆ ಸಂಸಾರ ಫಲಂ' ಎಂದು ಅವನ ಭಾವನೆ. ಅವನ ಜತೆಯಲ್ಲಿ ಗಾಂಗೇಯ ದ್ರೋಣ ಕೃಪ ವಿದುರ ಪ್ರಭೃತಿಗಳೂ ಅಶ್ವತ್ಥಾಮ ಕರ್ಣ ಶಲ್ಯ ಶಕುನಿ ಸೈಂಧವ ಪ್ರಮುಖ ನಾಯಕರೂ ಬಂದಿದ್ದರಂತೆ! ಕೌರವನ ಅರಸಿಯರೂ ಮಕ್ಕಳೂ

ಸಮಸ್ತ ಪರಿವಾರ ಸಹಿತರಾಗಿ ವನಕ್ಕೆ ಬಂದಿದ್ದರು. ನೃತ್ಯ ಗೀತಾದಿ ವೈಭವಗಳು ನಡೆಯುತ್ತಿದ್ದುವು. ವಂದಿ ಮಾಗಧರು ದುರ್ಯೋಧನನ ಬಿರುದಾವಳಿಗಳನ್ನು ಹೊಗಳಿದರು. ಈ ಕೋಲಾಹಲವನ್ನು ಕೇಳಿ ದ್ರೌಪದಿಗಾದರೂ ಮನಸ್ಸು ನೊಂದಿರ ಬಹುದು. ಆದರೆ ಅವಳಿಗಿಂತ ಹೆಚ್ಚಾಗಿ, ಪಾಂಡವರಿಗಿಂತ ಮುಂಚಿತವಾಗಿ, ಚಿತ್ರಾಂಗದ[1]ನೆಂಬ ಗಂಧರ್ವನು ದುರ್ಯೋಧನನ ಮೇಲೆ ಬಹಳ ಸಿಟ್ಟುಗೊಂಡನು. ಪಂಪನ ಪ್ರಕಾರ ಇದು ಪೂರ್ವಜನ್ಮದ ಹಗೆತನ! ಪಂಪನ ಜೈನ ಸಂಸ್ಕಾರ ಇಲ್ಲಿ ತನ್ನ ಪ್ರಭಾವ ಬೀರಿದೆಯೆಂದು ಭಾವಿಸಬಹುದು. ಭವಾಂತರ ದ್ವೇಷದ ಕಥೆ ಜೈನ ಪುರಾಣ ಗಳಲ್ಲಿ ಹಲವು ಕಡೆ ಬರುತ್ತದೆ. ಪಂಪನು ಭಾರತದ ಬೇರೆ ಕೆಲವೆಡೆಗಳಲ್ಲಿಯೂ 'ಅನ್ಯ ಜನ್ಮದ ಮುನಿಸ'ನ್ನು ಪ್ರಸ್ತಾಪಿಸಿದ್ದಾನೆ.[2] ಮೂಲ ಭಾರತದಲ್ಲಿಯೂ ಆಂಧ್ರಭಾರತದಲ್ಲಿಯೂ ಈ ಭವಾಂತರದ ಪ್ರಸ್ತಾಪವಿಲ್ಲ. ಇಂದ್ರ ಗಂಧರ್ವರ ವಿಹಾರಕ್ಕೆಂದು ಕೊಟ್ಟಿದ್ದ ದ್ವೈತವನ ಸರೋವರವನ್ನು ಕೌರವರು ಆಕ್ರಮಿಸಿದ್ದ ರಿಂದ ಕೌರವರಿಗೂ ಗಂಧರ್ವರಿಗೂ ಕಲಹ ತೊಡಗಿತೆಂದು ಹೇಳಿದೆ.[3] ಆ ಸಮಯದಲ್ಲಿ ಧರ್ಮರಾಯನು 'ಸದ್ಯಸ್ಕಂದ'ವೆಂಬ ಯಜ್ಞಕ್ಕೆ ದೀಕ್ಷೆ ವಹಿಸಿದ್ದ ನಂತೆ.[4]

ಗಂಧರ್ವರಾಜನಾದ ಚಿತ್ರಾಂಗದನು ದುರ್ಯೋಧನ ದುಶ್ಯಾಸನರಿಬ್ಬರನ್ನೂ ಮಾಯಾಯುದ್ಧದಲ್ಲಿ ಸೆರೆಹಿಡಿದು 'ಪರಮಾಣು ಮಾರ್ಗ'ದಲ್ಲಿ ಹೊರಟು ಹೋದನು. ಕೌರವ ಸೈನ್ಯದ ಮಹಾ ಮಹಾ ವೀರರೆಲ್ಲರೂ ಅಲ್ಲಿಯೇ ಇದ್ದರೂ ಏನೂ ಮಾಡಲಾರದೆ ಹೋದರು. ಅವರೆಲ್ಲ 'ಬಡವರ ಪಿತರರಂತೆ ಮಿಳ್ಮಿಳನೆ ನೋಡುತ್ತಿರೆ ಮಿಕ್ಕುಮುಂಡರಂತೆ ತಲೆಯಂ ಬಾಗಿ' ತೆಪ್ಪಗಿದ್ದರು! ಗಂಧರ್ವ ರಾಜನನ್ನು ದಂಡಿಸಿ ಅರಸನನ್ನೂ ಅವನ ತಮ್ಮನನ್ನೂ ರಕ್ಷಿಸಿಕೊಳ್ಳುವುದು ಅವರಿಂದ ಸುತರಾಂ ಸಾಧ್ಯವಾಗಲಿಲ್ಲ. ತೆಲುಗು ಭಾರತದ ಪ್ರಕಾರ ದುರ್ಯೋಧನನು ಘೋಷ ಯಾತ್ರೆಗೆಂದು ಧೃತರಾಷ್ಟ್ರನ ಅನುಮತಿ ಪಡೆದು ಕರ್ಣಾದಿಗಳೊಡನೆ ಅಡವಿಗೆ ಹೋಗಿದ್ದನೆಂದು ಹೇಳಿದೆ. ಭೀಷ್ಮದ್ರೋಣರು ಅವರೊಡನೆ ಹೋಗಿದ್ದರೆಂದು ಹೇಳಿಲ್ಲ. ಕರ್ಣನಿದ್ದನಾದರೂ ಅವನೂ ಗಂಧರ್ವನನ್ನು ಎದುರಿಸಲು ಅಶಕ್ತನಾದನು. ಅಲ್ಲಿ ದುರ್ಯೋಧನನನ್ನೂ ಅವನ ತಮ್ಮಂದಿರಲ್ಲಿ ಹಲವರನ್ನೂ ಅವನ ಮಂತ್ರಿಗಳನ್ನೂ ಗಂಧರ್ವನು ಸೆರೆಹಿಡಿದನು. ಪಂಪ ಭೀಷ್ಮಾದಿಗಳನ್ನೂ ಎಳೆತಂದು ಆ ಮೂಲಕ ಅರ್ಜುನನ ಹಿರಿಮೆಯನ್ನು ಹೆಚ್ಚಿಸಿದ್ದಾನೆ. ಅವರಾರಿಂದಲೂ ಸಾಧ್ಯವಾಗದ ಮಹಾ

---

[1] ಇವನನ್ನು ಚಿತ್ರಸೇನನೆಂದೂ ಕರೆಯುವರು

[2] ಪಂಪ II–59

[3] ಆಂಧ್ರಭಾರತ ಅರಣ್ಯಪರ್ವ II 382

[4] ಅದೇ 380

ಕಾರ್ಯವನ್ನು ಮಾಡಿ ಅರ್ಜುನ ಕೌರವನನ್ನೂ ಅವನ ತಮ್ಮನನ್ನೂ ಸಂರಕ್ಷಿಸಿದನೆಂದರೆ ಅದು ಸಾಮಾನ್ಯ ಸಂಗತಿಯೆ ?

ಘೋಷಯಾತ್ರಾಪ್ರಕರಣ ತೆಲುಗು ಭಾರತದಲ್ಲಿ ಇಂದ್ರಕೀಲದ ಕಥೆಯಾದ ಮೇಲೆ ಬಂದಿದೆ. ಆದರೆ ಪಂಪ ಅದನ್ನು ಮುಂಚೆಯೇ ಹೇಳಿದ್ದಾನೆ. ಪಂಪನಿಗೆ ಈ ಕಥೆ ಅರ್ಜುನನ ಪರಾಕ್ರಮವನ್ನೂ ಧನುರ್ವಿದ್ಯಾ ಪಾಂಡಿತ್ಯವನ್ನೂ ವರ್ಣಿಸುವುದಕ್ಕೆ ಅನುವಾದದ್ದು. ಅರ್ಜುನ ಈಶ್ವರನ ಅನುಗ್ರಹಕ್ಕೆ ಪಾತ್ರನಾಗಿ ಪಾಶುಪತಾದಿ ಮಹಾಸ್ತ್ರಗಳನ್ನು ಸಂಪಾದಿಸಿಕೊಳ್ಳುವ ಮೊದಲೇ ಗಂಧರ್ವರನ್ನು ಗೆಲ್ಲಬಲ್ಲ ಧನ್ವಿಯಾಗಿದ್ದನು! ಸ್ವಶಕ್ತಿಯಿಂದಲೇ ಗಂಧರ್ವರಾಜನನ್ನೂ ಗೆದ್ದವನು ಶಿವನೊಡನೆ ಸಮಜೋಡಿಯಾಗಿ ಕಾದಿ ಗೆದ್ದು ವಿಜಯ ಪರಂಪರೆಯನ್ನು ಸಾಧಿಸಿಕೊಂಡನೆಂದು ಹೇಳಿ ಪಂಪ ವಿಕ್ರಮಾರ್ಜುನನು ಸಾಹಸಭರಣನೂ ಹೌದೆಂಬುದನ್ನು ನಿರೂಪಿಸಿದ್ದಾನೆ.

'ಪಗೆಯಿಱೀಯಬಂದರಮೂಗನರಿದರ್' ಎಂಬಂತೆ ಆಯಿತು, ದುರ್ಯೋಧನನ ಗತಿ! ಅವನು ಪಾಂಡವರನ್ನು ಗೋಳಾಡಿಸುವ ಸಲುವಾಗಿ, ಅವರ ದುಃಖವನ್ನು ಕಂಡು ತಾನು ನಲಿಯಬೇಕೆಂಬ ಆಸೆಯಿಂದ ದ್ವೈತವನಕ್ಕೆ ಹೋದನು. ಆದರೆ ಅಲ್ಲಿ ಆದದ್ದೇ ಬೇರೆ. ಅನಿರೀಕ್ಷಿತವಾದ ಶತ್ರುವಿನಿಂದ ಅವನಿಗೆ ಕ್ಲೇಶ ಲಭಿಸಿತು. ಅಲ್ಲಿಗೆ ಗಂಧರ್ವರಾಜನು ಬರಬಹುದೆಂದು ದುರ್ಯೋಧನನು ಊಹಿಸಿರಲಿಲ್ಲ. ಅವನನ್ನು ಗೆಲ್ಲಲು ತನ್ನ ಗದಾಯುದ್ಧ ಪಾಂಡಿತ್ಯವಾಗಲಿ ಕರ್ಣನ ಬಿಲ್ಲುಗಾರಿಕೆಯ ಹೆಚ್ಚಳವಾಗಲಿ ಸ್ವಲ್ಪವೂ ಉಪಯೋಗವಾಗಲಿಲ್ಲ. ಪಂಪನ ಹೇಳಿಕೆಯಂತೆ ಸ್ವಯಂ ಭೀಷ್ಮನೇ ಆ ಗಂಧರ್ವನನ್ನು ನಿಗ್ರಹಿಸಲು ಶಕ್ತನಾಗಲಿಲ್ಲ! ಇನ್ನು ಉಳಿದವರ ಪಾಡೇನು ?

ದುರ್ಯೋಧನ ದುಶ್ಶಾಸನರು ಸೆರೆಸಿಕ್ಕಿ ಕಣ್ಮರೆಯಾದ ಮೇಲೆ ಕೌರವ ರಾಜನ ಮಹಾದೇವಿ ಭಾನುಮತಿಯೇ ಧರ್ಮರಾಯನಲ್ಲಿಗೆ ಹೋಗಿ ಅವನ ಕಾಲಿಗೆರಗಿ 'ಎನಗೆ ಪುರುಷ ಭಿಕ್ಷಮನಿಕ್ಕಿಂ' ಎಂದು ಬೇಡಿಕೊಳ್ಳಬೇಕಾಯಿತು. [1]

'ನೋಂತರ ಪಗೆವರನೆಟ್ಟಿಱಿ
ದುತಾಯ್ತೆಂದಿರದೆ ಪುರುಷ ಕಾರದ ಪೆಂಪಂ
ಚಿಂತಿಸಿ ತರಿಸಿ ಮಹೀಶನ
ನೆಂತಪ್ಪೊಡ ಮೆನಗೆ ಪುರುಷ ಭಿಕ್ಷಮನಿಕ್ಕಿಂ'

ಎಂದು ಭಾನುಮತೀದೇವಿಯು ಪ್ರಾರ್ಥಿಸಿದಳು. ಇಂಥ ದೀನಸ್ಥಿತಿಯಲ್ಲಿರುವ ನಾದಿನಿಯನ್ನು ನೋಡಿ ಮನಕರಗದಷ್ಟು ಕಠಿಣ ಹೃದಯನೆ ಧರ್ಮರಾಯ ? ತನಗೂ ತನ್ನ

---

[1] ದುರ್ಯೋಧನನ ಮಂತ್ರಿಗಳೂ ಹಸ್ತಿನಾವತಿಯ ಪೌರರೂ ಹೋಗಿ ಧರ್ಮರಾಯನನ್ನು ಬೇಡಿಕೊಂಡರೆಂದು ಬೇರೆ ಭಾರತಗಳಲ್ಲಿದೆ.

ವರಿಗೂ ಕಿರುಕುಳ ಕೊಡುವ ಕೆಟ್ಟ ಉದ್ದೇಶದಿಂದಲೇ ಬಂದ ದುರ್ಯೋಧನನಿಗೆ ಕೇಡು ಒದಗಿದರೆ, ಅನ್ಯರಿಂದ ಹಿಂಸೆಯುಂಟಾದರೆ, ಆ ಧರ್ಮಜ್ಞ ಸಹಿಸಲಾರ. 'ನಾವು ಮಾಡುವ ಕೆಲಸವನ್ನು ಗಂಧರ್ವರೇ ಮಾಡಿದರು' ಎಂಬ ಮನೋಭಾವ ಅವನದಲ್ಲ. ಪಂಪನ ಭಾನುಮತಿ ಬಳಸಿರುವ ನಾಣ್ಣುಡಿಯು ಬಹಳ ಸಮಯೋಚಿತವೂ ಅರ್ಥಪೂರ್ಣವೂ ಆಗಿದೆ. ಪುಣ್ಯ ಮಾಡಿದವರ ಹಗೆಗಳನ್ನು ಎತ್ತು ಇರಿಯಿತಂತೆ! ಹಗೆಗೆ ಪೆಟ್ಟಾಯಿತು. ಆದರೆ ಅಷಕ್ಕಾಗಿ ಅವನು ಯಾರನ್ನೂ ಆಕ್ಷೇಪಿಸುವಂತಿಲ್ಲ. ಎತ್ತಿಗೆ ಪುಣ್ಯವಂತರು ಪಾಪಿಗಳು ಎಂಬ ತಾರತಮ್ಯಜ್ಞಾನವಿಲ್ಲ. ಅದಕ್ಕೆ ಸಿಟ್ಟು ಬಂದು ಸಿಕ್ಕಿದವನನ್ನು ಇರಿಯಿತು. ಆಯಾಸವಿಲ್ಲದೆ ಪುಣ್ಯವಂತನ ಶತ್ರುವಿಗೆ ಹಾನಿಯಾಯಿತು. ದುರ್ಯೋಧನ ತನ್ನ ದಾಯಾದಿಗಳನ್ನು ಇದಕ್ಕಾಗಿ ದೂಷಿಸುವಂತಿರಲಿಲ್ಲ. ಗಂಧರ್ವನನ್ನು ಅವರು ಈ ಕೆಲಸಕ್ಕೆ ಪ್ರೇರಿಸಲಿಲ್ಲ. ದುರ್ಯೋಧನನಿಗೆ ಸಂಭವಿಸಿದ ಕೇಡಿಗೆ ಪಾಂಡವರ ಹೊಣೆಗಾರಿಕೆ ಏನೂ ಇಲ್ಲ. ಆದರೆ ಧರ್ಮರಾಯ ತನ್ನ ವೈರಿಗೆ ಕೇಡಾಯಿತೆಂದು ಸಂತೋಷಿಸಲಿಲ್ಲ; ಸಮಾಧಾನ ಹೊಂದಲಿಲ್ಲ. ಅವನು ದುಃಖಮಗ್ನಳಾದ ಭಾನುಮತೀ ದೇವಿಗೆ ಧೈರ್ಯ ಹೇಳಿದನು.

> ಸುರಿಯಲ್ವೇಡಮದರ್ಕೆ ಬಾಷ್ಪಜಳಮಂ ನಿನ್ನಾಣ್ಮನಂ ನಿನ್ನೊಳಿಂ
> ದಿರದಾಂ ಕೊಡುವೆವೆಮ್ಮೊಳಾದ ಕಲಹಕ್ಕೇತಾದೊಡಂ ಕೇಳ ಸೂ
> ರ್ವರೆ ದಲ್ ಕೌರವರಾಮುಮಯ್ವರೆ ವಲಂ ಮತ್ತೊರ್ವರೊಳ್ ತೊಟ್ಟ ಸಂ
> ಗರ ರಂಗಕ್ಕೆ ಜಸಕ್ಕೆ ಕೂಡುವೆಡೆಯೊಳ್ ನೂಱಯ್ವರಾವಲ್ಲವೇ

ಎಂದು ಧರ್ಮರಾಯನು ತನ್ನ ಧರ್ಮಪಕ್ಷಪಾತವನ್ನು ಮೆರೆದು ಅರ್ಜುನನನ್ನು ಆ ಕೆಲಸಕ್ಕೆ ನೇಮಿಸಿದನು. ಪಂಪಭಾರತದಲ್ಲಿ ಭೀಮಸೇನನು ಕೌರವ ರಕ್ಷಣೆಗೆ ಹೋಗಲು ನಿರಾಕರಿಸುವ ಪ್ರಮೇಯವೇ ಇಲ್ಲ! ಅವನಿಗೆ ಧರ್ಮರಾಯ ಆ ಕೆಲಸವನ್ನು ಹೇಳಲೇ ಇಲ್ಲ! ಅಲ್ಲದೆ ಪಂಪಭಾರತದ ಪ್ರಕಾರ ಸ್ವಯಂ ಭಾನುಮತಿಯೇ ಬಂದು ಕೇಳಿಕೊಂಡವಳು, ಕೌರವನ ಸೈನಿಕರು ಪರಿವಾರದವರು ಮುಂತಾದವರಲ್ಲ. ಆರ್ತಳಾಗಿದ್ದ ಆಕೆಯ ಎದುರಿಗೆ ಕೌರವ ಸಂರಕ್ಷಣೆಯ ವಿಷಯಕ್ಕೆ ಚರ್ಚೆ ಮಾಡುತ್ತ ಹೊತ್ತು ಕಳೆಯುವಷ್ಟು ಕಲ್ಲೆದೆಯವರಲ್ಲ ಪಾಂಡವರು. ಮೇಲಿನ ಪದ್ಯವನ್ನು ಬರೆಯುವಾಗ ಮೂಲಭಾರತದಲ್ಲಿನ ಒಂದು ಶ್ಲೋಕವನ್ನು ಪಂಪ ದೃಷ್ಟಿಯಲ್ಲಿರಿಸಿಕೊಂಡಿದ್ದನೆಂದು ಸ್ಪಷ್ಟವಾಗಿದೆ :

> 'ಪರೈಃ ಪರಿಭವಂ ಪ್ರಾಪ್ತೇ ವಯಂ ಪಂಚೋತ್ತರಂ ಶತಮ್
> ಪರಸ್ಪರ ವಿರೋಧೇತು ವಯಂ ಪಂಚ ಶತಂತು ತೇ'

ಅರ್ಜುನ ಒಡನೆಯೇ ಧನುರ್ಧಾರಿಯಾಗಿ ಹೊರಟು ಗಂಧರ್ವರು ಹೋದ ದಾರಿಯನ್ನು ವಿಚಾರಿಸಿಕೊಂಡು ಅವರನ್ನು ಬೆನ್ನಟ್ಟಿದನು. ಆದರೆ ಅವರು ಆ ವೇಳೆಗೆ

ಅದೃಶ್ಯರಾಗಿದ್ದರು. ಆಗ ಅರ್ಜುನನು ಹಿಂದೆ ತನಗೆ ಹಿಮವತ್ಪರ್ವತದಲ್ಲಿ ರಾಕ್ಷಸಿಯೊಬ್ಬಳು ಕೊಟ್ಟಿದ್ದ 'ಚಕ್ಷುಸಿ'[1] ಯೆಂಬ ವಿದ್ಯೆಯಿಂದ ಕಣ್ಣನ್ನು ಅಭಿಮಂತ್ರಿಸಿಕೊಂಡು ಗಂಧರ್ವರನ್ನು ಕಂಡು ಅಸ್ತ್ರಪ್ರಯೋಗ ಮಾಡಿ ಹದಿನಾಲ್ಕು ಸಾವಿರ ಗಂಧರ್ವರನ್ನು ಕೊಂದು ಚಿತ್ರಾಂಗದನನ್ನು ಹಲವು ಬಾಣಗಳಿಂದ ಹೊಡೆದು ನೋಯಿಸಿದನು. ಗಂಧರ್ವನು ಭಯಗ್ರಸ್ತನಾಗಿ 'ಕೊಳ್, ನಿನ್ನ ನೆಚ್ಚಿನ ಸೆರೆಯನ್' ಎಂದು ದುಶ್ಶಾಸನ ದುರ್ಯೋಧನರನ್ನು ಬಿಟ್ಟುಬಿಟ್ಟನು. ಆಗ ಅವರಿಗಾಗಿ ಅರ್ಜುನನು ಒಂದು ಬಾಣಸೋಪಾನವನ್ನೇ ನಿರ್ಮಿಸಿ ಮೆಲ್ಲನೆ ಇಳಿಸಿಕೊಂಡು ಗಂಧರ್ವರು ಕಟ್ಟಿದ್ದ ಕಟ್ಟುಗಳೊಡನೆ ತಂದು ಆ ಸೋದರರನ್ನು ಧರ್ಮಜನಿಗೆ ಒಪ್ಪಿಸಿದನು. ದುರ್ಯೋಧನನ ಆಗಿನ ದುಸ್ಥಿತಿಯನ್ನು ಕಂಡು ದ್ರೌಪದಿ

'ಎಮ್ಮಂ ಪಿಡಿದೆಳೆವಂದಿನ
ನಿಮ್ಮದಟುಗಳೀಗಳೆತ್ತ ಪೋದುವೊ ಪಿಡಿವ
ಟ್ಟಮ್ಮ ಬಟಲ್ದಿರೆ ಕಂಡಿರೆ
ನಿಮ್ಮಳವಂ ನಿಮಗಮೀಗಳೀಯೆಡರಾಯ್ತೇ

ಎಂದು 'ಸಾಯೆ ಸರಸಂ ನುಡಿದು' ಕಟ್ಟಿದ ಕಟ್ಟುಗಳನ್ನು ತಾನೇ ಬಿಚ್ಚಿ 'ಕಳೆದು' "ನಿನ್ನಾಣ್ಮನುಮಂ ಮಯ್ದುನನುಮಂ ನೀನ್ ಒಪ್ಪುಗೊಳ್" ಎಂದು ಅವರನ್ನು ಭಾನುಮತಿಗೆ ಒಪ್ಪಿಸಿದಳಂತೆ! ಆ 'ಮಾನಧನ'ನು ಅಪಮಾನದಿಂದ ಕುಗ್ಗಿ 'ದಾಡೆಗಳೆದ ಕುಳಿಕನಂತೆಯುಂ ಕೋಡುಡಿದ ಮದಹಸ್ತಿಯಂತೆಯುಂ ಗಳಿತಗರ್ವನಾಗಿ' ಪಾಂಡವರ ಮುಖ ನೋಡಲೂ ನಾಚಿಕೆಪಟ್ಟು ತಲೆತಗ್ಗಿಸಿಕೊಂಡು ನಿಂತಿದ್ದು ಆಮೇಲೆ ಸಪರಿವಾರನಾಗಿ ಗಜಪುರಕ್ಕೆ ಹೊರಟುಹೋದನು.

ಆಂಧ್ರಭಾರತದಲ್ಲಿ ಈ ಕಥೆ ಕೊಂಚ ಭಿನ್ನವಾಗಿದೆ. ಅಲ್ಲಿ ಚಿತ್ರಸೇನನೇ ಅರ್ಜುನನ ಇಚ್ಛೆಯಂತೆ ಕೌರವ ಸಹೋದರರನ್ನು ಕರೆದುಕೊಂಡು ಬಂದು ಧರ್ಮರಾಯನಿಗೆ ಒಪ್ಪಿಸಿದ್ದಾನೆ! ಧರ್ಮರಾಯನು ಅದಕ್ಕಾಗಿ ಗಂಧರ್ವರಾಜನನ್ನು ಅಭಿನಂದಿಸಿ ಅವನ ಔದಾರ್ಯವನ್ನು ಪ್ರಶಂಸೆ ಮಾಡಿದ್ದಾನೆ. 'ನಿಮ್ಮ ಕಾರಣದಿಂದ ನಮ್ಮ ವಂಶಕ್ಕೆ ಆಗಬಹುದಾಗಿದ್ದ ಹಾನಿ ತಪ್ಪಿತು. ಇವನು (ದುರ್ಯೋಧನ) ನಿಮಗೆ ಎಂಥ ಅಪರಾಧವನ್ನು ಮಾಡಿದ್ದರೂ ಅದೆಲ್ಲವನ್ನೂ ಕ್ಷಮಿಸಿ ನಮಗಾಗಿ ಇವನನ್ನು ಬಿಡುಗಡೆ ಮಾಡಬೇಕು' ಎಂದು ಧರ್ಮರಾಯನು ಪ್ರಾರ್ಥಿಸಿದುದರಿಂದ ಚಿತ್ರಾಂಗದನು 'ಹಾಗೆಯೇ ಆಗಲಿ' ಎಂದು ಅನುಗ್ರಹಬುದ್ಧಿ ತಾಳಿ ತನಗೆ ಸೆರೆಸಿಕ್ಕಿದ್ದ ಕೌರವರನ್ನೆಲ್ಲ ಬಿಡುಗಡೆ ಮಾಡಿ ಪಾಂಡವರನ್ನು ಅಮರಾವತಿಗೆ ಬರಬೇಕೆಂದು ಆಮಂತ್ರಣ ಕೊಟ್ಟು ಅಲ್ಲಿ ನಡೆದುದನ್ನೆಲ್ಲ ದೇವೇಂದ್ರನಿಗೆ ವರದಿಮಾಡಿದನು. ಆಗ

---

[1] ಈ ವಿದ್ಯೆಯ ಪ್ರಸ್ತಾಪ ನನ್ನಯನಲ್ಲಿ ಇಲ್ಲ. ಸಂಸ್ಕೃತದಲ್ಲೂ ಇಲ್ಲ.

ಇಂದ್ರನು ಅಮೃತವೃಷ್ಟಿಯನ್ನು ಸುರಿಸಿ ಆ ಕಾಳಗದಲ್ಲಿ ಮೃತರಾಗಿದ್ದ ಗಂಧರ್ವರನ್ನೆಲ್ಲ ಬದುಕಿಸಿದನಂತೆ.[1]

ಚಿತ್ರಸೇನನು ಹೊರಟುಹೋದ ಮೇಲೆ ಯುಧಿಷ್ಠಿರನು ದುರ್ಯೋಧನನಿಗೆ ಹಿತೋಪದೇಶ ಮಾಡಿದಂತೆ ತೆಲುಗು ಭಾರತ ಹೇಳುತ್ತಿದೆ. 'ಅಯ್ಯೊ, ಇನ್ನು ಮುಂದೆ ಎಂದಿಗೂ ಇಂಥ ಸಾಹಸಕಾರ್ಯಗಳನ್ನು ಮಾಡಬೇಡ. ಯುದ್ಧಕ್ರಿಯೆಗಳಲ್ಲಿ ತೊಡಗಿ ನಶಿಸುವುದು ಬೇಡ. ನಿನ್ನ ತಮ್ಮಂದಿರನ್ನೂ ಸಾಮಂತ ದೊರೆಗಳನ್ನೂ ಕರೆದುಕೊಂಡು ನಗರಕ್ಕೆ ಹೋಗು. ಇದನ್ನೆಲ್ಲ ಮನಸ್ಸಿಗೆ ಹಚ್ಚಿಕೊಂಡು ವಿಷಾದ ಪಡಬೇಡ' ಎಂದು ಧರ್ಮರಾಯನು ಕೌರವನಿಗೆ ಸಮಾಧಾನವನ್ನು ಹೇಳಿದನು. ಆದರೆ ಆ ಅಭಿಮಾನಧನನಿಗೆ ಅಪಮಾನದಿಂದ ವಿಷಾದವೊದಗದಿರುವುದು ಸಾಧ್ಯವೆ? ಅವನು 'ದೀನಾನನನಾಗಿ' ಹೊರಟುಹೋದನು! ತೆಲುಗು ಭಾರತದಲ್ಲಿ ದ್ರೌಪದಿ ಸುಯೋಧನನನ್ನು ಹಂಗಿಸಿ ಹೇಳನ ಮಾಡುವುದಿಲ್ಲ. ಆದರೂ ಪಾಂಡವರಿಂದ ಉಪಕೃತನಾದುದೇ ದುರ್ಯೋಧನನಿಗೆ ಭರಿಸಲಾಗದ ಅಪಮಾನವಾಗಿ ಅವನು ಪ್ರಾಯೋಪವೇಶ ಮಾಡಲು ನಿರ್ಧರಿಸಿದನಂತೆ. ಪಂಪನ ದುರ್ಯೋಧನ ಪ್ರಾಯೋಪವೇಶದ ಯೋಚನೆ ಮಾಡಲಿಲ್ಲ. ಅವನು 'ಮದಗಜಪುರಕ್ಕೆ ಪೋಗಿ ಜೂದಿನೊಳ್ ಗೆಲ್ದ ನೆಲನಂ ನಯಜ್ಞನಾಗಿ ತನ್ನೊಳ್ ಪತ್ತಿಸಿ ದುಶ್ಶಾಸನನಂ ಯುವರಾಜನಂ ಮಾಡಿ ನಿರ್ವ್ಯಾಜಮನರಸುಗೆಯ್ಯುತ್ತು ಮಿರ್ದನ್!'

ಚಿತ್ರಾಂಗದನೊಡನೆ ನಡೆದ ಯುದ್ಧ ಪ್ರಕರಣವಾದ ಮೇಲೆ ಪಂಪಭಾರತದಲ್ಲಿ ಪ್ರಧಾನವಾದ ಕಥೆ ಇಂದ್ರಕೀಲದಲ್ಲಿ ಪಾರ್ಥನು ಪರಮೇಶ್ವರನನ್ನು ಮೆಚ್ಚಿಸಿ ಪಾಶುಪತಾಸ್ತ್ರವನ್ನು ಪಡೆದುಕೊಂಡದ್ದು. ಪಂಪನು ಈ ಕಥೆಯನ್ನು ತನ್ನ ವಿಕ್ರಮಾರ್ಜುನ ವಿಜಯದ ಏಳನೆಯ ಆಶ್ವಾಸದಲ್ಲಿ ಆರಂಭಿಸಿ ಎಂಟನೆಯ ಆಶ್ವಾಸದಲ್ಲಿ ಮುಗಿಸಿದ್ದಾನೆ; ಈ ಕಥೆಗೆ ಸುಮಾರು ಅರುವತ್ತು ಪದ್ಯಗಳನ್ನು ವಿನಿಯೋಗಿಸಿದ್ದಾನೆ. ಭಾರತದ ಕಥೆಯ ಉಳಿದ ಹಲವು ಪ್ರಸಂಗಗಳನ್ನು ಅವನು ವರ್ಣಿಸಿರುವ ರೀತಿಯನ್ನು ಗಮನಿಸಿದರೆ ಇದು ಸಾಕಷ್ಟು ವಿಸ್ತಾರವಾಯಿತೆಂದೇ ಹೇಳಬಹುದು. ಮಾನವ ಮಾತ್ರನು ಮಹೇಶ್ವರನೊಡನೆ ಸಮಸಮನಾಗಿ ಕಾದಿದನೆಂಬುದು ಸಾಮಾನ್ಯ ಸಂಗತಿಯಲ್ಲ. ಅರ್ಜುನನು ಮಾಡಿದ ಈ ಮಹತ್ತರವಾದ ಸಾಹಸವನ್ನು ಪಂಪ ಬಹಳ ಅಚ್ಚುಕಟ್ಟಾಗಿ ವರ್ಣಿಸಿದ್ದಾನೆ. ಇದು ಪಾರ್ಥನ ಪುರುಷ ಪರಾಕ್ರಮಕ್ಕೆ ಅತ್ಯುತ್ತಮವಾದ ನಿದರ್ಶನ.

ದುರ್ಯೋಧನನನ್ನು ಗಂಧರ್ವನಿಂದ ಬಿಡಿಸಿದ ಕೆಲವು ದಿನಗಳ ಮೇಲೆ ಯುಧಿಷ್ಠಿರನು ಒಬ್ಬ ಕಿರಾತ ದೂತನನ್ನು ಹಸ್ತಿನಾಪುರದ ಸ್ಥಿತಿಗತಿಗಳನ್ನು ತಿಳಿದು ಬರಲು ಕಳುಹಿಸಿದ್ದನು. ಅವನು ಹೋಗಿ ಕೌರವನ ರಾಜ್ಯ ವೈಭವಗಳನ್ನೆಲ್ಲ ಕಂಡು

---

1 ಆಂಧ್ರಭಾರತ, ಅರಣ್ಯಪರ್ವ V, 433.

ಬಂದು ಧರ್ಮರಾಯನಿಗೆ ವರದಿ ಮಾಡಿದನು. ಕೌರವನು ಪ್ರಜಾಹಿತವನ್ನೂ ಗಮನಿಸಿ ತನ್ನ ಹಿತವನ್ನೂ ಸಾಧಿಸಿಕೊಳ್ಳುತ್ತಿದ್ದನು. ಅವನು ಪ್ರಯತ್ನ ಪೂರ್ವಕ ವಾಗಿ ರಾಜ್ಯದ ಎಲ್ಲ ವರ್ಗಗಳವರನ್ನೂ ಒಲಿಸಿಕೊಳ್ಳಲು ಶ್ರಮಿಸುತ್ತಿದ್ದನು. ಅವನ ರಾಜನೀತಿ 'ಆ ಬೃಹಸ್ಪತಿಯಂ ಗೆಲೆವಂದುದು' ಎಂದು ಹೇಳಿ ಆ ದೂತನು ಕೌರವನ ಭಾಗ್ಯವನ್ನು ವರ್ಣಿಸಿದಾಗ ದ್ರೌಪದಿ ಮಹಾ ದುಃಖಮಗ್ನಳಾಗಿ ಧರ್ಮರಾಯನನ್ನು ಮೂದಲಿಸಿದಳು. ಭೀಮಾರ್ಜುನರು ಶೌರ್ಯಧನರಾದರೂ ಕಾಡಿನಲ್ಲಿ ಮುನಿಗ ಳಂತೆ ಜೀವಿಸುವುದನ್ನು ಬಣ್ಣಿಸಿ ಅವರನ್ನು ಆ ಸ್ಥಿತಿಗೆ ಇಳಿಸಿದ ಧರ್ಮರಾಯನನ್ನು ಹಂಗಿಸಿ ಕಟುವಾಕ್ಯಗಳನ್ನಾಡಿದಳು. 'ಶಮದಿಂ ಮುನಿಗಾಯ್ತು, ಸಿದ್ಧಿ ಭೂಪತಿ ಗಾಯ್ತೇ' ಎಂದು ಅವಳ ಸವಾಲು. ಅವಳ ಮಾತುಗಳಿಂದ ಭೀಮನ ಸುಪ್ತವಾ ಗಿದ್ದ ಕೋಪ ಕೆರಳಿತು. ಅವನೂ ಧರ್ಮರಾಯನನ್ನು ಆಕ್ಷೇಪಿಸಿ ಆಗಲೇ ಗದಾ ಪಾಣಿಯಾಗಿ ಗಜಪುರವತ್ತ ತೆರಳುವುದರಲ್ಲಿದ್ದನು. ಆಗ ಧರ್ಮರಾಯನು 'ಕೋಪ ತಾಪದಿಂ ಮಸಗಿದ ಮದಗಜಮನೆ ಮಣಿಸುವಂತೆಂತಾನುಂ ಮೃದು ವಚನಂಗಳಿಂ ಮುಳಿಸನಾಱಸುತ್ತಿರ್ದ' ನಂತೆ! ಆ ಹೊತ್ತಿಗೆ ಸರಿಯಾಗಿ ವ್ಯಾಸ ಮಹರ್ಷಿಗಳೇ ಅಲ್ಲಿಗೆ ಬಂದರು. ಅವರನ್ನು ಕಂಡ ಧರ್ಮರಾಯನಿಗೆ ಕೊಂಚ ಉಸಿರು ಬಂತು. ಅವನು ಆ ಮಹಾತ್ಮನಿಗೆ ಸ್ವಾಗತ ಸತ್ಕಾರಗಳನ್ನು ನೀಡಿ ಕುಳಿತುಕೊಂಡಾಗ ವ್ಯಾಸರು ಅರಸನ ಯೋಗಕ್ಷೇಮವನ್ನು ವಿಚಾರಿಸಿ ಆಮೇಲೆ ಮುಂದೆ ಕೌರವನೊಡನೆ ಯುದ್ಧ ಅನಿವಾರ್ಯವೆಂಬುದನ್ನು ಸ್ಪಷ್ಟಪಡಿಸಿ ಅದಕ್ಕೆ ಪಾಂಡವರು ಮಾಡಿಕೊಳ್ಳ ಬೇಕಾದ ಸಿದ್ಧತೆಯನ್ನು ಸೂಚಿಸಿದರು. "ಪರಶುರಾಮನನ್ನೇ ಅಂಜಿಸಿ ಪರಾಕ್ರಮದ ಆಗರವೆನಿಸಿದ ಭೀಷ್ಮ ಸಾಮಾನ್ಯನೆ? ಕುಂಭೋದ್ಭವ, ಅವನ ಮಗ ಅಶ್ವತ್ಥಾಮ, ಸಾಧಾರಣ ಬಿಲ್ಲುಗಾರರೆ? ಕೃಪ ಕರ್ಣರು ಮಹಾ ಧನುರ್ಧರರು. ಕೌರವಸೇನಾನಿ ಗಳು ಒಬ್ಬರಿಗಿಂತ ಒಬ್ಬರು ಅಗ್ಗಳರು. ಅವರನ್ನು ಇದಿರಿಸುವುದು ಸುಲಭವಲ್ಲ" ಎಂದು ಹೇಳತೊಡಗಿ ಪಂಪನ ವ್ಯಾಸನು ಒಂದು ಪದ್ಯದಲ್ಲಿ ಕೌರವ ದಳಪತಿಗಳ ಬಾಣ ಕೌಶಲವನ್ನು ಚಿತ್ರಿಸಿದ್ದಾನೆ.

ಪ್ರಳಯದುರಿ ಕಾಳಕೂಟದ
ಗುಳಿಗೆ ಪುರಾಂತಕ ಲಲಾಟ ನೇತ್ರಾನಳನೊಂ
ದಳವಿಗಮಗ್ಗಳಮವರ್ಗಳ
ಮುಳಿಸುಗಳುಂ ಮುಳಿದು ತುಡುವ ದಿವ್ಯೇಷುಗಳುಂ

ಈ ಒಂದು ಪದ್ಯದಲ್ಲಿ ಪಂಪ ಕೌರವವೀರರ ಯುದ್ಧ ಸಾಮರ್ಥ್ಯವನ್ನು ಓದುಗರಿಗೆ ಮನದಟ್ಟಾಗುವಂತೆ, ಅವರ ಮನಃಪಟಗಳ ಮೇಲೆ ಚಿತ್ರಿತವಾಗುವಂತೆ, ಬಣ್ಣಿಸಿದ್ದಾನೆ.

ಇಂಥ ಅಪ್ರತಿಹತವಾದ ಯುದ್ಧದಕ್ಷತೆಯುಳ್ಳ ವೀರರನ್ನು ಇದಿರಿಸಿ ಗೆಲ್ಲಲು ಎಲ್ಲರಿಂದಲೂ ಸಾಧ್ಯವಿಲ್ಲ. 'ವಿಕ್ರಮಾರ್ಜುನನಲ್ಲದೆ ಗೆಲ್ಲನ್!' ಅವನಾದರೂ ಅದಕ್ಕೆ ಹೆಚ್ಚಿನ ಶಕ್ತಿ ಸಂಪಾದಿಸಿಕೊಳ್ಳಬೇಕು. ಅದಕ್ಕೆ ತಕ್ಕ 'ಉಪಾಯಮುಮಂ

ಮಂತ್ರಮುಮನುಪದೇಶಂ ಗೆಯ್ಯಲ್ ಬಂದೆವು' ಎಂದು ವ್ಯಾಸರು ಯುಧಿಷ್ಠಿರನಿಗೆ ಧೈರ್ಯ ಹೇಳಿ ವಿಕ್ರಮಾರ್ಜುನನಿಗೆ ಮಂತ್ರಾಕ್ಷರಗಳನ್ನುಪದೇಶ ಮಾಡಿ ಗುಹ್ಯಕನೆಂಬವನೊಬ್ಬನನ್ನು ಸ್ಮರಣ ಮಾತ್ರದಿಂದ ಬರಮಾಡಿ 'ಸಾಹಸಾಭರಣನನ್ ಇಂದ್ರಕೀಲ ನಗೇಂದ್ರಮನೆಯ್ದಿಸಿ ಬರ್ಪುದು' ಎಂದು ಆಜ್ಞಾಪಿಸಿ ಆಕಾಶಮಾರ್ಗಕ್ಕೆ ನೆಗೆದು ಅದೃಶ್ಯರಾದರು.

ಅನಿರೀಕ್ಷಿತರಾಗಿ ಬಂದ ಮಹರ್ಷಿಗಳ ಪ್ರೇರಣೆಯೆ ಅರ್ಜುನನು ಇಂದ್ರಕೀಲ ಪರ್ವತಕ್ಕೆ ಹೋಗಲು ಒದಗಿದ ನಿಮಿತ್ತ. ನನ್ನಯನ ಭಾರತದಲ್ಲಿಯೂ ಹೀಗೆಯೇ ಇದೆ. ನನ್ನಯನ ಧರ್ಮರಾಯನೇ ಭೀಮನ ಸಂಗಡ ಕೌರವರ ಹಿರಿಮೆಯನ್ನು ಹೊಗಳಿ ಅವರನ್ನು ಗೆಲ್ಲುವುದು ಸುಲಭವಲ್ಲವೆಂದೂ ಚೆನ್ನಾಗಿ ವಿಚಾರ ಮಾಡಿ ಮುಂದುವರಿಯಬೇಕೆಂದೂ ಹೇಳುತ್ತಿರುವಾಗ ವ್ಯಾಸರು ಬರುತ್ತಾರೆ. ಪಾಂಡವರು ದ್ವೈತವನಕ್ಕೆ ಸೇರಿದ ತರುಣದಲ್ಲಿಯೇ ವ್ಯಾಸರು ಅಲ್ಲಿಗೆ ಬಂದರೆಂದೂ ಆಗಲೇ 'ಪ್ರತಿಸ್ಮೃತಿ'ಯ ಉಪದೇಶ ಮಾಡಿದರೆಂದೂ ನನ್ನಯ ಹೇಳಿದ್ದಾನೆ. ಅದಕ್ಕೂ ಮೊದಲು ಶ್ರೀಕೃಷ್ಣನು ಬಂದು ಪಾಂಡವರನ್ನು ಸಂತೈಸಿದ ವೃತ್ತಾಂತವನ್ನು ಆರಂಭಿಸಿ ಕೃಷ್ಣನಿಂದಲೇ ಸಾಲ್ವವಧೆಯ ಕಥೆಯನ್ನು ನನ್ನಯ ಹೇಳಿಸಿದ್ದಾನೆ. ಪಂಪನಲ್ಲಿ ಈ ಕಥೆಯ ಪ್ರಸ್ತಾಪವಿಲ್ಲ. ಪಂಪ ಹೇಳಿರುವ ಕಿರಾತ ದ್ಯೂತ ವೃತ್ತಾಂತ ಅವನ ಸ್ವಂತ ಕಲ್ಪನೆಯೇ ಇರಬೇಕು. ನನ್ನಯಭಾರತದಲ್ಲಿ ಅವನ ಪ್ರಸ್ತಾಪವಿಲ್ಲ. ವ್ಯಾಸರು ಧರ್ಮರಾಯನಿಗೇ ಮಂತ್ರೋಪದೇಶ ಮಾಡಿ ಅದನ್ನು ಅವನೇ ಅರ್ಜುನನಿಗೆ ಹೇಳಿಕೊಟ್ಟು ಇಂದ್ರಕೀಲಕ್ಕೆ ಕಳುಹಿಸಬೇಕೆಂದು ನಿಯಮಿಸಿ ಹೊರಟು ಹೋಗುತ್ತಾರೆ. ವ್ಯಾಸರು ಉಪದೇಶಿಸಿದ 'ಪ್ರತಿಸ್ಮೃತಿ' ಎಂಬ ವಿದ್ಯೆಯನ್ನು ಕೆಲವು ಕಾಲದ ಮೇಲೆ ಧರ್ಮರಾಯನು ಅರ್ಜುನನಿಗೆ ಹೇಳಿಕೊಟ್ಟು ಇಂದ್ರಕೀಲಕ್ಕೆ ಕಳುಹಿಸಿದನೆಂದು ನನ್ನಯನ ಹೇಳಿಕೆ. ಪಂಪನಲ್ಲಿಯೂ ವ್ಯಾಸರೇ ಉಪದೇಶ ನೀಡುವವರು. ಆದರೆ ಅವನ್ನು ನೇರವಾಗಿ ಅರ್ಜುನನಿಗೇ ನೀಡಿದ್ದಾರೆ. ಅಲ್ಲಿ ಧರ್ಮರಾಯನ ಮಧ್ಯವರ್ತಿತ್ವವಿಲ್ಲ. ಅಲ್ಲದೆ ಪಂಪ ವ್ಯಾಸರು ಉಪದೇಶಿಸಿದ ಮಂತ್ರದ ಹೆಸರನ್ನು ತಿಳಿಸಿಲ್ಲ. ವ್ಯಾಸರು ಬಂದು ಹೋದ ಮೇಲೆಯೇ ಪಾಂಡವರು ದ್ವೈತವನವನ್ನು ಬಿಟ್ಟು ಕಾಮ್ಯಕವನಕ್ಕೆ ಹೋಗಿ ಸರಸ್ವತೀ ತೀರದಲ್ಲಿ ನಿವಾಸ ಮಾಡಿದುದು.[1] ನನ್ನಯಭಾರತದಲ್ಲಿ ಗುಹ್ಯಕನ ಪ್ರಸ್ತಾಪವಿಲ್ಲ. ಪಾರ್ಥನು ಧನುರ್ಬಾಣಾದಿಗಳನ್ನು ಧರಿಸಿ ಅಣ್ಣನ ಆಜ್ಞೆಯಂತೆ ಒಬ್ಬನೇ ಪಾದಚಾರಿಯಾಗಿ ಹೊರಟು ದಾರಿಸವೆಸಿ ಇಂದ್ರಕೀಲ ಸೇರುತ್ತಾನೆ. ಪಂಪನ ಸಾಹಸಾಭರಣನಿಗೆ ಈ ಅಧ್ವಕ್ಲೇಶವಿಲ್ಲ. ವ್ಯಾಸರು ಅನುಗ್ರಹ ಬುದ್ಧಿಯಿಂದ ಗುಹ್ಯಕನನ್ನು ಬರಮಾಡಿ ಅರ್ಜುನನನ್ನು ಇಂದ್ರಕೀಲಕ್ಕೆ ಸೇರಿಸುವ ಕೆಲಸವನ್ನು ಅವನಿಗೆ ಒಪ್ಪಿಸಿದ್ದಾರೆ.

---

1 ಪಂಪ ನನ್ನಯರಿಬ್ಬರ ನಡುವೆ ಈ ವನಗಳ ಹೆಸರುಗಳ ಕ್ರಮವಿಪರ್ಯಯವಾಗಿದೆ.

ಗುಹ್ಯಕ ಪಾರ್ಥನನ್ನು ಹೆಗಲ ಮೇಲೇರಿಸಿಕೊಂಡು 'ಗಗನ ತಳಕ್ಕೊಗೆದು ಮಹೇಂದ್ರಕೀಲಾಭಿಮುಖನಾದನ್'! ದಾರಿಯಲ್ಲಿ ಕಂಡ ಹಿಮಾಚಳ ಕೈಲಾಸ ಪರ್ವತಗಳನ್ನೂ ಗಂಗಾನದಿಯನ್ನೂ ಗುಹ್ಯಕ ಅರ್ಜುನನಿಗೆ ಬಹಳ ರಮಣೀಯವಾದ ಶೈಲಿಯಲ್ಲಿ ವರ್ಣಿಸಿ ಹೇಳುತ್ತ ಕೊನೆಗೆ ಇಂದ್ರಕೀಲ ಪರ್ವತವನ್ನು ಸೇರಿ ಅಲ್ಲಿನ ಒಂದು ಚಂದ್ರಕಾಂತ ಶಿಲಾತಲದ ಮೇಲೆ ಅರ್ಜುನನನ್ನು ಇಳಿಸಿ ಹೊರಟುಹೋದನು. ವಿಕ್ರಮಾರ್ಜುನನು ಅಲ್ಲಿ ತಪೋನಿಯಮಗಳನ್ನು ಅನುಸರಿಸಿ ಶಿವಧ್ಯಾನ ಮಾಡುತ್ತ ನಿಂತನು. ನನ್ನಯನ ಪ್ರಕಾರ ಅರ್ಜುನನು ಇಂದ್ರಕೀಲವನ್ನು ದಾಟಿ ಮುಂದೆ ಹೋಗಲು ಹವಣಿಸುತ್ತಿರಲು 'ನಿಲ್ಲು, ಮುಂದೆ ಹೋಗಬೇಡ' ಎಂದು ಆಕಾಶವಾಣಿಯಾಯಿತು; ಕೂಡಲೆ ಪುಷ್ಪವೃಷ್ಟಿ ಸುರಿಯಿತು. ಈ ಶುಭಶಕುನಗಳಿಂದ ಸುಪ್ರೀತನಾಗಿ ಅಲ್ಲಿ ನಿಲ್ಲುತ್ತಲೆ ಸ್ವಲ್ಪ ದೂರದಲ್ಲಿ ಒಂದು ಮರದ ಕೆಳಗೆ ಒಬ್ಬ ಬ್ರಾಹ್ಮಣ ಕಾಣಿಸಿದನು. ಆತನಿಗೆ ನಮಸ್ಕಾರ ಮಾಡಲು ಪಾರ್ಥನನ್ನು ಕುರಿತು ಆತನು 'ಎಲ್ಲಿಂದ ಬಂದೆಯಯ್ಯ! ವೀತಹರ್ಷಕ್ರೋಧರಾದ ಬ್ರಾಹ್ಮಣರಿರುವ ಪುಣ್ಯನಿವಾಸದಲ್ಲಿ ಆಯುಧಗಳನ್ನು ಧರಿಸಿಕೊಂಡಿರಬಾರದು. ಇವುಗಳನ್ನು ಪರಿಹರಿಸು' ಎಂದು ಬುದ್ಧಿವಾದ ಹೇಳಿದನಂತೆ! ಆದರೆ ಅದರಿಂದ ಪಾರ್ಥನು ಚಲಿತನಾಗಲಿಲ್ಲ. ಅವನ ಧೈರ್ಯಕ್ಕೆ ಮೆಚ್ಚಿ ಇಂದ್ರ ಆ ಬ್ರಾಹ್ಮಣ ವೇಷವನ್ನು ಪರಿತ್ಯಜಿಸಿ ಅರ್ಜುನನಿಗೆ ತನ್ನ ನಿಜರೂಪವನ್ನು ತೋರಿ 'ಈಶ್ವರನು ನಿನ್ನ ಅಭಿಮತವನ್ನು ಈಡೇರಿಸುವನು' ಎಂದು ಧೈರ್ಯ ಹೇಳಿ ಅದೃಶ್ಯನಾದನು!

ಪಂಪನೂ ಈ ಘಟ್ಟದಲ್ಲಿ ಇಂದ್ರನ ಪ್ರಸ್ತಾಪ ಮಾಡಿದ್ದಾನೆ. ಆದರೆ ಅರ್ಜುನ ಇಂದ್ರಕೀಲವನ್ನು ಸೇರುವ ವೇಳೆಗಾಗಲೆ ಇಂದ್ರ ಅಲ್ಲಿಗೆ ಬಂದಿರಲಿಲ್ಲ. ಅರ್ಜುನ ಕೊಂಚಕಾಲ ಉಗ್ರವಾದ ತಪಸ್ಸು ಮಾಡಿದ ಮೇಲೆ ದೇವೇಂದ್ರನಿಗೆ 'ಹೃತ್ಕಂಪವೂ ಆಸನ ಕಂಪವೂ ಆದುವಂತೆ! ಯಾವನೋ ನರೇಂದ್ರತಾಪಸನು ತನ್ನ ಇಂದ್ರಪದವಿಯನ್ನು ಪಡೆದುಕೊಳ್ಳುವುದಕ್ಕಾಗಿ ತಪಸ್ಸು ಮಾಡುತ್ತಿರುವನೆಂದು ಅವನಿಗೆ ಶಂಕೆ. ಇದು ಇಂದ್ರನಿಗೆ ಯಾವಾಗಲೂ ಇದ್ದದ್ದೇ. ಯಾರು ಯಜ್ಞ ಕೈಕೊಂಡರೂ ಯಾರು ತಪಸ್ಸಿಗೆ ತೊಡಗಿದರೂ ಇಂದ್ರನಿಗೆ ಹೆದರಿಕೆ. ಆ ತಪೋವಿಘ್ನಕ್ಕೆ ಅವನು ಪ್ರಯತ್ನ ಪಡುವುದು ಪದ್ಧತಿ. ಅದಕ್ಕಾಗಿ ಅವನು ಭಾರಿ ಸಿಬ್ಬಂದಿಯನ್ನೇ ನೇಮಿಸಿಕೊಂಡಿದ್ದಾನೆ. ಆದರೆ ನನ್ನಯನ ಭಾರತದಲ್ಲಾಗಲಿ ವ್ಯಾಸ ಭಾರತದಲ್ಲಾಗಲಿ ಇಂದ್ರನಿಗೆ 'ಆಸನ ಕಂಪ'ವಾಗುವ ಪ್ರಮೇಯವಿಲ್ಲ. ಅದು ಜೈನಗ್ರಂಥಗಳಲ್ಲಿ ಸಾಮಾನ್ಯ. ತೀರ್ಥಂಕರ ಶಿಶು ಹುಟ್ಟುತ್ತಲೆ ಇಂದ್ರನ ಆಸನ ಕಂಪಿಸುತ್ತದೆ. ಅವನು ಕೂಡಲೆ ಪರಿವಾರ ಸಮೇತನಾಗಿ ಹೋಗಿ ಆ ಜಿನ ಶಿಶುವಿಗೆ ಜನ್ಮಾಭಿಷೇಕ ಕಲ್ಯಾಣ ಮಾಡಿ ಬರುತ್ತಾನೆ. ಪಂಪ ಆ ಜೈನಪುರಾಣ ಸಂಪ್ರದಾಯವನ್ನೇ ಇಲ್ಲಿ ಬಳಸಿಕೊಂಡು ಇಂದ್ರನಿಗೆ 'ಆಸನ ಕಂಪ'ವನ್ನುಂಟು ಮಾಡಿದ್ದಾನೆ!

ಇಂದ್ರನು ಕೂಡಲೆ ಅಪ್ಸರಸೆಯರನ್ನು ಕರೆಸಿಕೊಂಡು ಅರ್ಜುನನ ತಪಸ್ಸಿಗೆ

ವಿಘ್ನವನ್ನಾಚರಿಸಲು ಅಣತಿಕೊಟ್ಟನು. ಕಾಮದೇವನನ್ನೇ ನಾಯಕನನ್ನಾಗಿ ಮಾಡಿ ಕೊಂಡು ಆ ದೇವರಮಣಿಯರು ಇಂದ್ರಕೀಲಕ್ಕೆ ಬಂದು ನಾಟ್ಯಗಾಯನಗಳನ್ನು ನಡೆಸಿದರು ; ತಮ್ಮ ವೈಭವವನ್ನು ಮೆರೆಯಿಸಿದರು. ಮೇನಕೆ ತಿಲೋತ್ತಮೆಯರೇ ಬಂದು ಪಾರ್ಥನನ್ನು ಒಲಿಸಿಕೊಳ್ಳಲು ಸಾಹಸ ಮಾಡಿದರು. ಆದರೆ ಅವನ ಚಿತ್ತ ಸ್ಥೈರ್ಯ ಚಲಿಸಲಿಲ್ಲ ಅವನ ಧ್ಯಾನ ಅಕುಂಠಿತವಾಗಿ ಸಾಗುತ್ತಲೇ ಇತ್ತು! ಆ ಶೌಚಾಂಜನೇಯನು ಈ ದೇವ ವೇಶ್ಯೆಯರ ಬರವನ್ನೇ ಗಮನಿಸಲಿಲ್ಲ. ಅವನನ್ನು ಸೋಲಿಸಲೆಂದು ಬಂದ ಆ ಸುರಸುಂದರಿಯರೇ ಅವನಿಗೆ ಸೋತರು. ಕಾಮದೇವನೇ ಕೈಕಟ್ಟಿಕೊಂಡು ಕುಳಿತುಕೊಳ್ಳುವಂತಾಯಿತು. ಅರ್ಜುನನ ಮನೋದಾರ್ಢ್ಯವನ್ನು ಕದಲಿಸಲು ಅವನಿಂದಲೂ ಸಾಧ್ಯವಾಗಲಿಲ್ಲ. ಇದನ್ನೆಲ್ಲ ತಿಳಿದ ದೇವೇಂದ್ರನೇ ಆಗ ಬ್ರಾಹ್ಮಣ ವೇಷದಿಂದ ಅರ್ಜುನನ ಬಳಿಗೆ ಬಂದನು.

ವೃದ್ಧ ಬ್ರಾಹ್ಮಣನನ್ನು ನೋಡಿ ಅರ್ಜುನನು ಅವನನ್ನು ಆದರಿಸಿ ಸತ್ಕಾರ ಮಾಡಲು ಅವನು ಪಾರ್ಥನ ಪರಿಚಯವನ್ನು ಕೇಳಿ ತಿಳಿದುಕೊಂಡು 'ತಪಸ್ವಿಗೆ ಬಿಲ್ಲು ಬಾಣಗಳು ಒಪ್ಪುವುದಿಲ್ಲ. ಅವನ್ನು ಬಿಡು' ಎಂದು ಉಪದೇಶ ಮಾಡಿದನು. ಆದರೆ ಆ ಬ್ರಾಹ್ಮಣನ ವಾಕ್ಯವನ್ನು ಮನ್ನಿಸದೆ 'ಹರ ಬರ್ಪನ್ನಂ ತಪಂ ಗೆಯ್ದಪೆಂ' ಎಂದು ತನ್ನ ದೃಢಸಂಕಲ್ಪವನ್ನು ತಿಳಿಸಿದ ಪಾರ್ಥನ ಮನೋನಿರ್ಧಾರವನ್ನು ಮೆಚ್ಚಿಕೊಂಡ ಮಹೇಂದ್ರನು ತನ್ನ ಸಹಜರೂಪವನ್ನು ತೋರಿ ಮಗನನ್ನು ಅಪ್ಪಿಕೊಂಡು ಆಶೀರ್ವದಿಸಿ ತಿರೋಹಿತನಾದನು.

ಇತ್ತ ಅರ್ಜುನ ನಿರಂತರವಾದ ಉಗ್ರ ತಪಶ್ಚರ್ಯೆಯನ್ನು ನಡೆಸುತ್ತಲೇ ಇದ್ದನು. ಅವನ ತಪೋಮಹಿಮೆ ಹಬ್ಬಿ ಆ ವನವನ್ನೆಲ್ಲ ವ್ಯಾಪಿಸಿತು. ಆ ತಪಸ್ಸಿನ ತಾಪವನ್ನು ತಾಳಲಾರದೆ ಆ ವನದ ತಪಸ್ವಿಗಳೆಲ್ಲರೂ ಕೈಲಾಸಕ್ಕೆ ಹೋಗಿ ಶಿವನಲ್ಲಿ ಮೊರೆಯಿಟ್ಟುಕೊಂಡರು. 'ಈ ಹೊಸ ತಪಸ್ವಿಯ ಇಷ್ಟಾರ್ಥವನ್ನು ಈಡೇರಿಸಿ ಅವನನ್ನು ಅಲ್ಲಿಂದ ಕಳುಹಿಸಿಬಿಡು ಅಥವಾ ನಮಗೆ ಬೇರೊಂದು ತಪೋವನವನ್ನು ಕೊಡಿಸು' ಎಂಬುದೇ ಆ ತಪಸ್ವಿಗಳ ಪ್ರಾರ್ಥನೆ. ಮೋಕ್ಷವನ್ನೇ ಕರುಣಿಸುವಂಥ ಮಹೇಶ್ವರನನ್ನು ಕಂಡ ಆ ಋಷಿಗಳು ತಪಸ್ಸಿನ ಕಂಟಕನಿವಾರಣೆಯನ್ನು ಬಯಸಿದರೇ ಹೊರತು ಸುಲಭಮುಕ್ತಿಯನ್ನು ಬಯಸಲಿಲ್ಲ. ಅವರಿಗೆ ಮೋಕ್ಷಕ್ಕಿಂತಲೂ ತಪಸ್ಸೇ ಹೆಚ್ಚು ಪ್ರಿಯವೆಂದು ತೋರುತ್ತದೆ.

ಮಹೇಶ್ವರನು ದಿವ್ಯಜ್ಞಾನದಿಂದ ಅರ್ಜುನನೇ ಆ ತಪಸ್ವಿಯೆಂಬುದನ್ನು ತಿಳಿದು ಆ ಮುನಿಗಳನ್ನು ಕಳುಹಿ ಕಿರಾತವೇಷ ಧರಿಸಿ ಪರಿವಾರ ಸಮೇತನಾಗಿ ಇಂದ್ರಕೀಲಕ್ಕಿಳಿದು ಅಲ್ಲಿ ಬೇಟೆಯ ಕಲಕಲವನ್ನೆಬ್ಬಿಸಿದನು. ಆ ಗದ್ದಲಕ್ಕೆ ಸಿಟ್ಟುಗೊಂಡು ಆ ವನದಲ್ಲಿ ವರಾಹ ವೇಷದಲ್ಲಿದ್ದ ಮೂಕನೆಂಬ ದಾನವನು ಆ ಕಿರಾತರ ಮೇಲೆ ರಭಸದಿಂದ ನುಗ್ಗಿ ಬಂದು ದಾಳಿ ಮಾಡಿದನು. 'ಆ ವರಾಹನ್ ಆದಿ ವರಾಹನಾದ ಮುರಾಂತಕನಂ ಮುಸಿಟಾಪಿ' ನೆಲವನ್ನು ಅದಿರಿಸುತ್ತ ಬರುತ್ತಿದ್ದುದನ್ನು ಕಂಡು ಅರ್ಜುನನು ತಪಸ್ವಿಗಳ ಕ್ಷೇಮಚಿಂತನೆ ಮಾಡಿ ಒಂದು ಬಾಣದಿಂದ ಆ ಹಂದಿಯನ್ನು ಹೊಡೆದನು. ಕೂಡಲೆ ಕಿರಾತ ರೂಪಿಯಾದ ಶಿವನೂ

ಒಂದು ಬಾಣವನ್ನು ಪ್ರಯೋಗಿಸಿದನು. ಆ 'ದೈತ್ಯವರಾಹ' ಸತ್ತು ಬಿದ್ದಿತು. ಕೂಡಲೆ ಅರ್ಜುನನು 'ವರಾಹಾರುಣ ಜಲಧಾರಾರುಣ ಮಾಗಿರ್ದ ಆತ್ಮೀಯ ಬಾಣಮಂ ಒಯ್ಯನೆ ಕೊಂಡು ಬಾಣಧಿಯೊಳಿಟ್ಟು' ಹೋಗಿ ಕರಚರಣ ಪ್ರಕ್ಷಾಳನ ಮಾಡಿಕೊಂಡು ಮತ್ತೆ ತಪಸ್ಸಿಗೆ ತೊಡಗಿದನು.

ಶಿವನ ಒಂದು ಉದ್ದೇಶ ನೆರವೇರಿತು. ಇನ್ನು ಎರಡನೆಯ ಉದ್ದೇಶ ವುಳಿಯಿತು. ಅದು ಪರಾಕ್ರಮಧವಳನ ಶಕ್ತಿ ಪರೀಕ್ಷೆ! ಅದಕ್ಕೆ ಆ ಕಪಟ ಕಿರಾತ ಒಂದು ಉಪಾಯ ಹೂಡಿದನು. ಕಿರಾತವೇಷದ ಷಣ್ಮುಖನನ್ನು ಅರ್ಜುನನ ಬಳಿಗೆ ಕಳುಹಿಸಿ ಹಂದಿಗೆ ತಾನು ಹೊಡೆದ ಬಾಣವನ್ನು ಕೊಡಬೇಕೆಂದು ಕೇಳಿಸಿದನು. ಆದರೆ ಷಣ್ಮುಖನು ತನ್ನ ತಂದೆ ಹೇಳಿದಷ್ಟು ಕೆಲಸ ಮಾಡುವಾಗ ಅರ್ಜುನನ ಬಾಹ್ಯ ವೇಷವನ್ನು ಕುರಿತು ಅಪಹಾಸ್ಯದ ಮಾತುಗಳನ್ನಾಡಿ ಆಕ್ಷೇಪಿಸಿದನು.

> ಗೊರವರೆ ಬೂದಿಯುಂ ಜಡೆಯುಮಕ್ಕೆ ತಪಕ್ಕೆ ತನುತ್ರಮಾಭಯಂ
> ಕರ ಧನು ಖಟ್ಗ ಮತ್ತ್ರಪರಮಿಂತೆರಡುಂ ದೊಣೆ ತೀವಿದಂಬು ಮೊಂ
> ದಿರವು ತಪಕ್ಕದೆಂತುಟೊ ತಪಂಗಳು ಮಿಲ್ಲದೊಡುಳ್ಕೊಡೀಗಳಿ
> ಮ್ಮರಸರ ನಚ್ಚಿನೆಚ್ಚ ಶರಮುಂ ಸೆರಗಿಲ್ಲದೆ ಕೊಡು ಬರ್ಬರೆ

ಎಂದು ಕಿರಾತ ರೂಪದ ಷಣ್ಮುಖನು ಅರ್ಜುನನನ್ನು ಮೂದಲಿಸಿ ತನ್ನ ಒಡೆಯನ ಪ್ರೀತಿಯ ಬಾಣವನ್ನು ತೆಗೆದುಕೊಂಡುದಕ್ಕೆ ಆಕ್ಷೇಪಿಸಿದನು. ಬೇಡನೊಬ್ಬನು ಬಂದು ಇಷ್ಟು ಹೀನಾಯವಾಗಿ ಸೆಣಸಿ ಮಾತನಾಡಿದರೆ 'ಸಾಹಸಾಭರಣ' ನಾದ ವಿಕ್ರಮಾರ್ಜುನನಿಗೆ ಸಹನೆಯಾದೀತೆ? ಸಹಜವಾಗಿಯೇ ಅವನಿಗೆ ಬಹಳವಾದ ರೋಷವುಂಟಾಗಿರಬೇಕು. ಆದರೆ ಆ ಕಿರಾತ ದೂತನ ಅಧಿಕಪ್ರಸಂಗಿತನದ ಮಾತು ಅಲ್ಲಿಗೆ ಮುಗಿಯಲಿಲ್ಲ. ಅವನು ಇನ್ನೂ ಮುಂದುವರಿದು ಅತ್ಯಂತ ತಿರಸ್ಕಾರ ಸೂಚಕವಾದ ರೀತಿಯಲ್ಲಿ ಅರ್ಜುನನಿಗೆ ಅನುಗ್ರಹ ತೋರುವವನಂತೆ ಹೀಗೆ ಹೇಳಿದ್ದಾನೆ.

> ಅಱಿಯದೆ ತಂದೊಡ ಮೇನೆ
> ಮ್ಮೆಱೆಯುಂಗದನೆಮ್ಮ ಕೆಯ್ಯೊಳಿಟ್ಟಂ ನೀಮಿಂ
> ತಱಿಯುತ್ತಂ ಪೆಱಿರೊಡಮಯ
> ನುಱಿ ಸೆಱೆವಿಡಿದಿರ್ಪಿರಿನ್ನರುರ್ವಿಯೊಳೊಳರೇ

ಹೀಗೆ ಆ ದೂತನು ಪಾರ್ಥನನ್ನು ಮೂದಲಿಸಲು ಆ ಪರಾಕ್ರಮಧವಳನು ರೋಷ ಗೊಂಡನು. ಅವನು ತಪಸ್ಸು ಮಾಡಿದ ಮಾತ್ರಕ್ಕೆ ಅವನ ಸಹಜವಾದ ಕ್ಷಾತ್ರ ಗುಣ ಎಂದಾದರೂ ಹಿಂಗುವುದುಂಟೆ? ಪರ್ಣಾಹಾರ ಜಲಾಹಾರಗಳಿಂದ ಕೆಲವು ಕಾಲ ಜೀವಿಸಿದ್ದ ಮಾತ್ರಕ್ಕೆ ಆ ಕ್ಷತ್ರಿಯೋತ್ತಮನ ಅಭಿಮಾನ, ರಾಜಸಗುಣ, ತಗ್ಗುವುದೆ? ಕಾಡಿನ ಬೇಡನೊಬ್ಬ ಬಂದು ತನ್ನನ್ನು ಅವಮಾನಗೊಳಿಸಿದರೆ ವಿಕ್ರಮಾರ್ಜುನನು ಸುಮ್ಮನಿರುವುದುಂಟೆ? ಅವನಿಗೇನು ಮೂದಲಿಕೆಯ ಮಾತು ತಿಳಿಯದೆ?

ದಸಿಕೊಂದಕ್ಕುಂ ಬೇಡಂ
ಗಿಸಲ್ಕೆ ದೊರೆ ಮೃಗಮನೀ ಜಗಂಗಳನಲ್ಪಾ
ಡಿಸುವ ಮದೀಯೋಗ್ರಾಸ್ತ್ರಂ
ಪೆಸರ್ಗೊಳಲೇಂ ತನಗೆ ದೊರೆಯೆ ಖಳನಳವಱಿಯಂ

ಎಂದು ಆ ವಿಕ್ರಾಂತ ತುಂಗನು ಆ ಕಿರಾತನನ್ನು ತಿರಸ್ಕರಿಸಿದನು; ಅವನು ತನ್ನ ಅರಸನನ್ನೇ ಕಾಳಗಕ್ಕೆ ಕರೆಯಬಹುದೆಂದನು.

ಆಗ ಶಿವನಿಗೂ ಅರ್ಜುನನಿಗೂ ಕಾಳಗ ತೊಡಗಿತು. ಪಂಪ ವರ್ಣಿಸಿರುವ ಈ ಕಿರಾತಾರ್ಜುನೀಯ ಹೊಸ ಪರಿಯದಾಗಿದೆ. ಇಲ್ಲಿ ಅರ್ಜುನನದೇ ಮೇಲುಗೈ. ಅವನು ಒಬ್ಬನೇ. ಆದರೆ ಅವನೊಡನೆ ಕಾದುವ ಕಿರಾತನಿಗೆ ಅಪಾರವಾದ ಸೈನ್ಯವಿದೆ. ಅವನು ಅರ್ಜುನನ ಸಂಗಡ 'ಮಾಯಾಯುದ್ಧಮಂ ಪೊಣರ್ಚಲ್ ಬಗೆದು ಹಸ್ತ್ಯಶ್ವರಥ ಪದಾತಿ ಬಲಂಗಳನೆನಿತಾನುಮನ್' ತಂದು ಅವನ ಇದಿರಿಗೆ ಒಡ್ಡಿದನಂತೆ! ಆದರೆ ಪರಸೈನ್ಯಭೈರವನಲ್ಲವೆ ಅರಿಕೇಸರಿ? ಅವನು ಆ ಕುಹನಾ ಕಿರಾತನ ಮೇಲೆ ಸಿಟ್ಟಾಗಿ 'ಮಹಾಪ್ರಳಯ ಭೈರವಾಕಾರಮಂ ಕೆಯ್ಕೊಂಡು ಸೆರಗಿಲ್ಲದೆ ತಾಗಿ' ಕಿರಾತನ ಸೈನ್ಯವನ್ನೆಲ್ಲ ಹೊಡೆದು ಕೆಡವಿ ನಾಶಮಾಡಿದನು! ಆಗ ವಿಧಿಯಿಲ್ಲದೆ ಶಿವನು ಮಲ್ಲಯುದ್ಧಕ್ಕೆ ಸಿದ್ಧನಾಗಬೇಕಾಯಿತು. 'ದಿಗಿಭದೊಳ್ ದಿಗಿಭಂ ಪೆಣೆ ವಂತೆ' ಶಬರ ಶಂಕರನು ಪಾರ್ಥನೊಡನೆ ಹೆಣೆದುಕೊಂಡು ಅವನನ್ನು ಕೆಡವಲು ಪ್ರಯತ್ನಿಸಿದನು. ಇಬ್ಬರೂ ಶೂನ್ಯ ಹಸ್ತರಾಗಿ ಬಹಳ ಹೊತ್ತು ಹೋರಾಡಿದರಂತೆ. ಆದರೆ ಯಾರೂ ಗೆಲ್ಲಲಿಲ್ಲ. ದೇವತೆಗಳೆಲ್ಲ ಆಕಾಶದಲ್ಲಿ ಗುಂಪುಕಟ್ಟಿಕೊಂಡು ಬಂದು ನಿಂತು ಕಿರಾತಾರ್ಜುನರ ಈ ಬಾಹು ಯುದ್ಧ ನೈಪುಣ್ಯವನ್ನು ಕಂಡು ಮೆಚ್ಚಿದರು. ಬಹಳ ಹೊತ್ತು ಖಾಡಾಖಾಡಿ ಕುಸ್ತಿ ನಡೆದ ಮೇಲೆ 'ಇಕ್ಕಿದನವಯವದೆ ನೆಲ ದೊಳರಿಗಂ ಹರನಂ'! ಶಿವನನ್ನು ಪಾರ್ಥ ಕೆಳಕ್ಕೆ ಕೆಡವಿದನು. ಅಷ್ಟೇ ಅಲ್ಲ, 'ನೆಲಕ್ಕಿಕ್ಕಿ ಗ್ಗಂಟಲಂ ಮೆಟ್ಟ' ದನು! ಅರ್ಜುನನು ಹರನ ಗಂಟಲನ್ನು ಕಾಲಿನಿಂದ ತುಳಿದಾಗ

ಪೊಱಕಣ್ಗಂ ಮುನ್ನಂ ತಾಂ
ಮಱಸಿದ ನೊಸಲೊಂದು ಕಣ್ಣುಮೊಗಳ್ ನೊಸಲಿಂ
ಪೊಱಮಟ್ಟಂತಿರೆ ತೋಱಿದ
ನೆಱಕದೆ ಹರಿಗಂಗೆ ರುದ್ರನಗ್ಗಳ ಗಣ್ಣಂ VIII-23.

ಶಿವ ಆಗ ಅರ್ಜುನನಿಗೆ ತನ್ನ ನಿಜರೂಪವನ್ನು ತೋರಿದನು. ಕೂಡಲೆ ಅರ್ಜುನ ಸಾಷ್ಟಾಂಗ ದಂಡ ಪ್ರಣಾಮ ಮಾಡಿ ತಾನು ಅರಿಯದೆ ಆಚರಿಸಿದ ಅಪರಾಧವನ್ನು ಕೃಪೆಯಿಂದ ಮನ್ನಿಸಬೇಕೆಂದು ಬೇಡಿಕೊಂಡನು.

ನನ್ನಯಭಟ್ಟನಾಗಲಿ ಬೇರೆ ಯಾವ ಭಾರತ ಕರ್ತನಾಗಲಿ ಪಾರ್ಥ ಶಿವನ ಗಂಟಲನ್ನು ಮೆಟ್ಟಿದಂತೆ ಹೇಳಿಲ್ಲ; ಹೇಳುವುದು ಶಕ್ಯವಲ್ಲ. ಜೈನನಾದ ಪಂಪ ಇಲ್ಲಿ ಧೈರ್ಯವಹಿಸಿ ಅರಿಕೇಸರಿ ಅಥವಾ ಅರ್ಜುನನ ಪರಾಕ್ರಮೋತ್ಕರ್ಷವನ್ನು ಹೊಗಳುವ

ಭರದಲ್ಲಿ ಶಿವನನ್ನು ಕೆಳಕ್ಕೆ ಕೆಡವಿದ್ದಾನೆ. ವೇಷ ಮರೆಸಿಕೊಂಡಾಗ ಮಹೇಶ್ವರನಿಗೂ ಗೌರವ ದಕ್ಕದೆ ಹೋಗಿರಬಹುದೇನೊ! ಆದರೆ ಅವನ ಶಕ್ತಿ ತಗ್ಗುವುದುಂಟೆ? ಮಾನವಮಾತ್ರನಿಂದ ತುಳಿಸಿಕೊಳ್ಳುವಂಥ ಹೀನಸ್ಥಿತಿ ಶಿವನಿಗೆ ಒದಗುವುದು ಸಂಭವವೆ? ಕವಿಯ ಸೃಷ್ಟಿಯಾದ ಕಾವ್ಯಜಗತ್ತಿನಲ್ಲಿ ಏನು ಬೇಕಾದರೂ ಆಗ ಬಹುದು. ಅಥವಾ ಪರಮೇಶ್ವರನು ಅರ್ಜುನನ ಶಕ್ತಿ ಪರೀಕ್ಷೆ ಮಾಡಿ ಅವನಿಗೆ ಬೇಕಾದ ಅಸ್ತ್ರಗಳನ್ನು ಅನುಗ್ರಹಿಸಲು ಬಂದಿದ್ದವನಾದ್ದರಿಂದ ಬೇಕಾಗಿ ಅರ್ಜುನನ ಪಟ್ಟಿಗೆ ಸಿಕ್ಕಿರಬಹುದೆ? ಆದರೆ ಪಂಪ ಬೇರೊಂದು ಸನ್ನಿವೇಶದಲ್ಲಿ ಅರ್ಜುನನ ಹಿರಿಮೆಯನ್ನು ಹೊಗುಳುತ್ತ

> ......... ವಿಜಯಂ ನೆಲಕಿಕ್ಕಿ ಗಂಟಲಂ
> ಮೆಟ್ಟಿದ ಕೊಂಡನೇ ಹರನ ಪಾಶುಪತಾಸ್ತ್ರಮನಿಂದ್ರಕೀಲದೊಳ್ '

ಎಂದು ಮತ್ತೆ ಹೇಳಿದ್ದಾನೆ! ಇದಕ್ಕೆ ಕವಿಗೆ ಅರಿಕೇಸರಿಯ ವಿಚಾರದಲ್ಲಿ ಇದ್ದ ಅಮಿತ ವಾದ ಸ್ನೇಹವೇ ಕಾರಣವೆಂದು ತಿಳಿಯಬೇಕು. ' ವಿಕ್ರಮಾರ್ಜುನ ವಿಜಯ 'ದಲ್ಲಿ ಪಂಪ ಕೆಲವು ಕಡೆ ಭಕ್ತಿಯಿಂದ ಶಿವಸ್ತೋತ್ರ ಮಾಡಿದ್ದಾನೆ.[1] ಭಕ್ತಪರಾಧೀನನಾದ ಮಹಾಶಿವನು ಅರ್ಜುನನ ಪರಾಕ್ರಮಕ್ಕೂ ವಿನಯಕ್ಕೂ ಮೆಚ್ಚಿ ಅವನು ಬಯಸಿದ ಪಾಶುಪತಾಸ್ತ್ರವನ್ನು ಅನುಗ್ರಹಿಸಿದನು. ಗೌರೀದೇವಿ ಪಾರ್ಥನಿಗೆ ಅಂಜಲಿಕಾಸ್ತ್ರ ವನ್ನು ಕೃಪೆ ಮಾಡಿದಳು. ಶಿವಪಾರ್ವತಿಯರೇ ಅನುಗ್ರಹಮೂರ್ತಿಗಳಾಗಿ ಪಾರ್ಥನ ಇಷ್ಟಾರ್ಥವನ್ನು ನೆರವೇರಿಸಿದ ಮೇಲೆ ಅವರ ಅನುಯಾಯಿಗಳಾದ ದೇವತೆಗಳು ಸುಮ್ಮನಿರಲಾದೀತೆ? 'ಮೂವತ್ತು ಮೂದೇವರುಂ ತಂತಮ್ಮ ನಚ್ಚಿನಂಬುಗಳಂ ತಂದೀಯೆ ಗುಣಾರ್ಣವಂ ಸಂಪೂರ್ಣ ಮನೋರಥ 'ನಾದನು! ಪುಷ್ಪವೃಷ್ಟಿಯೇ ಆಯಿತು. ಸ್ವಯಂ ಇಂದ್ರನೇ ಬಂದು ಪಾರ್ಥನನ್ನು ತನ್ನ ರಥದಲ್ಲಿ ಕೂಡಿಸಿಕೊಂಡು ಅಮರಾವತಿಗೆ ಕರೆದುಕೊಂಡು ಹೋದನು. ತಪಸ್ಸಿನ ದೆಸೆಯಿಂದಾದ ದೇಹಶ್ರಮ ಪರಿಹಾರಕ್ಕಾಗಿ ಅವನಿಗೆ ಇಂದ್ರ ಕೆಲವು ದಿನ ಸ್ವರ್ಗದಲ್ಲಿ ವಿಶ್ರಾಂತಿ ಕೊಟ್ಟು ಉಪ ಚಾರ ನಡೆಸಲು ಬಯಸಿದನು. ಪಾರ್ಥನ ಮೇಲೆ ಇಂದ್ರನಿಗೆ ಅಮಿತವಾದ ವಾತ್ಸಲ್ಯ.

ನನ್ನಯ ಪಾರ್ಥನ ತಪಶ್ಚರ್ಯೆ, ಇಂದ್ರಕೀಲದ ತಪಸ್ವಿಗಳು ಶಿವನಲ್ಲಿ ಹೋಗಿ ಮೊರೆಯಿಟ್ಟುಕೊಂಡದ್ದು, ಶಿವನು ಅವರಿಗೆ ಅಭಯ ನೀಡಿ ಕಳುಹಿಸಿ ಕೊಟ್ಟದ್ದು, ಆಮೇಲೆ ಮಹೇಶ್ವರ ಕಿರಾತರೂಪವನ್ನು ಧರಿಸಿ ಪರಿವಾರ ಸಮೇತ ನಾಗಿ ಇಂದ್ರಕೀಲಕ್ಕೆ ಬಂದದ್ದು, ಈ ಘಟನೆಗಳನ್ನೆಲ್ಲ ಪಂಪನು ಬಣ್ಣಿಸಿದಂತೆಯೇ ವರ್ಣಿಸಿದ್ದಾನೆ. ಮೂಕದಾನವನ ಸಂಹಾರದ ಉದ್ದೇಶವೂ ಮಹೇಶ್ವರನಿಗಿತ್ತು. ಕಿರಾತರ ವಿಶೇಷವಾದ ಗದ್ದಲದಿಂದ ಸಿಟ್ಟುಗೊಂಡ ಆ ರಾಕ್ಷಸನು ಈಶ್ವರ ಚೋದಿ ತನಾಗಿ ಸೂಕರನಾಗಿ ಭೀಕರಾಕಾರದಿಂದ ಅರ್ಜುನನನ್ನು ಕೊಲ್ಲಲು ಮುನ್ನುಗ್ಗಿದನು.

---

[1] ವಿ. ವಿ. IV–26 (ವ) ಮತ್ತು 27.

ಆಗ ಅರ್ಜುನನು ಅನಿವಾರ್ಯವಾಗಿ ಬಾಣ ಹೂಡಿದನು. ಅದನ್ನು ನೋಡಿದ ಕಿರಾತನು 'ಅದನ್ನು ಹೊಡೆಯಬೇಡ, ಹೊಡೆಯಬೇಡ' ಎಂದು ಕೂಗಿಕೊಂಡನಂತೆ! ಆದರೆ ಪಾರ್ಥನು ಅವನ ಮಾತನ್ನು ಲಕ್ಷಿಸದೆ ಬಾಣದಿಂದ ಆ ಹಂದಿಯನ್ನು ಹೊಡೆದೆ ಬಿಟ್ಟನು. ಕಿರಾತನ ಬಾಣವೂ ಅದಕ್ಕೆ ತಗಲಿತು. ಇಬ್ಬರ ಎರಡು ಬಾಣಗಳ ಪೆಟ್ಟಿಗೆ ನೊಂದು ಆ ದೈತ್ಯನು ಸೂಕರ ರೂಪವನ್ನು ಬಿಟ್ಟು ನಿಜರೂಪದಿಂದ ಅದೃಶ್ಯನಾದನು [1]

ಅನಿರೀಕ್ಷಿತವಾದ ಈ ಘಟನಾವಳಿಯನ್ನು ಕಂಡು ವಿಸ್ಮಿತನಾದ ಅರ್ಜುನನು ಮೇರುಶಿಖರಾಕಾರನಾದ ಕಿರಾತನೊಬ್ಬ ಅಪಾರ ಸೇನಾ ಸಮೇತನಾಗಿ ಮುಂದೆ ನಿಂತಿದ್ದುದನ್ನು ಕಂಡನು. ಅವನ ಆಶ್ಚರ್ಯ ಮೇರೆಯಿಲ್ಲದುದಾಯಿತು. 'ಅಯ್ಯಾ ನೀನು ಯಾರು? ನಿರ್ಮಾನುಷ್ಯವಾದ ಈ ಅರಣ್ಯದಲ್ಲಿ ಸ್ತ್ರೀ ಸಮೇತನಾಗಿ ಏಕೆ ತಿರುಗುತ್ತಿರುವೆ? ನಾನು ಹೊಡೆದ ಮೃಗಕ್ಕೆ ನೀನೇಕೆ ಬಾಣ ಹಾಕಿದೆ? ಇದು ಮೃಗಯಾಧರ್ಮ ವಿರೋಧವೆಂಬುದನ್ನು ಅರಿಯೆಯಾ? ನನ್ನ ನಿಶಿತ ಬಾಣದಿಂದ ಈಗಲೇ ನಿನ್ನನ್ನು ಹೊಡೆಯುತ್ತೇನೆ!' ಎಂದು ಅರ್ಜುನ ಅವನನ್ನು ದಂಡಿಸಲು ಆ ಕಾಡಿನ ಬೇಡನು ಗಹಗಹಿಸಿ ನಕ್ಕು 'ನನ್ನ ಮೃಗವನ್ನು ನಾನು ಹೊಡೆದೆ. ಅದು ನನ್ನ ಏಟಿಗೆ ಸಿಕ್ಕಿ ಸತ್ತಿತು. ನೀನು ಇಲ್ಲದ ಶೌರ್ಯವನ್ನು ಹೇಳಿಕೊಂಡು ಏಕೆ ಗರ್ವ ಪಡುವೆ?' ಎಂದು ಪ್ರಶ್ನೆ ಮಾಡಿದನು. ಕಿರಾತನ ಈ ಮೂದಲಿಕೆಗೆ ಪಾರ್ಥ ಸಹಿಸದೆ ಕಾಳಗಕ್ಕೆ ಅನುವಾದನು. ಪಂಪಭಾರತದಲ್ಲಿರುವಂತೆ ಇಲ್ಲಿ ಷಣ್ಮುಖ ಬಂದು ತನ್ನ ಅರಸನ ಬಾಣವನ್ನು ಕೇಳಿ ಜಗಳ ಹೂಡುವ ಪ್ರಸಂಗವಿಲ್ಲ. ಬಾಣದ ಸ್ವಾಮ್ಯ ವಿಚಾರ ಇಲ್ಲಿ ಚರ್ಚೆಗೇ ಬಂದಿಲ್ಲ. 'ಹಂದಿ ಯಾರದು? ಯಾರ ಬಾಣದಿಂದ್ದ ಅದು ಸತ್ತಿತು?' ಎಂಬ ಪ್ರಶ್ನೆಗಳಿಗಿಂತ ಅರ್ಜುನನ ಪೌರುಷಕ್ಕೆ ಹಾಕಿದ ಸವಾಲೇ ಇಲ್ಲಿ ವ್ಯಾಜ್ಯಕ್ಕೆ ಕಾರಣ.

ಕಿರಾತಾರ್ಜುನರ ಯುದ್ಧದಲ್ಲಿ ಉದ್ದಕ್ಕೂ ಪಾರ್ಥನೇ ತನ್ನ ಶಸ್ತ್ರಾಸ್ತ್ರಗಳನ್ನು ಕಳೆದುಕೊಂಡು ಸೋತು ಕಂಗೆಟ್ಟಿದ್ದಾನೆ. ಅವನ ಅಕ್ಷಯ ತೂಣೀರ ಬರಿದಾಯ್ತು. ದಿವ್ಯಾಸ್ತ್ರಗಳೂ ದಂಡವಾದುವು! ಅರ್ಜುನ ಗಾಬರಿಗೊಂಡು ಕತ್ತಿಯಿಂದ ಹೊಡೆದನು. ಅದೂ ವ್ಯರ್ಥವಾಯಿತು. ಅವನ ಗಾಂಡೀವವನ್ನೇ ಆ ಕಿರಾತ ಕಸಿದುಕೊಂಡು ಬಿಟ್ಟನು! ಕೊನೆಗೆ ಮಲ್ಲಯುದ್ಧ ನಡೆದು ಮಾಯಾಕಿರಾತನ ಹಿಡಿತಕ್ಕೆ ಸಿಕ್ಕಿ ಸೋತು ಅರ್ಜುನ ನೆಲಕ್ಕೆ ಬಿದ್ದನು ಆಗ ಅವನ ಧೈರ್ಯ ಶೌರ್ಯಗಳನ್ನು ಮೆಚ್ಚಿಕೊಂಡ ಪರಮೇಶ್ವರನು ತನ್ನ ನಿಜರೂಪದಿಂದ ಕಾಣಿಸಿಕೊಂಡು ಅರ್ಜುನನಿಗೆ ದಿವ್ಯದೃಷ್ಟಿ ಯನ್ನು ಕರುಣಿಸಿ[2] ಕೃತಾರ್ಥನನ್ನಾಗಿ ಮಾಡಿದನು. ಪಾರ್ಥನು ಶಿವನ ದಿವ್ಯ

---

1 ಆಂಧ್ರಭಾರತ ಅರಣ್ಯಪರ್ವ I–307

2 ಅರಣ್ಯ ಪರ್ವ I–322

ರೂಪವನ್ನು ಕಣ್ಣಾರ ನೋಡಿ ಭಕ್ತಿಯಿಂದ ಪ್ರಣಾಮವನ್ನಾಚರಿಸಿ ಶಿವನನ್ನು ವಿಶೇಷ ವಾಗಿ ಸ್ತೋತ್ರ ಮಾಡಿದನು. ನನ್ನಯಭಟ್ಟನು ಇಲ್ಲಿ ಒಂದು ಸುಂದರವಾದ ದಂಡಕವನ್ನೇ ರಚಿಸಿದ್ದಾನೆ.

ಶಿವನು ಪಾಶುಪತಾಸ್ತ್ರವನ್ನು ಕೊಟ್ಟು ಅದರ ಮಹಿಮಾತಿಶಯವನ್ನು ವರ್ಣಿಸಿ ಪಾರ್ಥನನ್ನು ಹರಸಿ ಅಂತರ್ಧಾನ ಹೊಂದಿದನು. ಆ ಕೂಡಲೆ ದೇವೇಂದ್ರನೂ ಕುಬೇರ ಯಮಾದಿ ಲೋಕಪಾಲಕರೂ ಪಾರ್ಥನಿಗೆ ಅನೇಕ ದಿವ್ಯಾಸ್ತ್ರಗಳನ್ನು ಅನುಗ್ರಹಿಸಿದರು. ಅರ್ಜುನನು ತನಗೆ ಲಭಿಸಿದ ದೇವಾನುಗ್ರಹಕ್ಕೆ ಸಂತೋಷ ಪಡುತ್ತಿರುವಂತೆಯೇ ಇಂದ್ರನು ಅವನನ್ನು ಅಮರಾವತಿಗೆ ಆಹ್ವಾನಿಸಿದನು. ಮಾತಲಿ ರಥ ತೆಗೆದುಕೊಂಡು ಬಂದು ಅವನನ್ನು ಸ್ವರ್ಗಕ್ಕೆ ಕರೆದೊಯ್ದನು. ಅಲ್ಲಿ ಪಾರ್ಥನು ಇಂದ್ರ ವೈರಿಗಳಾದ 'ನಿವಾತ ಕವಚ ಕಾಳಕೇಯ ಪೌಲೋಮ ತಳ ತಾಳುಕರೆಂಬಱುವತ್ತು ಕೋಟಿ ರಕ್ಕಸ' ರನ್ನು ಕೊಲ್ಲಬೇಕಾಗಿತ್ತು. ಆ ರಕ್ಕಸರು ಇಂದ್ರನಿಗೆ ಅವಧ್ಯರು! ಆ ಕಾರ್ಯಕ್ಕೆ ಪಾರ್ಥನೇ ಸಮರ್ಥ!

ನನ್ನಯಭಟ್ಟ ಸ್ವರ್ಗವನ್ನೂ ಅಮರಾವತಿಯನ್ನೂ ನಾಲ್ಕುಪದ್ಯಗಳಲ್ಲಿ ಹೊಗಳಿದ್ದಾನೆ. ಪಂಪನಿಗೆ ಅದೂ ಬೇಕಾಗಲಿಲ್ಲ. ಇಂದ್ರನು 'ತನ್ನಮರಾವತೀ ಪುರಮನೆಯ್ದಿ ಮಗಂ ಬಂದೊಸಗೆಗೆ ಪೊೞಲೊಳಷ್ಟಶೋಭೆಯಂ ಮಾಡಿಸಿ' ದನೆಂದಿಷ್ಟು ಮಾತ್ರ ಹೇಳಿ ಪಾರ್ಥನಿಗೆ ಅಲ್ಲಿ ಲಭಿಸಿದ ಸ್ವಾಗತ ಸತ್ಕಾರಾದಿಗಳನ್ನು ವರ್ಣಿಸಿದ್ದಾನೆ.

ಇಲ್ಲಿಯ ತನಕ ವಿಕ್ರಮಾರ್ಜುನನ ಯುದ್ಧ ವಿಜಯ ಪರಂಪರೆಯ ವರ್ಣನೆ ಯಾಯಿತು. ಆ ಸಾಹಸಾಭರಣನು ದ್ರುಪದರಾಜನ ಮೇಲೆ ದಾಳಿ ಮಾಡಿದಂದಿನಿಂದ ಆರಂಭವಾದ ಅವನ ಅರಿವಿಜಯ ಕಥೆ ನಿರಂತರವಾಗಿ ಸಾಗಿತು. ಖಾಂಡವದಹನದ ಪ್ರಸಂಗದಲ್ಲಿ ಮಹೇಂದ್ರನ ಕೋಪವನ್ನೇ ಎದುರಿಸಬೇಕಾಗಿ ಬಂತು. ಮಳೆಯ ನೀರು ಕಾಳ್ಕಿಚ್ಚಿನ ಮೇಲೆ ಬೀಳದಂತೆ ಬಾಣದ ಹಂದರವನ್ನೇ ನಿರ್ಮಿಸಬೇಕಾಯಿತು. ಆಕಾಶಕ್ಕೆ ಬುಟ್ಟಿ ಕಟ್ಟುವ ಆ ಸಾಹಸ ಅರ್ಜುನನಿಗಲ್ಲದೆ ಬೇರಾರಿಗೆ ಸಲ್ಲಬಹುದು? ಅರಿಕೇಸರಿಗೆ ಮಾನವರೂ ಲಕ್ಷ್ಯವಿಲ್ಲ, ಗಂಧರ್ವರೂ ಲಕ್ಷ್ಯವಿಲ್ಲ! ಈಗ ಮಹೇಶ್ವರ ನನ್ನೇ ಇದಿರಿಸಿ ಕಾಳಗ ಮಾಡಿದ ಕೀರ್ತಿ ಅವನದು. ಇಂದ್ರನಿಗೇ ಅವಧ್ಯರಾಗಿದ್ದ ದಾನವರನ್ನು ಕೊಂದು ಅವನ ಕೃತಜ್ಞತೆಗೆ ಪಾತ್ರನಾದ ಅರ್ಜುನನು ಧನುರ್ವೇದ ವಿಶಾರದನೇ ಆಗಿದ್ದನು. ಇಂಥ ಸಮರೈಕಮೇರುನೆನಿಸಿಕೊಂಡ ಮಗ ಅಪರೂಪಕ್ಕೆ ಅಮರಾವತಿಗೆ ಬಂದಾಗ ಆ ಮಹೇಂದ್ರನು ಮಾಡಬಹುದಾದ ಆದರೋಪಚಾರಗಳಿಗೆ ಮಿತಿಯುಂಟೆ? ಅವನು ಅರ್ಜುನನನ್ನು ಏಕಾಸನದಲ್ಲಿ ಕುಳ್ಳಿರಿಸಿಕೊಂಡು ದೇವ ಸಭೆಯಲ್ಲಿ ಅವನಿಗೆ ವಿಶೇಷವಾದ ಮನ್ನಣೆ ಮಾಡಿದನು. 'ದೇವೇಂದ್ರಂ ತನ್ನೊಡನೆ ಮಜ್ಜನಂಬುಗಿಸಿ ದಿವ್ಯಾಹಾರಂಗಳನೊಡನಾರೋಗಿಸಿ ತಂಬುಲಂಗೊಂಡು ತನ್ನ ತುಡುವ ತುಡುಗೆಗಳನೆಲ್ಲಮುಮಂ ತುಡಿಸಿ ಕಿರೀಟಯಂ ಕೋಟ ಮಾಟ್ಕೆಯಿಂ ಕೊಂಡಾಡಿ' ದನು! ದೇವಲೋಕದಲ್ಲೆಲ್ಲ ಪಾರ್ಥನ ಮ್ಶಾತೆ ಮಾತಾಯಿತು!

ಅರ್ಜುನನು ದೇವೇಂದ್ರನ ಪರಮಾನುಗ್ರಹಕ್ಕೆ ಪಾತ್ರನಾಗಿ ಸ್ವರ್ಗಸುಖಾನುಭವ ಮಾಡುತ್ತ ಸಂತಸದಿಂದಿರುವಾಗಲೇ ಅವನ ಸತ್ವಪರೀಕ್ಷೆ ನಡೆಯಿತು. 'ಪರಾಕ್ರಮ ಧವಳನ ಪರಾಕ್ರಮಕ್ಕಂ ಗಂಡಗಾಡಿಗಂ' ಸೋತ ರಂಭೆಯು ವಿರಹವನ್ನು ಸೈರಿಸಲಾರದೆ ತಾನಾಗಿ ಹೋಗಿ ಏಕಾಂತದಲ್ಲಿ ಅವನ ಮೇಲೆ ಬಿದ್ದಳು! ಆದರೆ ಅರ್ಜುನನು ಶೌಚಾಂಜನೇಯನಲ್ಲವೆ? ಅವನು ರಂಭೆಯ ಈ ವರ್ತನೆಯನ್ನು ಸಹಿಸಲಿಲ್ಲ. ಅವನು ಅವಳನ್ನು ತಿರಸ್ಕರಿಸಿ ಅವಳ ಶಾಪಕ್ಕೆ ಗುರಿಯಾದನು:

> 'ಎಂದು ಪುರಂದರನರಸಿಯ
> ಯುಂದು ದಲೆನಗಬ್ಬೆಯೇ ತೊಡಳ್ ನುಡಿಯದೆ ಪೋ
> ಗೆಂದೊಡದೊಂದಬ್ದದೊಳ್ ಬೃ
> ಹಂದಳೆಯಾಗೆಂದು ಮುನಿದು ಶಾಪಮನಿತ್ತಳ್'

ಈ ಒಂದು ಪದ್ಯದಲ್ಲಿಯೇ ಪಂಪನು ರಂಭೆಯ ಶಾಪಪ್ರಸಂಗವನ್ನು ಮುಗಿಸಿಬಿಟ್ಟಿದ್ದಾನೆ! ಇದು ಅತಿ ಸಂಕ್ಷೇಪವಾಯಿತೆಂದೆನಿಸುವುದು ಅನಿವಾರ್ಯ. ರಂಭೆ[1] ಯ ಮೋಹ, ಅವಳಿಗೂ ಅರ್ಜುನನಿಗೂ ನಡೆದ ಸಂಭಾಷಣೆ, ಅವಳ ನಿರಾಸೆ, ಅರ್ಜುನನ ಅಚಂಚಲವಾದ ನಿಲುವು, ಇವುಗಳನ್ನೆಲ್ಲ ಬೇರೆ ಭಾರತ ಕವಿಗಳು ವಿಸ್ತಾರವಾಗಿ ವರ್ಣಿಸಿದ್ದಾರೆ. ಇಂಥ ಸ್ವಾರಸ್ಯವಾದ ಕಥೆಯನ್ನು ಪಂಪಕವಿ ಇಷ್ಟು ಆತುರವಾಗಿ ಮುಗಿಸಲು ಕಾರಣವೇನಿತ್ತೊ! ಅರ್ಜುನ ಅರಿಕೇಸರಿಗಳನ್ನು ಸಮೀಕರಿಸಿದ್ದರಿಂದ ಈ ಶಾಪದ ಕಥೆಯನ್ನು ವಿಸ್ತಾರವಾಗಿ ಹೇಳಲು ಹಿಂಜರಿದಿರಬಹುದೆ? ಆದರೆ ಅರ್ಜುನ ಬೃಹಂದಳೆಯಾಗಿ ವಿರಾಟನಗರದಲ್ಲಿ ಒಂದು ವರ್ಷಕಾಲ ನಿಂತ ಕಥೆಯನ್ನು ಹೇಳದಿರಲು ಸಾಧ್ಯವೆ? ನಪುಂಸಕನಾಗೆಂದು ಪಾರ್ಥನಿಗೆ ದೇವವೇಶ್ಯೆಯೊಬ್ಬಳು ಕೊಟ್ಟ ಶಾಪ ವೃತ್ತಾಂತವನ್ನು ಭಾರತ ಕವಿ ಹೇಳಲೇಬೇಕು! ಆದ್ದರಿಂದ ಪಂಪ ಅದನ್ನು ಅನಿವಾರ್ಯವೆಂದು ಬಗೆದು ಒಂದು ಪದ್ಯದಲ್ಲಿ ಹೇಳಿ ಮುಗಿಸಿ ಕೈತೊಳೆದುಕೊಂಡಿದ್ದಾನೆ! ಅರ್ಜುನ ಈ ಶಾಪಕ್ಕೆ ಹೆದರಲಿಲ್ಲ. 'ಎಂತುಮಾಂ ಪರಸ್ತ್ರೀಯರ ದೆಸೆಯೊಳಮಣ್ಣನ ನನ್ನಿಯ ವರ್ಷಾವಧಿಯೊಳ ಮೋತು ಪಿಡಿನೆಂ ನಿನ್ನ ನುಡಿಯೊಳೇ ದೋಷಮ್?' ಎಂದು ಅವನು ರಂಭೆಗೇ ಸಮಾಧಾನ ಹೇಳಿ 'ತನ್ನ ಶೌಚದ ಮೇಗಣ ಕಲಿತನಮುಮಂ ಸೌಭಾಗ್ಯದ ಮೇಗಣ ಬಲ್ಲಾಳ್ತನಮುಮ ನಿಂದ್ರ ಲೋಕದಿಂ ಪೊಗಟಿಸಿ' ಕೊಂಡನು!

ನನ್ನಯಭಟ್ಟನೂ ಈ ಪ್ರಸಂಗವನ್ನು ಅತಿಯಾಗಿ ಬೆಳಸದೆ ಹೋದರೂ ಪಂಪನಷ್ಟು ಸಂಕ್ಷೇಪಗೊಳಿಸಿಲ್ಲ. ಊರ್ವಶಿಯ ಮೋಹಾತಿಶಯ, ಅರ್ಜುನನ ನಿರಾಕರಣೆ, ಅದರಿಂದ ಆ ಅಪ್ಸರೆಗಾದ ಅತ್ಯಂತವಾದ ನಿರಾಸೆ ಅವಳು ದೇವಲೋಕದ ಆಚರಣೆಯನ್ನು ಹೇಳಿ ಅರ್ಜುನನನ್ನು ಒಲಿಸಿಕೊಳ್ಳಲು ಪ್ರಯತ್ನಿಸಿದುದು, ಕಡೆಗೂ

---

1 ನನ್ನಯನ ಭಾರತದಲ್ಲಿ ಊರ್ವಶಿ ಈ ಕೆಲಸ ಮಾಡಿದವಳು, ರಂಭೆಯಲ್ಲ.

ಅವನು ನೊಂದು ಹಿಡಿದುದರಿಂದ ರುಷ್ಟಳಾಗಿ ಶಾಪ ಹಾಕಿದ್ದು, ಈ ವಿವರಗಳನ್ನೆಲ್ಲ ಏಳೆಂಟು ಗದ್ಯಪದ್ಯಗಳಲ್ಲಿ ಹೇಳಿದ್ದಾನೆ. ನನ್ನಯನ ಅರ್ಜುನನಿಗೆ ಈ ನಿಮಿತ್ತದಿಂದ ಇಂದ್ರನ ಹಾರ್ದಿಕವಾದ ಹೊಗಳಿಕೆ ಲಭಿಸಿದೆ. 'ನಿನ್ನಂಥ ಧೈರ್ಯವಂತನನ್ನು ಯಾವ ಯುಗಗಳಲ್ಲಿಯೂ ಕಾಣೆವು. ನೀನು ಧರ್ಮಾಯತ್ತಮತಿ! ಮುನಿಗಳಿಗೂ ಆದರ್ಶವೆನಿಸಬಹುದಾಗಿದೆ ನಿನ್ನ ಇಂದ್ರಿಯ ಜಯ'[1]

ಪಾರ್ಥನೇನು ಅರಸಿಕನಾದ ಮೂರ್ಖನಲ್ಲ; ವಿಷಯವಿಮುಖನಾದ ವಿರಕ್ತ ತಪಸ್ವಿಯೂ ಅಲ್ಲ. ಹಿಂದೆ ಅವನು ತೀರ್ಥಯಾತ್ರೆಗೆಂದು ಹೊರಟಾಗಲೇ ಹಲವು ಹೆಂಡಿರನ್ನು ಮದುವೆಯಾದವನು! ಸುಭದ್ರೆಯನ್ನು ಅಪಹರಿಸಿ ತಂದು ಮದುವೆ ಮಾಡಿಕೊಂಡು ಅವನು 'ಪ್ರಿಯಗಳ್ಳ'ನೆನಿಸಿಕೊಂಡವನು! ಆದರೂ ಅವನು ತಾನಾಗಿ ಒಲಿದುಬಂದ ಈ ಮಹಾಸುಂದರಿಯಾದ ಅಚ್ಚರಸಿಗೆ ಒಲಿಯಲಿಲ್ಲ. ಅವಳು ಪುರಂದರನ ಅರಸಿಯಾದುದರಿಂದ ತನ್ನ 'ಅಬ್ಬೆ'ಯಾದಳು! ಅವಳನ್ನು ಬೇರೆ ದೃಷ್ಟಿಯಿಂದ ನೋಡುವುದೆ? ಅದು ಸಲ್ಲ. ಆದ್ದರಿಂದ ಅವನು ಹೆಚ್ಚು ಮಾತಿಲ್ಲದೆ 'ತೊದಳ್ ನುಡಿಯದೆ ಪೋಗು' ಎಂದು ನಿಷ್ಕರ್ಷೆಯಾಗಿ ಹೇಳಿಬಿಟ್ಟನು. ಒಲಿದಿದ್ದರೂ, ರಂಭೆ ಮುನಿದು ಮಾರಿಯಾದರೂ, ಕೆಟ್ಟ ಶಾಪವನ್ನೇ ಕೊಟ್ಟರೂ, ಪಾರ್ಥನು ತನ್ನ ನಿರ್ಣಯದಿಂದ ಚಲಿಸಲಿಲ್ಲ, ಅಂಜಲಿಲ್ಲ, ಅಳುಕಲಿಲ್ಲ! ಇದು ಪಾರ್ಥನ ಅಪೂರ್ವ ಪರಾಕ್ರಮವೇ ಸರಿ. ಅವನನ್ನು 'ಶೌಚಾಂಜನೇಯ'ನೆಂದು ಕರೆದರೆ ತಪ್ಪಲ್ಲ.

ಇಂದ್ರಕೀಲದಲ್ಲಿ ತಪಸ್ಸಿಗೆಂದು ಹೋದ ಅರ್ಜುನನು ಬಹಳ ಕಾಲವಾದರೂ ಬರಲಿಲ್ಲವೆಂದು ಪಾಂಡವರು ವ್ಯಾಕುಲಚಿತ್ತರಾಗಿದ್ದಾಗ ಅವರಲ್ಲಿಗೆ ಬಂದ ಮಾರ್ಕಂಡೇಯ ಮಹರ್ಷಿಯ ದಿವ್ಯೋಪದೇಶದಂತೆ ಗಂಧಮಾದನ ಗಿರಿಗೆ ಹೋಗಿ ಅಲ್ಲಿ ಅರ್ಜುನನ ನಿರೀಕ್ಷಣೆಯಲ್ಲಿದ್ದರು.

ಆ ಕಾಲದಲ್ಲಿ ಭೀಮಸೇನನು ಸಾಧಿಸಿದ ಒಂದೆರಡು ಸಾಹಸ ಕಾರ್ಯಗಳನ್ನು ಪಂಪ ಸಂಕ್ಷೇಪವಾಗಿ ಹೇಳಿದ್ದಾನೆ. ಗಂಧಮಾದನದ ಒಂದು ಸರೋವರದಲ್ಲಿದ್ದ ಕನಕ ಕಮಲಗಳನ್ನು ದ್ರೌಪದಿಯ ಸಂತೋಷಾರ್ಥವಾಗಿ ತರಲು ಹೋಗಿ ಅಲ್ಲಿ ತನಗೆ ಅಡ್ಡಿ ಬಂದ ಕುಬೇರನ ಭಟರನ್ನು ರೌದ್ರ ಭಯಾನಕವಾಗುವಂತೆ ಕೊಂದನು. 'ಮತ್ತಂ ಜಟಾಸುರನೆಂಬಸುರನನಾ ಗಿರೀಂದ್ರ ಕಂದರದೊಳ್ ಸೀಳ್ದು ಸಿಱುಂಬುಳಾಡಿ' ಭೀಮ ತನ್ನ ಪರಾಕ್ರಮವನ್ನು ಮೆರೆದನು. ಮೂಲಭಾರತದಲ್ಲಿ ಒಂದು ಇಡೀ ಅಧ್ಯಾಯವನ್ನೇ ಆಕ್ರಮಿಸಿಕೊಂಡಿರುವ ಜಟಾಸುರ ವಧೆಯ ಕಥೆಯನ್ನು ಪಂಪಕವಿ ಒಂದು ವಾಕ್ಯಾರ್ಥವಲ್ಲಿ ಮುಗಿಸಿದ್ದಾನೆ. ಅದಕ್ಕೆ ನನ್ನಯ ಹತ್ತು ಪದ್ಯಗಳನ್ನು ಬಳಸಿದ್ದಾನೆ.

---

1 ಅರಣ್ಯಪರ್ವ I–366

ಇನ್ನೊಮ್ಮೆ ಭೀಮ ಬೇಟೆಗೆ ಹೋಗಿದ್ದಾಗ ದಾರಿಯಲ್ಲಿ ಅಡ್ಡವಾಗಿ ಮಲಗಿದ್ದ ವಾನರನೊಬ್ಬನನ್ನು ಕಂಡು 'ದಾರಿಬಿಡು' ಎಂದು ಗದರಿಸಿದನಂತೆ. ಆದರೆ ಆ ಕೋತಿ ಕದಲಲಿಲ್ಲ. ಕದಲಿ ಹೋಗಲು ತನಗೆ ಕೈಲಾಗದೆಂದೂ ಸಾಧ್ಯವಾದರೆ ತನ್ನನ್ನು ಪಕ್ಕಕ್ಕೆ ಸರಿಸಬಹುದೆಂದೂ ಆ ವಾನರ ಭೀಮನಿಗೆ ಉತ್ತರ ಹೇಳಿದನಂತೆ. ಭೀಮಸೇನನು ಅಲಕ್ಷ್ಯದಿಂದ ಅವರ ಬಾಲ ಹಿಡಿದು ಎತ್ತಲು ಪ್ರಯತ್ನಿಸಿ ವಿಫಲನಾದನು. ಆಮೇಲೆ ಎಷ್ಟು ಸಾಹಸಮಾಡಿದರೂ ಆ ಕೋತಿಯನ್ನು ಎತ್ತಲು ಭೀಮನಿಂದಾಗಲಿಲ್ಲವಂತೆ! ಆಗ ಇದು ಸಾಧಾರಣ ಕೋತಿಯಾಗಿರದೆ ವಾಯುಪುತ್ರನಾದ ಹನುಮಂತನೇ ಇರ ಬಹುದೆಂದು ಶಂಕಿಸಿ 'ನೀನೆಮ್ಮಣ್ಣನೆ?' ಎಂದು ಕೇಳಲು ಆ ವಾನರನು ಪ್ರೀತಿಯಿಂದ 'ಭೀಮನೆಂಬಂ ನೀನೇ?' ಎಂದು ಮರುಪ್ರಶ್ನೆ ಮಾಡಿದನು. ಭೀಮ ಹನುಮರ ಪರಸ್ಪರ ಪರಿಚಯವಾಯಿತು. ಭೀಮ ಹನುಮನಿಗೆ ವಿನಯದಿಂದ ನಮಸ್ಕರಿಸಿದನು. ಹನುಮನು ಅವನನ್ನು ಆಶೀರ್ವದಿಸಿ

'ನಿನ್ನಂ ಪಗೆವರ ಬೇರೊಳ್
ಬೆನ್ನೀರಂ ಪೊಯ್ದು ನಿನಗೆ ಮಾಟ್ಪೆಂ ಧರೆಯಂ'

ಎಂದು ಹೊಸದಾಗಿ ಲಭಿಸಿದ ತಮ್ಮನಿಗೆ ಭಾಷೆ ಕೊಟ್ಟನು. ಅವನಿಗೆ ಭೀಮನ ಮೇಲೆ ಅಮಿತವಾದ ವಾತ್ಸಲ್ಯವುಂಟಾಗಿತ್ತು. ಆದರೆ ಭೀಮಸೇನ ತನ್ನ ಹಗೆಗಳನ್ನು ತೀರಿಸಲು ಹನುಮನ ಸಹಾಯವನ್ನು ಬಯಸುವವನಲ್ಲ. ಅವನಿಗೆ ಕೌರವರ ವಿಷಯದಲ್ಲಿ ಎಷ್ಟು ಮಾತ್ರವೂ ಅಂಜಿಕೆಯಿಲ್ಲ. ಅಲ್ಲದೆ ಹನುಮಂತನ ಮಹಾ ಸಾಧನೆಯ ವಿಚಾರದಲ್ಲಿ ಅವನಿಗೆ ಬಹಳ ಗೌರವ.

ಬೆಸನಂ ಪೂಣ್ದು ಕಡಂಗಿ ಪಾಯ್ದು ಕಡಲಂ ಮುಂ ಪೊಣ್ದರಂ ಕೊಂದು ಪೊ
ಕ್ಕು ಸಮಂತಾಗಡೆ ಲಂಕೆಯುಂ ಬನಮುನಾಟುಂದುರ್ಕಿ ಕಿಟ್ಟಿಕ್ಕಿ ಸಂ
ತಸಮಂ ಸೀತೆಗೆ ಮಾಡಿ ಸುಟ್ಟುಪೊಟಲಂ ಕಾಳಾನಳಂಗಿತ್ತು ಬೇ
ವಸಮುಂ ರಾಮನಿನುಯ್ದು ನೀಂ ಬರೆಗಮೇನಾ ಕೌರವರ್ ಗಂಡರೇ

ಎಂದು ಅವನು ಹನುಮಂತನನ್ನು ಕೇಳಿದ್ದಾನೆ. ಕೌರವರಿಗೆ ಅಂಥಾ ಮಹಾ ಪುರುಷನನ್ನು ಎದುರಿಸುವ ಅರ್ಹತೆ ಇಲ್ಲ. ಅವರನ್ನು ವಿಚಾರಿಸಿಕೊಳ್ಳಲು ತಾನೇ ಸಾಕೆಂದು ಅವನ ಮತ. ಆದರೆ ಅಣ್ಣ ಅನುಗ್ರಹ ಮಾಡಿದಾಗ ತಿರಸ್ಕರಿ ಸುವುದು ಸಮನಲ್ಲವೆಂಬುದನ್ನು ಭೀಮ ಮರೆಯಲಿಲ್ಲ. ಅವನು ವಿಜಯನಿಗೆ ಯುದ್ಧವಿಜಯವಾಗುವಂತೆ ಅವನ ಧ್ವಜದಲ್ಲಿ ಹನುಮಂತ ನೆಲಸಿರಬೇಕೆಂದು ಪ್ರಾರ್ಥಿಸಿಕೊಂಡನು! ಹನುಮನು ಅರೆಕ್ಷಣವೂ ಅನುಮಾನಿಸದೆ 'ಅದೇವಿರಿದು? ಇತ್ತೆನ್' ಎಂದು ನುಡಿದು ಅದೃಶ್ಯನಾಗಿಬಿಟ್ಟನು! ಭೀಮನಿಗೆ ಅನುಗ್ರಹ ಮಾಡುವ ಸಲುವಾಗಿಯೇ ಅವನು ಅಲ್ಲಿಗೆ ಬಂದಿದ್ದಂತೆ ತೋರುತ್ತದೆ. ಮೇಲಿನ ಒಂದು ಪದ್ಯದಲ್ಲಿ ರಾಮಾಯಣದ ಸುಂದರ ಕಾಂಡದ ಇತಿವೃತ್ತವನ್ನೆಲ್ಲ ಸಂಗ್ರಹಿಸಿ ಹೇಳಿರುವ ಪಂಪನ ವೈಖರಿ ಮೆಚ್ಚತಕ್ಕದ್ದು. ಇಲ್ಲಿ ಪಂಪನ ಮಿತವಚನ ಅತ್ಯಂತ

ಹಿತವಾಗಿದೆ. ಹನುಮಂತನು ಮಾಡಿದ ಅತ್ಯದ್ಭುತವಾದ ಸಾಹಸ ಕಾರ್ಯದ ಹಿರಿಮೆ ಈ ಪದ್ಯದಲ್ಲಿ ಬಹಳ ರಮ್ಯವಾಗಿ ಚಿತ್ರಿತವಾಗಿದೆ.

ನನ್ನಯಭಟ್ಟನೂ ಭೀಮ ಹನುಮಂತರ ಸಂದರ್ಶನದ ಕಥೆಯನ್ನು ಹೇಳಿದ್ದಾನೆ. ಹನುಮಂತ ಭೀಮನಿಗೆ ಅವನ ಅಪೇಕ್ಷೆಯಂತೆ ತನ್ನ ಪೂರ್ವ ರೂಪವನ್ನು ತೋರಿದನು; ಚತುರ್ಯುಗಗಳ ಆಚಾರ ವರ್ತನೆಗಳನ್ನು ತಿಳಿಸಿದನು. ಶ್ರೀರಾಮನ ಪರಾಕ್ರಮವನ್ನು ವರ್ಣಿಸಿ ಅವನು ರಾವಣನನ್ನು ಕೊಂದು ಧರ್ಮಸಂಸ್ಥಾಪನೆ ಮಾಡಿ ಹನ್ನೊಂದು ಸಾವಿರ ವರ್ಷಕಾಲ ರಾಜ್ಯಭಾರ ಮಾಡಿದ ವಿವರಗಳನ್ನೂ ಹನುಮಂತನು ಭೀಮಸೇನನಿಗೆ ಸಂಕ್ಷೇಪವಾಗಿ ಹೇಳಿದನು. ಕೊನೆಗೆ ಅವನು ಪಾಂಡವರ ವೈರಿಗಳನ್ನೆಲ್ಲ ಕೊಂದು ಹಸ್ತಿನಾವತಿಯನ್ನು 'ನಾನಾ ಕುಲಾದ್ರಿ ಶಿಲಾವಲೀಗಹನ'ವಾಗಿಸುವೆನೆಂದು ಹೇಳಲು ಭೀಮನೇ ಅವನನ್ನು ಸಂತೈಸಿ ಅಂಥ ಸಹಾಯ ಅಗತ್ಯವಿಲ್ಲವೆಂದು ತಿಳಿಸಿ ತಾವೇ ಕೌರವರನ್ನು ನಿಗ್ರಹಿಸುವುದಾಗಿ ಹೇಳಿದನು. ಕಡೆಯಲ್ಲಿ ಹನುಮಂತನು 'ಯುದ್ಧದಲ್ಲಿ ನನ್ನನ್ನು ಸ್ಮರಿಸಿದರೆ ನಾನು ಬಂದು ಅರ್ಜುನನ ರಥಧ್ವಜದಲ್ಲಿ ನಿಂತು ನಿಮ್ಮೆಲ್ಲರ ಬಲಪರಾಕ್ರಮಗಳನ್ನು ನೋಡುತ್ತೇನೆ' ಎಂದು ತಾನಾಗಿ ಭಾಷೆ ಹೇಳಿ ಭೀಮನನ್ನು ಆಲಿಂಗನಮಾಡಿ ಅವನಿಗೆ ಸೌಗಂಧಿಕ ಸರೋವರಕ್ಕೆ ದಾರಿ ತೋರಿಸಿ[1] ಅದೃಶ್ಯನಾದನಂತೆ !

ಗಂಧಮಾದನಗಿರಿಯಲ್ಲಿ ಪಾರ್ಥನ ಆಗಮನ ನಿರೀಕ್ಷೆಯಲ್ಲಿದ್ದ ಧರ್ಮರಾಯಾದಿಗಳ ಬಳಿಗೆ ಇಂದ್ರಸನ್ಮಾನಿತನಾಗಿ ಐಂದ್ರವೆಂಬ ಅಸ್ತ್ರವನ್ನೂ ನೈಷ್ಠಿಕವೆಂಬ ಮುಷ್ಟಿಯನ್ನೂ ಪಡೆದುಕೊಂಡ ಅರ್ಜುನನು ಮಾತಲಿಯೇ ಸಾರಥಿಯಾಗಿದ್ದ ಪುಷ್ಪಕ ವಿಮಾನದಲ್ಲಿ ಬಂದಿಳಿದನು. ಚಾತಕ ಪಕ್ಷಿಗಳು ಮಳೆಗೆ ಕಾದಿದ್ದಂತೆ ಪಾರ್ಥನ ಬರವನ್ನೇ ಎದುರು ನೋಡುತ್ತ ಕಾದಿದ್ದ ಸೋದರರು ಹರ್ಷಪರವಶರಾದರು. ಶಿವನ ಅನುಗ್ರಹ ವೃತ್ತಾಂತವನ್ನೆಲ್ಲ ಕೇಳಿ ಪುಳಕಿತರಾದ ಧರ್ಮರಾಜಾದಿಗಳನ್ನು ಕರೆದುಕೊಂಡು ದ್ವೈತವನಕ್ಕೆ ಹೊರಟು ಪಾರ್ಥನು ಮಾತಲಿಯನ್ನು ಬೀಳುಕೊಂಡನು.

ಕೆಲವು ದಿನ ಕಳೆದ ಮೇಲೆ ಒಂದು ಮದ್ದಾನೆ ಕಾಡಿನ ಮುನಿಯೊಬ್ಬನ ಯಜ್ಞದ ಅರಣಿಯನ್ನು ಎಲ್ಲೋ ಕೆಡವಿ ಅರಣ್ಯದಲ್ಲಿ ಕಣ್ಮರೆಯಾಯಿತು. ಋಷಿಗಳು ಬಂದು ಅರಣಿಯಿಲ್ಲದೆ ಯಜ್ಞಕಾರ್ಯಕ್ಕೆ ಅಡ್ಡಿಯಾಗಿದೆಯೆಂದು ಮೊರೆಯಿಟ್ಟರು. ಪಾಂಡವರು ಆ ಆನೆ ಮತ್ತು ಅರಣಿಯನ್ನು ಹುಡುಕುತ್ತ ಅಡವಿಯಲ್ಲಿ ಅಲೆದು ಅವು ಸಿಕ್ಕದೆ ಬಿಸಿಲಿನ ಬೇಗೆಯಲ್ಲಿ ಬೆಂದು ಬಳಲಿ ಬೆಂಡಾಗಿದ್ದಾಗ ಅವರಿಗೆ ದಾಹಶಮನಕ್ಕಾಗಿ ನೀರು ತರಲು ಹೋದ ಸಹದೇವ ಹಿಂತಿರುಗಲಿಲ್ಲ. ಅವನನ್ನು ಹುಡುಕಿಕೊಂಡು ಹೋದ ಉಳಿದ ಮೂವರೂ ಹಿಂದಕ್ಕೆ ಬರಲಿಲ್ಲ. ಇದೇನಿರಬಹುದೆಂದು ಶಂಕೆಪಟ್ಟು

---

1 ಪಂಪಭಾರತದಲ್ಲಿ ಸೌಗಂಧಿಕ ಪುಷ್ಪಾಪಚಯದ ಕಥೆಯಾದ ಮೇಲೆ ಹನುಮದ್ದರ್ಶನದ ಕಥೆ ಬಂದಿದೆ. ನನ್ನಯನ ಭಾರತದಲ್ಲಿ ಅದಕ್ಕೆ ಮೊದಲೇ ಹನುಮ ಕಾಣಿಸಿಕೊಂಡಿದ್ದಾನೆ.

ನೀರಬಳಿಗೆ ಹೋದ ಧರ್ಮರಾಯನು ಅಲ್ಲಿ ಮೈಮರೆತು ಬಿದ್ದಿದ್ದ ತಮ್ಮಂದಿರನ್ನು ಕಂಡು ಇದೇನೋ ದೇವತೋಪದ್ರವವೇ ಇರಬೇಕೆಂದು ಯೋಚಿಸುತ್ತಿದ್ದಾಗ ಅಲ್ಲಿ ಅವನಿಗೆ 'ನನ್ನ ಪ್ರಶ್ನೆಗೆ ಉತ್ತರ ಹೇಳದೆ ಆ ಸರೋವರದ ನೀರು ಕುಡಿದು ಆ ನಾಲ್ವರು ಸತ್ತಂತೆ ನೀನೂ ದುಡುಕಬೇಡ' ಎಂಬ ಅಶರೀರವಾಣಿ ಕೇಳಿಸಿತು. ಆಗ ಧರ್ಮರಾಯನು ಪ್ರಶ್ನೆಗಳಿಗೆಲ್ಲ ಸಮರ್ಪಕವಾದ ಉತ್ತರ ಹೇಳಿದಮೇಲೆ ಸಾಕ್ಷಾತ್ ಯಮರಾಜನೇ ವೈದೋರಿ ದುರ್ಯೋಧನನು ಕನಕಸ್ವಾಮಿಯಿಂದ ಮಾಡಿಸಿದ ಅಭಿಚಾರ ಪ್ರಯೋಗದಿಂದ ಆಗಲಿದ್ದ ಪ್ರಮಾದವನ್ನು ತಪ್ಪಿಸುವ ಸಲುವಾಗಿ ತಾನೇ ಗಜರೂಪದಲ್ಲಿ ಬಂದುದಾಗಿ ಹೇಳಿ ಕಳೆದುಹೋಗಿದ್ದ ಅರಣಿಯನ್ನು ಕೊಟ್ಟು ಆ ಸಹೋದರರನ್ನು ಉಜ್ಜೀವಿಸಿ ಅಂತರ್ಧಾನ ಹೊಂದಿದನು. ಮಹಾಭಾರತದಲ್ಲಿ ಬರುವ ಯಕ್ಷಪ್ರಶ್ನೆಯ ಕಥೆ ಪಂಪನಲ್ಲಿ ಈ ರೂಪತಾಳಿದೆ. ಆದರೆ ಇಲ್ಲಿ ಯಕ್ಷನ ಪ್ರಶ್ನೆಗಳಾಗಲಿ ಅವಕ್ಕೆ ಧರ್ಮರಾಯನು ಕೊಟ್ಟ ಉತ್ತರಗಳನ್ನಾಗಲಿ ಪಂಪ ಹೇಳಿಲ್ಲ. ಈ ಧರ್ಮಜಿಜ್ಞಾಸಾತ್ಮಕವಾದ ಪ್ರಶ್ನೋತ್ತರ ಭಾರತಕಥೆಯಲ್ಲಿ ಅನಿವಾರ್ಯ ಭಾಗವಲ್ಲ. ಯುಧಿಷ್ಠಿರನ ಧರ್ಮಪ್ರಜ್ಞೆಯನ್ನು ಕೊಂಡಾಡುವುದಕ್ಕೆ ಅದು ಸಹಾಯಕವಾಗಿದೆ. ಆದರೆ ಪ್ರಸಿದ್ಧವಾದ ವಿಷಯವನ್ನು ಮತ್ತೆ ಮತ್ತೆ ಸಿದ್ಧಪಡಿಸುವ ಅಗತ್ಯವೇನಿದೆ? ಯುಧಿಷ್ಠಿರನು ಧರ್ಮರಾಯ! ಅವನು ಅರಿಯದ ಧರ್ಮವಿಲ್ಲ.

ಕಳೆದುಹೋಗಿದ್ದ ಅರಣಿಯನ್ನು ಬ್ರಾಹ್ಮಣರಿಗೆ ತಂದುಕೊಟ್ಟ ಮೇಲೆ ಕೆಲವು ದಿನವಿದ್ದು ತಮ್ಮ ಅರಣ್ಯವಾಸದ ಅವಧಿ ಮುಗಿದುದನ್ನರಿತು ಪಾಂಡವರು ಧೌಮ್ಯರೊಡನೆ ಮಂತ್ರಾಲೋಚನೆ ಮಾಡಿ ಧರ್ಮರಾಯನು ತಮ್ಮ ಶತ್ರುವಿಗೆ ಶತ್ರುವಾದ ಮತ್ಸ್ಯನ ರಾಜಧಾನಿಯಲ್ಲಿ ಅಜ್ಞಾತವಾಸದ ಅವಧಿಯನ್ನು ಕಳೆಯುವುದೆಂದು ನಿರ್ಧರಿಸಿದನು. ಅದರಂತೆ ಪಾಂಡವರು ಕೂಡಲೆ ತಮ್ಮ ಜತೆಯಲ್ಲಿದ್ದ ಧೌಮ್ಯಾದಿ ಮುನಿಗಳನ್ನೆಲ್ಲ ಬೀಳ್ಕೊಂಡು ದ್ರೌಪದೀ ಸಮೇತರಾಗಿ ಮತ್ಸ್ಯದೇಶದ ಕಡೆಗೆ ಹೊರಟರು.

ಅಗಸ್ತ್ಯಶಾಪದಿಂದ ಅಜಗರವಾಗಿ ಹುಟ್ಟಿದ್ದ ನಹುಷನು ಆ ಅರಣ್ಯದಲ್ಲಿ ಬೇಟೆಗೆಂದು ಬಂದ ಭೀಮಸೇನನನ್ನು ಗಟ್ಟಿಯಾಗಿ ಹಿಡಿದುಬಿಟ್ಟನು. ಎಷ್ಟು ಹೊತ್ತಾದರೂ ಭೀಮ ಹಿಂತಿರುಗಿ ಬರದಿರಲು ಧರ್ಮರಾಯನು ಧಾವಂತದಿಂದ ಅವನನ್ನು ಹುಡುಕಿಕೊಂಡು ಹೋಗಿ ಅವನು ಹೆಬ್ಬಾವಿನ ಹಿಡಿತಕ್ಕೆ ಸಿಕ್ಕಿದ್ದುದನ್ನು ಕಂಡು ಆಶ್ಚರ್ಯಪಟ್ಟನು. ಹತ್ತು ಸಹಸ್ರ ಆನೆಗಳ ಬಲವುಳ್ಳ ಭೀಮಸೇನನು ಒಂದು ಹಾವಿನ ಹಿಡಿತದಿಂದ ತಪ್ಪಿಸಿಕೊಳ್ಳಲು ಅಸಾಧ್ಯವಾದುದನ್ನು ನೋಡಿ ಇದರಲ್ಲಿ ಏನೋ ರಹಸ್ಯವಡಗಿದೆಯೆಂದು ಯೋಚಿಸಿ ಧರ್ಮರಾಯನು ಆ ಹಾವನ್ನೇ ಸಂಬೋಧಿಸಿ "ಅಯ್ಯಾ, ಇವನನ್ನೇಕೆ ಹಿಡಿದುಕೊಂಡೆ? ನಿನ್ನ ಹಸಿವು ನೀಗಲು ಬೇಕಾದಷ್ಟು ಮಾಂಸವನ್ನು ನಾನು ನಿನಗೆ ಒದಗಿಸಿಕೊಡುತ್ತೇನೆ. ಇವನನ್ನು ದಯವಿಟ್ಟು ಬಿಡು" ಎಂದು ಬೇಡಿದನು. ಆಗ ಆ ಸರ್ಪ ತನ್ನ ಜನ್ಮಾಂತರ ವೃತ್ತಾಂತವನ್ನೆಲ್ಲ ತಿಳಿಸಿ ತಾನು ಕೇಳುವ ಪ್ರಶ್ನೆಗಳಿಗೆಲ್ಲ ಸಮಂಜಸವಾದ ಉತ್ತರ ಹೇಳಿದರೆ ಈ ನೀಚಜನ್ಮ ಹೋಗುವು

ದೆಂದು ಹೇಳಿದನು. ಆಗ ಧರ್ಮರಾಯ ಅಜಗರದ ಪ್ರಶ್ನೆಗಳನ್ನೆಲ್ಲ ಕೇಳಿ ಅವಕ್ಕೆ ಸೂಕ್ತವಾದ ಉತ್ತರಗಳನ್ನು ನೀಡಿ ನಹುಷನ ಶಾಪಕ್ಕೆ ವಿಮೋಚನೆಯನ್ನು ಕಲ್ಪಿಸಿದನು. ಭೀಮ ಅಜಗರದ ಹಿಡಿತದಿಂದ ಬಿಡುಗಡೆ ಹೊಂದಿದನು.

ಈ ಉಪಾಖ್ಯಾನವೇ ನನ್ನಯನ ಕವಿತೆಯ ಕೊನೆಯ ಭಾಗ. ಇದಾದ ಮೇಲೆ ಒಂದು ಬೆಳದಿಂಗಳ ರಾತ್ರಿಯ ವರ್ಣನೆ ಮಾಡುತ್ತಿದ್ದಂತೆಯೇ ನನ್ನಯನ ಕವಿತೆ ನಿಂತುಹೋಗಿದೆ. ನನ್ನಯಭಟ್ಟ ಅರಣ್ಯಪರ್ವವನ್ನು ಪೂರ್ಣವಾಗಿ ತೆಲುಗಿಸಲು ಸಾಧ್ಯವಾಗಲಿಲ್ಲ. ಮೂರು ಆಶ್ವಾಸಗಳನ್ನು ರಚಿಸಿ ನಾಲ್ಕನೆಯದರಲ್ಲಿ ಸುಮಾರು ನೂರಸಲವತ್ತು ಪದ್ಯಗಳನ್ನು ಬರೆಯುವ ವೇಳೆಗೆ ಆ ಕವಿವರೇಣ್ಯನು ಪರಂಧಾಮವನ್ನು ಸೇರಿದನೆಂದು ತೋರುತ್ತದೆ. ಅರಣ್ಯಪರ್ವದ ಉಳಿದ ಭಾಗವನ್ನು ಯೆಱ್ಱಾಪ್ರೆಗಡನೆಂಬ ಬೇರೊಬ್ಬ ಕವಿ ಬರೆದು ಪೂರ್ತಿಗೊಳಿಸಿದ್ದಾನೆ. ಈ ನಹುಷಪ್ರಶ್ನೆ ಮುಂದೆ ಬರುವ ಯಕ್ಷಪ್ರಶ್ನೆಗೆ ಪೀಠಿಕೆಯಂತೆ ಇದೆ. ಈ ಪ್ರಶ್ನೋತ್ತರ ಪ್ರಕರಣಗಳೆಲ್ಲ ಧರ್ಮರಾಯನ ಅನನ್ಯಸಾಧಾರಣವಾದ ಧರ್ಮಪ್ರಜ್ಞೆಯನ್ನು ಪ್ರಕಾಶಪಡಿಸಲು ಸಾಧಕಗಳಾಗಿವೆ. ವಿಕ್ರಮಾರ್ಜುನನ ವಿಜಯಪರಂಪರೆಯನ್ನು ಹೇಳುವುದೇ ಗುರಿಯಾಗಿ ಉಳ್ಳ ಪಂಪನಿಗೆ ಈ ಧರ್ಮಪ್ರಶಂಸೆ ಅನಗತ್ಯವೆನಿಸಿದ್ದರೆ ಆಶ್ಚರ್ಯವೇನೂ ಇಲ್ಲ. ಅವನು ಅನಿವಾರ್ಯವಾಗಿ ಹೇಳಲೇಬೇಕಾದ ಯಕ್ಷನ ವೃತ್ತಾಂತದಲ್ಲಿಯೂ ಆ ಪ್ರಶ್ನೆಗಳನ್ನೂ ಉತ್ತರಗಳನ್ನೂ ನಿಶ್ಚಿಂತೆಯಾಗಿ ಕೈಬಿಟ್ಟಿದ್ದಾನೆ!

## ೭. ನನ್ನಯನ ಮೇಲೆ ಪಂಪನ ಪ್ರಭಾವ

ಪಂಪ ನನ್ನಯರಿಬ್ಬರೂ ಪ್ರತಿಭಾಸಂಪನ್ನರಾದ ಮಹಾಕವಿಗಳು. ಅವರು ತಂತಮ್ಮ ದೇಶಭಾಷೆಗಳಲ್ಲಿ ಕೃತಿರಚನೆ ಮಾಡಿ ಲೋಕಪ್ರಿಯತೆಯನ್ನು ಗಳಿಸಿಕೊಂಡ ಉದ್ದಾಮ ಸಂಸ್ಕೃತ ಪಂಡಿತರು. ಅಪೇಕ್ಷಿಸಿದ್ದರೆ ಅವರು ಸಂಸ್ಕೃತದಲ್ಲಿಯೇ ಕೃತಿ ರಚನೆ ಮಾಡಬಲ್ಲವರಾಗಿದ್ದರೆಂಬುದರಲ್ಲಿ ಸಂಶಯವಿಲ್ಲ. ವ್ಯಾಸಪ್ರೋಕ್ತವಾದ ಶ್ರೀ ಮಹಾಭಾರತವನ್ನು ಕನ್ನಡ ತೆಲುಗುಗಳಿಗೆ ತಂದ ಈ ಕವಿಗಳು ವ್ಯಾಸರ ಮಾತು, ಭಾವ, ಕಲ್ಪನೆಗಳನ್ನು ತಮ್ಮ ಕೃತಿಗಳಲ್ಲಿ ಬಳಸುವುದು ಸಹಜವೇ ಆಗಿದೆ. ವ್ಯಾಸರಲ್ಲದೆ ಕಾಳಿದಾಸ, ಬಾಣ, ಭಾರವಿ, ಭಟ್ಟನಾರಾಯಣ, ಭವಭೂತಿ ಮೊದಲಾದ ಇನ್ನೂ ಅನೇಕ ಸಂಸ್ಕೃತ ಕವಿಗಳ ಕೃತಿಗಳಿಂದಲೂ ಈ ಕವಿಗಳು ಲಾಭ ಪಡೆದಿದ್ದಾರೆ. ಅವರ ಹಲವು ಭಾವಗಳನ್ನು ಉಭಯ ಕವಿಗಳೂ ಅನುಸರಿಸಿರುವುದು ಕಾಣುತ್ತಿದೆ. ಕೆಲವು ವೇಳೆ ಅವರವೇ ಆದ ಮಾತುಗಳೂ ಬಂದಿವೆ. ಇದು ಸಹಜ. ರಸಜ್ಞರಾದ ವಿದ್ವತ್ಕವಿಗಳು ತಾವು ಆಸೆಯಿಂದ ಓದಿ ಮೆಚ್ಚಿ ಆಸ್ವಾದಿಸಿ ಆನಂದಿಸಿದ ಕಾವ್ಯದ ಹಲವು ಭಾವಗಳನ್ನೂ ಪದಪುಂಜಗಳನ್ನೂ ಎಂದಿಗೂ ಮರೆಯ ಲಾರರು. ಅವು ಪುನಃಪುನಃ ಅವರ ಮನೋರಂಗದ ಮೇಲೆ ತಮ್ಮ ನಾಟ್ಯವನ್ನು ನಡೆಸುತ್ತಲೇ ಇರುತ್ತವೆ. ಕವಿಗಳು ಬುದ್ಧಿಪೂರ್ವಕವಾಗಿ ಅನುವಾದ ಮಾಡದೆ ಇದ್ದರೂ ತಮ್ಮ ಮೇಲೆ ವಿಶೇಷವಾಗಿ ಪ್ರಭಾವ ಬೀರಿದ ಕೃತಿಗಳ ಮಾತುಗಳು. ಕಲ್ಪನೆಗಳು ಅವರ ಕಾವ್ಯಗಳಲ್ಲಿ ಮೈದೋರುವುದು ಅನಿವಾರ್ಯವಾದ ಸಂಗತಿ. ಅದನ್ನು ಕೃತಿಚೌರ್ಯವೆಂದು ಭಾವಿಸುವುದು ಆ ಹಿರಿಯ ಕವಿಗಳಿಗೆ ಅಪಚಾರ ವೆಸಗಿದಂತಾಗಬಹುದು.

ಪಂಪ ನನ್ನಯಭಟ್ಟರಿಬ್ಬರೂ ಸಂಸ್ಕೃತ ಸಾಹಿತ್ಯೋದ್ಯಾನದಲ್ಲಿ ಸ್ವಚ್ಛಂದ ವಾಗಿ ವಿಹರಿಸಿದ್ದಾರೆ. ಅವರ ಸಂಸ್ಕೃತ ಕಾವ್ಯಾಭ್ಯಾಸ ಬಹಳ ಆಳವಾದದ್ದು. ಇವರು ಸ್ವಂತವಾಗಿ ಕವಿತೆ ಕಟ್ಟಲಾರದ ಕಲ್ಪನಾದರಿದ್ರರಲ್ಲ. ಅವರ ಭಾಷಾಪ್ರಭುತ್ವ ಕೊಂಡಾಡುವಂಥದು. ಸ್ವಯಂ ಶ್ರೇಷ್ಠವರ್ಗದ ಹಿರಿಯ ಕವಿಗಳಾದ ಇವರ ಕೃತಿಗಳಲ್ಲಿ ಅನ್ಯ ಕವಿಕಲ್ಪನೆಗಳು ಇಣಿಕಿ ನೋಡುವಂತಾಗಿದ್ದರೆ ಅದಕ್ಕೆ ಆ ಕಲ್ಪನೆಗಳ ಸೊಗಸೇ ಕಾರಣ.

ಪಂಪ ತನ್ನ ಗ್ರಂಥಾರಂಭದಲ್ಲಿ ವ್ಯಾಸನೊಬ್ಬನ ಹೊರತು ಬೇರೆ ಯಾವ ಕವಿಯ ಹೆಸರನ್ನೂ ಸ್ಮರಿಸಿಲ್ಲ. ನನ್ನಯ ವಾಲ್ಮೀಕಿ ವ್ಯಾಸರಿಬ್ಬರನ್ನೂ ಹೆಸರಿಸಿ ತನಗೆ ಕೃತಿರಚನೆಯಲ್ಲಿ ವಿಶೇಷ ನೆರವು ನೀಡಿದ ನಾರಾಯಣಭಟ್ಟನೆಂಬ ಬಹು ಭಾಷಾಭಿಜ್ಞನಾದ ಸಮಕಾಲೀನ ಪಂಡಿತ ಕವಿಯೊಬ್ಬನನ್ನು ಮಾತ್ರ ಸ್ಮರಿಸಿದ್ದಾನೆ. ಉಳಿದ ಸಂಸ್ಕೃತ ಕವಿಗಳನ್ನು ಈ ಉಭಯ ಕವಿಗಳಲ್ಲಿ ಯಾರೂ ಸ್ಮರಿಸಿಲ್ಲ; ಸ್ಮರಿಸುವ

ಆಗತ್ಯ ತೋರಲಿಲ್ಲ. ಅವರ ಕೃತಿಗಳನ್ನು ಭಾಷಾಂತರ ಮಾಡಲು ಹೊರಟವರಲ್ಲ, ಇವರು.

ಸಂಸ್ಕೃತ ಮತ್ತು ಪ್ರಾಕೃತ ಕಾವ್ಯಗಳಿಂದ ನಮ್ಮ ಪ್ರಾಚೀನ ಕವಿಗಳು ಸ್ಫೂರ್ತಿ ಪಡೆದರು ; ಅನೇಕ ವೇಳೆ ಕಾವ್ಯವಸ್ತುವನ್ನು ಆ ಗಣಿಗಳಿಂದಲೇ ಸಂಗ್ರಹಿಸಿದರು. ವಿಷಯವು ಹೇಗೆ ಸಂಸ್ಕೃತದ್ದೋ ಹೇಳುವ ರೀತಿಯೂ ಹಾಗೆಯೇ ಸಂಸ್ಕೃತದ್ದು. ಸಂಸ್ಕೃತ ಛಂದಸ್ಸೇ ಈ ಕವಿಗಳಿಗೆ ವಿಶೇಷ ಮೆಚ್ಚಿಗೆಯಾಯಿತು. ಚಂಪಕಮಾಲಾದಿ ವೃತ್ತಗಳನ್ನೂ ಕಂದಪದ್ಯಗಳನ್ನೂ ಈ ಉಭಯಕವಿಗಳೂ ವಿಶೇಷವಾಗಿ ಬಳಸಿದ್ದಾರೆ. ನನ್ನಯಭಟ್ಟ ಸೀಸ ಪದ್ಯ, ಆಟವೆಲದಿ ಮೊದಲಾದ ತೆಲುಗು ಪದ್ಯಗಳನ್ನು ಬಳಸಿದಷ್ಟು ಮಟ್ಟಿಗೂ ಪಂಪ ಕನ್ನಡ ಪದ್ಯಗಳನ್ನು ಬಳಸಿಲ್ಲ. ಸಂಸ್ಕೃತ ಪದಪ್ರಯೋಗಕ್ಕೆ ಈ ಕವಿಗಳು ಎಷ್ಟು ಮಾತ್ರವೂ ಹಿಂತೆಗೆದಿಲ್ಲ. ಆದರೆ ಇವರು ಬಳಸುವ ಸಂಸ್ಕೃತ ಸರಳವೂ ಸರ್ವಜನ ಗ್ರಾಹ್ಯವೂ ಆದ ಸಂಸ್ಕೃತ ವಸ್ತು, ಛಂದಸ್ಸು, ಶಬ್ದಸಂಪತ್ತು, ಎಲ್ಲಕ್ಕೂ ಸಂಸ್ಕೃತದ ಕಡೆಗೇ ನೋಡುತ್ತಿದ್ದ ಈ ಹಿರಿಯ ವಿದ್ವಾಂಸರು ತಮ್ಮ ಕೃತಿಗಳಲ್ಲಿ ಕೆಲವು ಸಂಸ್ಕೃತ ಕಾವ್ಯಗಳ ಭಾವಗಳನ್ನೂ ಮಾತುಗಳನ್ನೂ ಬಳಸಿದ್ದರೆ ಅದು ಅಷ್ಟೇನೂ ಆಶ್ಚರ್ಯಕರವಾದ ವಿಷಯವಲ್ಲ.

ತೆಲುಗಿನ ಮೊದಲ ಕವಿಯಾದ ನನ್ನಯ ತನ್ನ ಭಾರತ ರಚನಾ ಕಾರ್ಯದಲ್ಲಿ 'ಕವಿತಾಗುಣಾರ್ಣವ'ನೆನಿಸಿದ ಕನ್ನಡದ ಪಂಪಕವಿಯ 'ವಿಕ್ರಮಾರ್ಜುನ ವಿಜಯ'ದಿಂದ ಏನಾದರೂ ನೆರವು ಪಡೆದಿರುವನೆ, ಪಂಪನ ಕಲ್ಪನಾ ವಿಲಾಸವನ್ನಾಗಲಿ ಮಾತಿನ ರೀತಿಯನ್ನಾಗಲಿ ಮೆಚ್ಚಿ ಅನುಸರಿಸಿರುವನೆ ಎಂಬ ಅಂಶವನ್ನು ಈಗ ವಿಚಾರಮಾಡೋಣ.

ನನ್ನಯಭಟ್ಟನು ಭಾರತ ರಚನೆಗೆ ತೊಡಗುವ ವೇಳೆಗಾಗಲೆ ಕನ್ನಡ ಕವಿ ಪಂಪನ 'ವಿಕ್ರಮಾರ್ಜುನ ವಿಜಯ'ವು ರಾಜಪ್ರಜೆಗಳ ಪ್ರೀತಿಗೆ ಪಾತ್ರವಾಗಿ ಲೆಂಬುಳವಾಟಕದಲ್ಲಿಯೂ ಅದಕ್ಕೆ ಸಮೀಪದ ಪ್ರಾಂತ್ಯಗಳಲ್ಲಿಯೂ ಪ್ರಸಿದ್ಧವಾಗಿದ್ದಿತೆಂದು ಭಾವಿಸಬಹುದು. ಪಂಪನ ಹಿರಿಯರು ಮೊದಲಿಗೆ ವೆಂಗಿಯವರು. ಅವರು ವೆಂಗಿಯಿಂದ ವಲಸೆ ಹೋಗಿ ವೇಮುಲವಾಡದಲ್ಲಿ ನೆಲಸಿದರು. ತೆಲುಗು ಕನ್ನಡಗಳೆರಡೂ ಆ ಪ್ರಾಂತ್ಯದಲ್ಲಿ ಬಳಕೆಯಲ್ಲಿದ್ದುವೆಂಬುದರಲ್ಲಿ ಸಂಶಯವಿಲ್ಲ. ಇಂದಿನಂತೆ ಅದು ಸಂಪೂರ್ಣವಾಗಿ ತೆಲುಗು ಪ್ರಾಂತ್ಯವೇ ಆಗಿದ್ದಿದ್ದರೆ 'ಆದಿಪುರಾಣ' 'ವಿಕ್ರಮಾರ್ಜುನ ವಿಜಯ'ಗಳಂಥ ಮಹಾಕೃತಿಗಳನ್ನು ರಚಿಸಬಲ್ಲ ಕವಿ 'ವೆಂಗಿಪಟು'ವಿನಲ್ಲಿ ಎಲ್ಲಿಂದ ಬರಬೇಕು ? ಆದ್ದರಿಂದ ವ್ಯಾಸರ ಮಹಾಭಾರತದಂಥ ಬೃಹದ್ಗ್ರಂಥವನ್ನು ತೆಲುಗಿಗೆ ತರುವ ದೊಡ್ಡ ಹೊಣೆಹೊತ್ತ ನನ್ನಯ ತನಗಿಂತ ಮುಂಚೆ ಈ ಕೆಲಸ ಮಾಡಿದ ದೇಶಭಾಷಾ ಕವಿಗಳ ಕೃತಿಗಳನ್ನು ಅವಲೋಕನ ಮಾಡದೆ ಇರುತ್ತಾನೆಯೆ ? ಅಲ್ಲದೆ ಪಂಪ ಚಾಳುಕ್ಯರಾಜನೊಬ್ಬನ

ಆಶ್ರಿತ ಕವಿ. ನನ್ನಯನೂ ವೆಂಗಿಯ ಚಾಳುಕ್ಯರಾಜನ ಆಶ್ರಿತ. ನನ್ನಯನ ದೊರೆ ರಾಜರಾಜನೇ ಪಂಪನ ಕೃತಿಯನ್ನು ತರಿಸಿ ಓದಿಸಿ ಕೇಳಿರಬಹುದೆಂದು ತಿಳಿಯಲು ಕಾರಣವಿದೆ. 'ಬಹು ಭಾಷೆಗಳಲ್ಲಿ ಬಹು ವಿಧಗಳಲ್ಲಿ ಬಹು ಜನಗಳಿಂದ ಕೇಳುತ್ತ ಯಾವಾಗಲೂ ಭಾರತ ಬದ್ಧಸ್ಪೃಹರಾಗುವವರಿಗೆ ಬಹು ಯಾಗಗಳ ಫಲವು ತಪ್ಪದೆ ಲಭಿಸುತ್ತದೆ' ಎಂದು ರಾಜರಾಜನು ನನ್ನಯನಿಗೆ ಹೇಳಿದನಂತೆ.[1] ಆದ್ದರಿಂದ ಭಿನ್ನಭಿನ್ನಭಾಷೆಗಳಲ್ಲಿ ಬೇರೆ ಬೇರೆ ಕವಿಗಳು ರಚಿಸಿದ್ದ ಭಾರತ ಕೃತಿಗಳನ್ನು ರಾಜರಾಜನು ಪರಿಚಯ ಮಾಡಿಕೊಳ್ಳಲು ಪ್ರಯತ್ನಿಸಿದ್ದನೆಂದು ತಿಳಿಯಬಹುದು. ಅವುಗಳಲ್ಲಿ ಪಂಪಭಾರತವೂ ಇರಬೇಕು. ಅದು ವ್ಯಾಸಭಾರತವನ್ನೇ ಮೂಲಾಧಾರವಾಗಿ ಹೊಂದಿದ್ದರೂ ಅತ್ಯಂತ ಸಂಕ್ಷೇಪವಾಗಿದ್ದು ಹಲವು ವ್ಯತ್ಯಾಸಗಳಿಂದ ಕೂಡಿರುವುದರಿಂದ ಇನ್ನೂ ವಿಸ್ತಾರವೂ. ವ್ಯಾಸಕೃತಿಯನ್ನೇ ಅನುಸರಿಸುವಂಥಾದ್ದೂ ಆದ ರೀತಿಯಲ್ಲಿ ತೆಲುಗು ಭಾಷೆಯಲ್ಲಿ ಭಾರತವನ್ನು ರಚಿಸಬೇಕೆಂದು ಭಾರತ ಪ್ರೇಮಿಯಾದ ಆ ದೊರೆ ತನ್ನ ಪುರೋಹಿತನಾದ ನನ್ನಯಭಟ್ಟನನ್ನು ಬೇಡಿದನು.

ನನ್ನಯಭಟ್ಟನಿಗೆ ಪರಮಸ್ನೇಹಿತನಾದ ನಾರಾಯಣಭಟ್ಟ ಸಂಸ್ಕೃತ ಪ್ರಾಕೃತಗಳಲ್ಲಿಯೂ ಆಂಧ್ರ ಕರ್ಣಾಟ ಭಾಷೆಗಳಲ್ಲಿಯೂ ಮಹಾಪಂಡಿತ! ಆತನಿಗೆ ರಾಜರಾಜನೇ ಅಗ್ರಹಾರವನ್ನು ಕೊಟ್ಟಂತೆ ನಂದಮಪೂಡಿಯೆಂಬ ಗ್ರಾಮದ ಶಾಸನ ಹೇಳುತ್ತಿದೆ.[2] ಆತನು ನನ್ನಯನಿಗೆ ಭಾರತ ರಚನೆಯ ಕಾರ್ಯದಲ್ಲಿ ವಿಶಿಷ್ಟವಾದ ಸಹಾಯ ನೀಡಿದ್ದಾನೆಂದು ನನ್ನಯನೇ ಹೇಳಿಕೊಂಡಿದ್ದಾನೆ.[3] ಭಾರತ ಯುದ್ಧದಲ್ಲಿ ಪಾರ್ಥನಿಗೆ ನಾರಾಯಣನು ಸಹಾಯ ಮಾಡಿದ ರೀತಿಯಲ್ಲಿ ನಾರಾಯಣಭಟ್ಟನು ನನ್ನಯನಿಗೆ ಭಾರತ ರಚನೆಯಲ್ಲಿ ಸಹಾಯ ನೀಡಿದನಂತೆ! ನಾರಾಯಣಭಟ್ಟ ತನ್ನ ಗೆಳೆಯನಿಗೆ ಕಾವ್ಯಸಾರಥ್ಯವನ್ನು ಮಾಡಿರಬೇಕು. ಅಂದರೆ ಕನ್ನಡ ಭಾಷೆಯಲ್ಲಿಯೂ ಪ್ರಾಕೃತದಲ್ಲಿಯೂ ಇದ್ದಿರಬಹುದಾದ ಭಾರತ ಕೃತಿಗಳನ್ನು ಪರಿಚಯ ಮಾಡಿಸಿ ಮೇರುಸದೃಶವಾದ ಮಹಾಭಾರತ ಕೃತಿಯನ್ನು ಸಂಗ್ರಹಿಸಿ ಅನುವಾದ ಮಾಡಲು ಅಗತ್ಯವಾದ ಮಾರ್ಗದರ್ಶನ ಈ ಕವಿಯಿಂದ ಲಭಿಸಿತೆಂದು ಭಾವಿಸಬಹುದು. ನಾರಾಯಣಭಟ್ಟ ಕೇವಲ ಪಂಡಿತನಷ್ಟೇ ಅಲ್ಲ; ಅವನು ಮಹಾಕವಿಯೂ ಹೌದು. 'ಕವಿ ರಾಜಶೇಖರ'ನೆಂಬ ಬಿರುದು ಅವನಿಗೆ ಇದ್ದಿತಂತೆ!

---

1 ಬಹು ಭಾಷಲ ಬಹು ವಿಧಮುಲ
ಬಹುಜನಮುಲ ವಲನ ವಿನುಚು ಭಾರತ ಬದ್ಧ
ಸ್ಪೃಹುಲಗು ವಾರಿಕಿ ನೆಪ್ಪುಡು
ಬಹುಯಾಗಂಬುಲ ಫಲಂಬು ಪರಮಾರ್ಥ ಮಗುನ್
(ಆದಿ I–17)

2 ನಂದಮಪೂಡಿ ಗ್ರಾಮವೇ ದಾನ ಮಾಡಿದ ಅಗ್ರಹಾರ. ಈ ಶಾಸನ ಬರೆದ ಕವಿ ನನ್ನಯಭಟ್ಟ.

3 ಆದಿ ಪರ್ವ I–25.

ಪಂಪನಿಗೆ ಭಾರತ ಕಥೆ ಮುಖ್ಯವಾಗಿತ್ತು. ಅದರಲ್ಲಿ ಪ್ರಾಸಂಗಿಕವಾಗಿ ಬರುವ ಧರ್ಮಜಿಜ್ಞಾಸೆಗಳಾಗಲಿ, ಕೌರವ ಪಾಂಡವರ ಜೀವನ ಚರಿತ್ರೆಗೆ ಸಂಬಂಧಿಸದ ಪುರಾಣ ಕಥೆಗಳಾಗಲಿ ಅವನಿಗೆ ಮುಖ್ಯವಲ್ಲ. ಆದ್ದರಿಂದ ಅವನು ಅಂಥ ಭಾಗಗಳನ್ನೆಲ್ಲ ಪರಿಹರಿಸಿ ಪ್ರಧಾನವಾದ ಕಥೆಯನ್ನು ಮಾತ್ರ ಹೇಳಿ ಕೃತಕೃತ್ಯನಾಗಿದ್ದಾನೆ. ನನ್ನಯಭಟ್ಟ ಪಂಪನ ಈ ಕಾರ್ಯವಿಧಾನವನ್ನು ಗ್ರಹಿಸಿದ್ದಾನೆ; ಆದರೆ ಪಂಪನಂತೆ ಎಲ್ಲ ಪೂರ್ವಕಥೆಗಳನ್ನೂ ಕಟ್ಟುನಿಟ್ಟಾಗಿ ಕತ್ತರಿಸಿ ಬಿಡಲಾರದವನಾಗಿದ್ದಾನೆ. ಅವನ ದೃಷ್ಟಿಯಲ್ಲಿ ಭಾರತ ಧರ್ಮಶಾಸ್ತ್ರ, ವೇದಾಂತ, ನೀತಿಶಾಸ್ತ್ರ ಮತ್ತು ಬಹು ಪುರಾಣಗಳ ಸಮುಚ್ಚಯ! ಆದ್ದರಿಂದ ನನ್ನಯ ವೇದಧರ್ಮ ನಿರೂಪಣೆಗೆ ಸಹಾಯಕವೆಂದು ತಾನು ಭಾವಿಸಿದ ಭಾಗಗಳನ್ನು ಸಂಗ್ರಹವಾಗಿಯಾದರೂ ಹೇಳಿದ್ದಾನೆ. ಆದರೆ ಆತನಿಗೂ ಭಾರತ ಕಥೆಯೇ ಪ್ರಧಾನ. 'ಪ್ರಸನ್ನ ಕಥಾ ಕಲಿತಾರ್ಥ'ವನ್ನು ಪ್ರತಿಪಾದಿಸುವುದೇ ನನ್ನಯನ ಗುರಿ. ಮೂಲ ಭಾರತದಲ್ಲಿ ನಡುನಡುವೆ ಬರುವ ಅನೇಕ ಪೂರ್ವ ಕಥೆಗಳು, ಧರ್ಮೋಪದೇಶಗಳು, ದೀರ್ಘವಾದ ನೀತಿ ತತ್ವ ಜಿಜ್ಞಾಸೆಗಳು, ಹಲವು ಕಥೆಗಳ ಪುನರುಕ್ತಿಗಳು, ಎಲ್ಲ ಸೇರಿಕೊಂಡು ಮುಖ್ಯ ಕಥೆ ಗೋಜಾಗಿ ಬಿಡುತ್ತದೆ. ಅಪ್ರಸ್ತುತವೆನಿಸುವ ಹಲವು ದೀರ್ಘಪ್ರಸಂಗಗಳ ಮಧ್ಯೆ ಮೂಲಕಥೆಯ ಎಳೆ ಮರೆಯಾಗಿ ಹೋಗುವ ಸಂಭವವೂ ಉಂಟು. ನನ್ನಯ ಆ ಗೋಜು ಗೋಜಾದ ಕಥೆಯನ್ನು ಸರಳವಾಗಿ ಹೇಳಿ ಅದಕ್ಕೆ ವಿಶೇಷವಾದ ಪ್ರಸನ್ನತೆಯನ್ನುಂಟು ಮಾಡಿದ್ದಾನೆ; ಕಥಾ ಸಂದರ್ಭಕ್ಕೆ ಹೊಂದಿಕೊಂಡು ಬರುವ ಅನಿವಾರ್ಯವಾದ ತತ್ವಾರ್ಥಗಳನ್ನು ಮಾತ್ರ ಹೇಳಿದ್ದಾನೆ. ಆದ್ದರಿಂದ ಈತನ ಗ್ರಂಥದಲ್ಲಿ ಕಥೆಯ ನಡೆಗೆ ಎಲ್ಲಿಯೂ ತಡೆಯುಂಟಾಗುವುದಿಲ್ಲ. ಪಂಪನ ಕಾವ್ಯದಲ್ಲಿ ಕಥೆ ಓಡುವ ವೇಗ ಇಲ್ಲಿ ಇಲ್ಲದಿರಬಹುದೇ ಹೊರತು ಅದು ಎಲ್ಲಿಯೂ ಕುಂಟುವುದಿಲ್ಲ.

ಕಾವ್ಯದಲ್ಲಿ ಇರಬೇಕಾದ ಗುಣವಿಶೇಷಗಳನ್ನು ಪ್ರಸ್ತಾಪಿಸುತ್ತ ಪಂಪನು 'ವಿಕ್ರಮಾರ್ಜುನ ವಿಜಯ'ದ ಆರಂಭದಲ್ಲಿ

> "ಲಲಿತ ಪದಂ ಪ್ರಸನ್ನ ಕವಿತಾ ಗುಣಮಿಲ್ಲದ ಪೊಣ್ದು ಪೇಟ್ಟಬೆ
> ಳ್ಗಳ ಕೃತಿ ಬಂಧಮುಂ ಬರೆಹ ಕಾಜರ ಕೈಗಳ ಕೇಡು........."

ಎಂದು ಹೇಳಿಕೊಂಡಿದ್ದಾನೆ. 'ಲಲಿತ ಪದಪ್ರಯೋಗ ಮತ್ತು ಪ್ರಸನ್ನ ಕವಿತಾಗುಣ' ಎಂಬ ಈ ಶಬ್ದಗಳೇ ನನ್ನಯಭಟ್ಟನ 'ಪ್ರಸನ್ನ ಕಥಾ ಕಲಿತಾರ್ಥ ಯುಕ್ತಿ' 'ಅಕ್ಷರರಮ್ಯತ' ಎಂಬ ಮಾತುಗಳಿಗೆ ಪ್ರೇರಣೆಯೊದಗಿಸಿರಬಹುದೆಂದು ತೋರುತ್ತದೆ. ಪಂಪನ ಭಾವನೆಯನ್ನು ಮೆಚ್ಚಿಕೊಂಡು ಹೇಳುವಾಗ ಅವನು ಬಳಸಿದ ಪದಗಳನ್ನು ನನ್ನಯ ಕೊಂಚ ಮಾರ್ಪಡಿಸಿ ಪ್ರಯೋಗಿಸಿರುವಂತೆ ತೋರುತ್ತದೆ. 'ಸಕಳಾರ್ಥ ಸಂಯುತಮಳಂಕೃತಿಯುಕ್ತಿತ್ವಂ' ಎಂಬ ಪಂಪನ ಮಾತುಗಳನ್ನೂ ನನ್ನಯ ಗಮನಿಸಿದ್ದಾನೆ. ನನ್ನಯನ ಭಾರತ ಅವನ ಪ್ರಸನ್ನ ಶೈಲಿಗೆ

ಅಕ್ಷರ ರಮ್ಯತೆಗೆ ಲಲಿತ ಪದಪ್ರಯೋಗ ಪದ್ಧತಿಗೆ ಹೆಸರಾಗಿದೆ. ಆತನು ಪಂಪ ನಂತೆಯೇ ಸಂಸ್ಕೃತ ಶಬ್ದಗಳನ್ನು ನಿರಾತಂಕವಾಗಿ ಬಳಸಿರುವನಾದರೂ ಪಾಂಡಿತ್ಯ ಪ್ರದರ್ಶನಕ್ಕೆ ನಿಂತು ಅಪ್ರಸಿದ್ಧವಾದ ಪದಗಳನ್ನು ಎಲ್ಲಿಯೂ ಬಳಸಿಲ್ಲ.

ನನ್ನಯಭಟ್ಟನು ತನ್ನನ್ನೇ ಕುರಿತು ಹೇಳಿಕೊಳ್ಳುವಾಗ ಭಾರತದ ಅವತಾರಿಕೆಯಲ್ಲಿ 'ಲೋಕಜ್ಞನುಭಯ ಭಾಷಾ ಕಾವ್ಯ ರಚನಾಭಿಶೋಭಿತ' ನೆಂದು ಹೇಳಿಕೊಂಡಿದ್ದಾನೆ. ಅವನ ಉಭಯ ಭಾಷಾ ಪಾಂಡಿತ್ಯವನ್ನು ಕುರಿತು ಮತ್ತೆ ಏನೂ ಹೇಳಬೇಕಾಗಿಲ್ಲ. ತನ್ನ 'ಲೋಕಜ್ಞತೆ' ಕವಿಗೆ ಹೇಳಿಕೊಳ್ಳಬೇಕಾದ ವಿಷಯವೆಂದು ತೋರಿದೆ. ಪಂಪನ 'ಬೆಳಗುವೆನಿಲ್ಲಿ ಲೌಕಿಕಮನ್' ಎಂಬ ಹೇಳಿಕೆಯನ್ನಿಲ್ಲಿ ಸ್ಮರಿಸಿಕೊಳ್ಳಬೇಕು. ನನ್ನಯ 'ಸಂಹಿತಾಭ್ಯಾಸಿ' ಯಾದರೂ ಭಾರತದಲ್ಲಿ ಲೌಕಿಕವೂ ಮುಖ್ಯ ವಿಷಯವೇ ಆಗಿದೆಯೆಂಬುದನ್ನು ಮರೆಯದೆ ತನ್ನ ಲೋಕಶಾಸ್ತ್ರ ಪರಿಚಯವನ್ನು ಬೆಳಗಲು ಸಂಕಲ್ಪಿಸಿದ್ದಾನೆ!

ವ್ಯಾಸನ ಜನ್ಮಕಥೆಯನ್ನು ಹೇಳುವಾಗ ಪಂಪನು 'ನೀಲಾಂಬುದಶ್ಯಾಮನುಂ ಕನಕಪಿಂಗಳ ಜಟಾಕಳಾಪನುಂ ದಂಡಕಪಾಳ ಹಸ್ತನುಂ ಕೃಷ್ಣ ಮೃಗತ್ವಕ್ಪರಿಧಾನನುಮಾಗಿ ಪುಟ್ಟುವುದುಂ' ಎಂದು ವರ್ಣಿಸಿದ್ದಾನೆ. ಅದೇ ಸಂದರ್ಭದಲ್ಲಿ ನನ್ನಯ ಭಟ್ಟನು 'ಕೃಷ್ಣದ್ವೈಪಾಯನುಂಡುನು ಗೃಷ್ಣಾಜಿನ ಪರಿಧಾನ ಕಪಿಲ ಜಟಾಮಂಡಲ ದಂಡ ಕಮಂಡಲು ಮಂಡಿತುಡೈ ತಲ್ಲಿ ಮುಂದರ ನಿಲಿಚಿನ' ಎಂದು ವರ್ಣಿಸಿದ್ದಾನೆ. ಈ ಎರಡು ವರ್ಣನೆಗಳಲ್ಲಿಯೂ ಇರುವ ಶಬ್ದ ಸಾದೃಶ್ಯ ಗಮನಾರ್ಹವಾದದ್ದು. ಮುಂದೆ ಸತ್ಯವತಿಯು 'ಕುರುವಂಶೋದ್ವಾಹನಾರ್ಥ' ವಾಗಿ ವ್ಯಾಸನನ್ನು ಸ್ಮರಿಸಿ ಬರಮಾಡಿಕೊಂಡಾಗ ವ್ಯಾಸನ ಮೂರ್ತಿಯನ್ನು ನನ್ನಯಭಟ್ಟ ಹೀಗೆ ವರ್ಣಿಸಿದ್ದಾನೆ:

> ನೀಲಗಿರೀಂದ್ರಶೃಂಗಮುನ ನಿರ್ಮಲಮ್ಮೈನ ಸುವರ್ಣವಲ್ಲರೀ
> ಜಾಲಮುವೋಲೆ ಪಿಂಗಳವಿಶಾಲ ಜಟಾಚಯುವೊಪ್ಪಗಾ ವಚ
> ಶ್ರೀಲಲಿತುಂಡರಿವಚ್ಚಿ ನಿಲಿಚೆನ್ ಹರಿನೀಲವಿನೀಲ ವಿಗ್ರಹಾ
> ರಾಳರುಚುಲ್ ವೆಲುಂಗನ ಬರಾಶರು ಸೂನುಡು ತಲ್ಲಿ ಮುಂದಟನ್[1]

ಆ ಸನ್ನಿವೇಶದಲ್ಲಿ ಸಂಸ್ಕೃತ ಭಾರತದಲ್ಲಿ ವ್ಯಾಸಮೂರ್ತಿ ವರ್ಣನೆ ಇಲ್ಲ. ಅಲ್ಲಿ:

> ಕೃಷ್ಣದ್ವೈಪಾಯನಂ ಕಾಲೀ ಚಿಂತಯಾಮಾಸ ವೈ ಮುನಿಮ್
> ಸಾ ವೇದಾನ್ ವಿಬ್ರುವನ್ ಧೀಮಾನ್ ಮಾತುರ್ವಿಜ್ಞಾಯ ಚಿಂತಿತಮ್
> ಪ್ರಾದುರ್ಬಭೂವ ವಿದಿತಃ ಕ್ಷಣೇನ ಕುರುನಂದನ!

---

[1] ನೀಲಗಿರೀಂದ್ರ ಶೃಂಗದ ಮೇಲೆ ನಿರ್ಮಲವಾದ ಸುವರ್ಣವಲ್ಲ
ರೀಜಾಲದಂಥ ಪಿಂಗಳ ವಿಶಾಲ ಜಟಾಚಯ ವೊಪ್ಪುತ್ತಿರಲು
ವಚಶ್ರೀ ಲಲಿತನಾದ ಪರಾಶರಸೂನು ಹರಿ ನೀಲ ವಿನೀಲ ವಿಗ್ರ
ಹದ ವಕ್ರಕಾಂತಿ ಬೆಳಗುತ್ತಿರಲು ತಾಯಿಯ ಮುಂದೆ ಬಂದು ನಿಂತನು.

ಎಂದಿಷ್ಟೇ ಇದೆ. ಮೂಲದಲ್ಲಿಲ್ಲದೆ ಪಂಪಭಾರತದಲ್ಲಿ ಮಾತ್ರ ಇರುವ ವರ್ಣನೆ ನನ್ನಯನ ಕಾವ್ಯದಲ್ಲಿಯೂ ಕಾಣಿಸಿಕೊಂಡಿರುವುದರಿಂದ ನನ್ನಯನಿಗೆ ಪಂಪ ಭಾರತದ ಪರಿಚಯವಿದ್ದಿತೆಂದು ಭಾವಿಸುವುದು ತಪ್ಪೆನಿಸಲಾರದು.

ಇನ್ನು ಹಲವು ವರ್ಣನಾ ಭಾಗಗಳಲ್ಲಿಯೂ ಪಂಪ ನನ್ನಯರ ಕಾವ್ಯಗಳಲ್ಲಿ ವಿಶೇಷವಾದ ಶಬ್ದಸಾದೃಶ್ಯ ಗೋಚರವಾಗಿದೆ. ಯಮುನಾ ತೀರದ ಅಡವಿ 'ಸರಳ ತಮಾಳ ತಾಳ ಹರಿಚಂದನ ನಂದನ ಭೂಜರಾಜಿಯಿಂ '[1] ಕೂಡಿದ್ದಿತೆಂದು ಪಂಪನು ಹೇಳಿದ್ದರೆ ನನ್ನಯಭಟ್ಟ ಇಂದ್ರಪ್ರಸ್ಥಪುರದ ಉದ್ಯಾನವು 'ಸರಳತಮಾಲ ತಾಳ ಹರಿಚಂದನ ಚಂಪಕ ನಾರಿಕೇಳಾ'ದಿ[2] ವೃಕ್ಷಗಳಿಂದ ತುಂಬಿದ್ದಿತೆಂದು ಹೇಳಿದ್ದಾನೆ. 'ಸರಳತಮಾಲ ತಾಲ ಹರಿಚಂದನ' ಉಭಯಕವಿಗಳಿಗೂ ಪ್ರಿಯವಾಗಿದೆ!

> 'ಏಲಾಲವಂಗಲವಲೀ
> ವೇಲಾವನ ಭೂಮಿಯೊಳ್.........[3]

ಎಂಬುದು ಪಂಪನ ಒಂದು ಕಂದ ಪದ್ಯದ ಭಾಗ.

> 'ಏಲಾವನ ರಮ್ಯಮುಲಗು
> ವೇಲಾವನಮುಲನು ಬವನ ವಿಚಲದ್ವೀಚೀ' [4]

ಎಂಬುದು ನನ್ನಯನ ಕವಿತೆ. ಅದೂ ಕಂದ ಪದ್ಯವೇ. ಈ ಎರಡು ಪದ್ಯಗಳಲ್ಲಿನ ಶಬ್ದಸಾದೃಶ್ಯ ಗಮನಾರ್ಹವಾದದ್ದು. ಮೇಲಿನ ಕಂದ ಪದ್ಯ ಪಂಪನ ಆದಿ ಪುರಾಣದ್ದು; ಭಾರತದಲ್ಲಿನದಲ್ಲ. ಆದ್ದರಿಂದ ಆಂಧ್ರಭಾರತ ಕರ್ತನಾದ ನನ್ನಯ ಭಟ್ಟ 'ಜಿನಸಮಯ ದೀಪಕ' ನೆನಿಸಿದ ಪಂಪನು ರಚಿಸಿದ ತೀರ್ಥಂಕರ ಚರಿತ್ರೆ ಯನ್ನೂ ಅವಲೋಕಿಸಿದ್ದನೆಂದು ತಿಳಿಯಬೇಕಾಗಿದೆ.

ಪಂಪನಿಗೆ ಭಟ್ಟಾರಕನೆಂಬ ಶಬ್ದ ಬಹಳ ಪ್ರಿಯವಾದದ್ದು. ಅವನು ಅದನ್ನು ವ್ಯಾಸ ಯಮಧರ್ಮರಾಯರಿಗೂ ಅನ್ವಯಿಸಿದ್ದಾನೆ. ನನ್ನಯನೂ ಈ ಮಾತನ್ನು ಬಳಸಿದ್ದಾನೆ! 'ವ್ಯಾಸಭಟ್ಟಾರಕುಡುನ್ನ ದಿಕ್ಕುನಕು ಮ್ರೊಕ್ಕಿ' (ಆದಿಪರ್ವ IV-239) 'ಅಷ್ಟಶೋಭೆ' ಎಂಬ ಮಾತು ಪುರಾಲಂಕರಣವೆಂಬ ಅರ್ಥದಲ್ಲಿ ಪಂಪನ ಭಾರತದಲ್ಲಿ ಹಲವು ಸಲ ಬಂದಿದೆ. (III-2 ವ, V-22) ನನ್ನಯನೂ ಆದಿ ಪರ್ವದಲ್ಲಿ ಒಂದು ಕಡೆ 'ಅಷ್ಟಶೋಭನಂಬು ಚೇಯಿಂಚಿ' ಎಂದು ಆ ಮಾತನ್ನು ಬಳಸಿದ್ದಾನೆ. ಮೂಲಗ್ರಂಥದಲ್ಲಿ ಆ ಮಾತು ಇಲ್ಲ.

---

[1] ಪಂಪ ಭಾರತ 6–52
[2] ಆಂಧ್ರ ಭಾರತ ಆದಿಪರ್ವ 8–8
[3] ಆದಿಪುರಾಣ 13–2
[4] ಆಂಧ್ರ ಭಾರತ ಆದಿಪರ್ವ 8–37

ಅಸ್ತ್ರಪ್ರದರ್ಶನದಲ್ಲಿ ಭೀಮಾರ್ಜುನರ ಶಸ್ತ್ರಪಾಂಡಿತ್ಯವನ್ನೂ ಅವರ ಪರಾಕ್ರಮವನ್ನೂ ಕಂಡು ಸಹಿಸಲಾರದೆ ದುರ್ಯೋಧನನು ಕರ್ಣನೊಡನೆ ಮಂತ್ರಾಲೋಚನೆ ಮಾಡಿ ಪಾಂಡವರನ್ನು 'ಉಪಾಂಶುವಧೆ' ಮಾಡಿಸಬೇಕೆಂದು ನಿರ್ಣಯಿಸಿ ಅದನ್ನು ಧೃತರಾಷ್ಟ್ರನ ಸಂಗಡ ಹೇಳಿದನೆಂದು ಪಂಪ ವರ್ಣಿಸಿದ್ದಾನೆ.

> 'ವಿಕ್ರಮಾರ್ಜುನಂ ಬಿಲ್ಗೊಳಲುಂ ಭೀಮಸೇನಂ ಗದೆಗೊಳಲು
> ಮಾಂಪುದರಿದುಪಾಂಸುವಧೆ ಕೆಯ್ಗೆ ಮಾಡುವುದುತ್ತಮಪಕ್ಷಂ'
>
> I–290 (ವ)

'ಉಪಾಂಸುವಧೆ' 'ಉಪಾಂಶುವಧೆ' ಎಂಬ ಶಬ್ದದ ತದ್ಭವ. ಶಸ್ತ್ರಪ್ರದರ್ಶನಕ್ಕಿಂತ ಮೊದಲೇ ದುರ್ಯೋಧನನು ತನ್ನ ಮಿತ್ರರೊಡನೆ ಆಲೋಚಿಸಿ ಭೀಮನನ್ನು ಪರಿಹರಿಸಲು ಉಪಾಂಶುವಧೆಯೇ ಸರಿಯೆಂಬ ನಿರ್ಣಯಕ್ಕೆ ಬಂದನೆಂದು ನನ್ನಯ ಹೇಳಿದ್ದಾನೆ: 'ಉಪಾಂಶುವಧಚೇಸಿ ಮಧ್ಯಮು ಮದೋದ್ಧತುಂ ಜಂಪಿ' (ಆದಿಪರ್ವ V–168), ಸಂಸ್ಕೃತ ಭಾರತದಲ್ಲಿ 'ಉಪಾಂಶುವಧೆ' ಯೆಂಬ ಶಬ್ದವಿಲ್ಲ; ಪಂಪನಲ್ಲಿ ಇದೆ. ನನ್ನಯ ಈ ಪದವನ್ನು ಪಂಪಭಾರತದಿಂದಲೇ ಪಡೆದಿರಬಹುದೆಂಬ ಒಂದು ಊಹೆಯಿದೆ.

ಒಂದು ಪದ ಅಥವಾ ಪದಪುಂಜ ಉಭಯಕವಿ ಸಾಮಾನ್ಯವಾಗಿದ್ದ ಮಾತ್ರದಿಂದ ಒಬ್ಬ ಕವಿ ಇನ್ನೊಬ್ಬನಿಗೆ ಋಣಿಯೆಂದು ಭಾವಿಸುವುದು ಸಮನಾಗಲಾರದು. ಆದರೆ ಹಿಂದೆ ನಾವು ಗಮನಿಸಿರುವಂತೆ ನನ್ನಯನ ಪರ್ವಾನುಕ್ರಮಣಿಕೆಗೂ ಪಂಪ ಭಾರತದ ಕೊನೆಯಲ್ಲಿ ಕೊಟ್ಟಿರುವ ಅನುಕ್ರಮಣಿಕೆಗೂ ಇರುವ ಅಸಾಧಾರಣ ಹೋಲಿಕೆ, ಭಾರತದ ಹಲವು ಭಾಗಗಳನ್ನು ಸಂಗ್ರಹಿಸುವಾಗ ನನ್ನಯ ಪಂಪನ ಮಾರ್ಗವನ್ನೇ ಅನುಸರಿಸಿರುವುದು, ಪ್ರತಿ ಆಶ್ವಾಸದ ಆರಂಭ ಅಂತ್ಯಗಳಲ್ಲಿ ಪಂಪನಂತೆಯೇ ನನ್ನಯನೂ ಕೃತಿಪತಿಯ ಸ್ತೋತ್ರ ಮಾಡಿರುವುದು, ಇವನ್ನೆಲ್ಲ ಗಮನಿಸುವಾಗ ವ್ಯಾಸಭಾರತದಲ್ಲಿರದೆ ಪಂಪನಲ್ಲಿರುವ ಹಲವು ಪದಪುಂಜಗಳನ್ನು ನನ್ನಯ ಬಳಸಿರುವುದು ಅವನು ಪಂಪನ ಕವಿತೆಗಳಿಂದ ಪ್ರಭಾವಿತನಾಗಿರುವನೆಂಬುದನ್ನು ಖಚಿತಪಡಿಸುತ್ತದೆ.

ನನ್ನಯಭಟ್ಟ ಮಹಾ ಕವಿ. ಅವನ ಪಾಂಡಿತ್ಯ ಅಗಾಧವಾದದ್ದು. ಅವನು ಸಂಸ್ಕೃತ ಭಾರತವನ್ನು ಯಥಾತಥವಾಗಿ ಅನುವಾದ ಮಾಡದೆ ಒಂದು ಸ್ವತಂತ್ರ ಗ್ರಂಥದಂತೆಯೇ ರಚಿಸಿದ್ದಾನೆ. ಅವನು ಪಂಪನ ಕೃತಿಗಳನ್ನು ನೋಡಿ ಆ ಕವಿಯ ಹಿರಿಮೆಯನ್ನು ಮನಗಂಡು ಮೆಚ್ಚಿ ಆತನ ಕವಿತಾಮಾರ್ಗವನ್ನು ಅನುಸರಿಸಿರುವುದು ಆತನ ಕಾವ್ಯರಸಿಕತೆಗೆ ಸಾಕ್ಷಿಯಾಗಿದೆ.

# ಕನ್ನಡ ಅಧ್ಯಯನ ಸಂಸ್ಥೆ

## ಪಠ್ಯಪುಸ್ತಕಮಾಲೆ

1. ಕನ್ನಡ ಲಿಪಿಯ ಉಗಮ ಮತ್ತು ವಿಕಾಸ — ಎ. ವಿ. ನರಸಿಂಹಮೂರ್ತಿ
2. ಸಂಕ್ಷಿಪ್ತ ವಿಶ್ವ ಇತಿಹಾಸ — ಆರ್. ಜಿ. ಶಿವಣ್ಣ, ಎಚ್. ರಾಮಲಿಂಗಪ್ಪ
3. ಭಾರತೀಯ ಸಂಸ್ಕೃತಿ ಪರಂಪರೆ — ಹುಮಾಯೂನ್ ಕಬೀರ್
4. ಹೊರೆಸನ ಸಾಹಿತ್ಯ ವಿಮರ್ಶೆ — ಎನ್. ಬಾಲಸುಬ್ರಮಣ್ಯ
5. ಗದ್ಯ ವಿಹಾರ — ಸಂಪಾದಿತ
6. ಕರ್ನಾಟಕದ ಅರಣ್ಯ ವೃಕ್ಷಗಳು — ಎಸ್. ಎನ್. ರಾಮಸ್ವಾಮಿ
7. ಭಾರತೀಯ ಸಾಮಾಜಿಕ ಸಂಸ್ಥೆಗಳು — ಎಂ. ನಂಜಮ್ಮಣ್ಣಿ
8. ಮಾನವನ ಉಗಮ ಮತ್ತು ವಿಕಾಸ — ಎಲ್. ಸಿದ್ದವೀರೇಗೌಡ
9. ಪ್ರಾಕೃತಿಕ ಭೂಗೋಳ — ಜಾರ್ಜ್ ಕುರಿಯನ್ ಮತ್ತು ಪರಾಖ್
10. ಮನೋವಿಜ್ಞಾನ ಕೋಶ — ಬಿ. ಕೃಷ್ಣನ್
11. ವರ್ಧಾ ಯೋಜನೆ — ಕೆ. ಎಲ್. ಶ್ರೀಮಾಲಿ
12. ಮೋಳಿಗೆ ಮಾರಯ್ಯನ ವಚನಗಳು — ಸಂ. ಬಿ. ಎಸ್. ಸಣ್ಣಯ್ಯ
13. ಹಣದ ಸ್ಥೂಲ ವಿವರಣೆ — ಕ್ರಾಥರ್
14. ಮನೋವಿಶ್ಲೇಷಣೆ ನಡೆದು ಬಂದ ದಾರಿ — ಲೂಸಿ ಫ್ರೀಮನ್ ; ಮಾರ್ವಿನ್‌ಸ್ಮಾಲ್
15. ಲೆಕ್ಕಾಚಾರ ಶಾಸ್ತ್ರ — ಸಿ. ಎಂ. ಮುನಿರಾಮಪ್ಪ
16. ಜೋಡಿ ದಾಖಲೆ ಪದ್ಧತಿ – ಲೆಕ್ಕಬರಹ — ಡಿ. ಎನ್. ಶ್ರೀನಿವಾಸಮೂರ್ತಿ
17. ಬೀಜರೇಖಾಗಣಿತ — ಸಿ. ಎನ್. ಶ್ರೀನಿವಾಸೈಯ್ಯಂಗಾರ್
18. ಆರ್ಥಿಕ ಚಿಂತನೆಯ ಬೆಳವಣಿಗೆ — ಬಿ. ಎಂ. ಕುಮಾರಸ್ವಾಮಿ
19. ಸಾಮಾಜಿಕ ಒಪ್ಪಂದ — ಜೆ. ಜೆ. ರೂಸೋ
20. ಆಧುನಿಕ ಭಾರತ — ಪಿ. ಮುದ್ದಾಚಾರಿ
21. ಹಿಂದೂ ಜೀವನ ದರ್ಶನ — ಎಸ್. ರಾಧಾಕೃಷ್ಣನ್
22. ಧರ್ಮ ಮತ್ತು ಸಮಾಜ — ಎಸ್. ರಾಧಾಕೃಷ್ಣನ್
23. ಭಾರತೀಯ ದರ್ಶನ — ಬಲದೇವ ಉಪಾಧ್ಯಾಯ
24. ಇಂಡಿಯಾ ದೇಶದ ಸಾರ್ವಜನಿಕ ಆಯವ್ಯಯ — ಆರ್. ಎನ್. ಭಾರ್ಗವ
25. ಪಂಪ-ನನ್ನಯ : ಒಂದು ಸಮೀಕ್ಷೆ — ಕೆ. [illegible] [illegible]ರಾಮಪ್ಪ